# ಸಾಮವೇದ ಸಂಹಿತೆ

ಋಕ್, ಪದ, ಗಾನ, ಸಾಯಣಭಾಷ್ಯ
ಕನ್ನಡ ಭಾವಾನುವಾದ ಪದ್ಯಾನುವಾದ ಸಹಿತ

## ಸಂಪುಟ ೧




ದ್ರಾಹ್ಯಾಯಣ ಪ್ರತಿಷ್ಠಾನ ಪ್ರಕಾಶನ

# ಸಾಮವೇದ ಸಂಹಿತೆ

ಋಕ್, ಪದ, ಗಾನ, ಸಾಯಣಭಾಷ್ಯ
ಕನ್ನಡ ಭಾವಾನುವಾದ ಪದ್ಯಾನುವಾದ ಸಹಿತ

## ಸಂಪುಟ ೧



ದ್ರಾಹ್ಯಾಯಣ ಪ್ರತಿಷ್ಠಾನ ಪ್ರಕಾಶನ

# ಸಾಮವೇದ ಸಂಹಿತೆ

**ಋಕ್, ಪದ, ಗಾನ, ಸಾಯಣಭಾಷ್ಯ**
**ಕನ್ನಡ ಭಾವಾನುವಾದ ಪದ್ಯಾನುವಾದ ಸಹಿತ**

## ಸಂಪುಟ ೧

*ಸಂಪಾದಕರು :*

## ದ್ರಾಹ್ಯಾಯಣ ಪ್ರತಿಷ್ಠಾನ

೨೦೦೨




*ಈ ಗ್ರಂಥದ ಪ್ರಕಟಣೆಗಾಗಿ :*

**ಹಂಸಾಶ್ರಮದ ಪೂಜ್ಯ ಸ್ವಾಮಿ ವಿರಾಜೇಶ್ವರರು**
ಆರು ಸಹಸ್ರರೂಪಾಯಿಗಳನ್ನೂ,
ಗೆಳೆಯರಾದ **ವೇದಾಭಿಮಾನಿಗಳೊಬ್ಬರು**
ಹತ್ತು ಸಹಸ್ರರೂಪಾಯಿಗಳನ್ನೂ,
ಸಮೀಪಬಂಧುಗಳಾದ **ಶ್ರೀ ಕಡಬಾಸುಬ್ರಹ್ಮಣ್ಯರವರು**
ಹತ್ತು ಸಹಸ್ರರೂಪಾಯಿಗಳನ್ನೂ,
**ಶ್ರೀ ಕೆ.ಎನ್.ಪ್ರಭಾಕರರವರು** ಅವರ ತಂದೆಯವರಾದ
ದಿವಂಗತ **ಶ್ರೀ ಕೆ.ನರಸಿಂಹಮೂರ್ತಿಗಳವರ** ಹೆಸರಿನಲ್ಲಿ
ಹತ್ತು ಸಹಸ್ರರೂಪಾಯಿಗಳನ್ನೂ ಉದಾರವಾಗಿ ದಾನಮಾಡಿರುತ್ತಾರೆ.

# ಸಾಮವೇದ ಸಂಹಿತೆ

## ಪ್ರಥಮ ಸಂಪುಟ


ಪ್ರಕಾಶಕರು :-

**ದ್ರಾಹ್ಯಾಯಣ ಪ್ರತಿಷ್ಠಾನ**

ನಂ. ೮೦೧, ೩ ನೆಯ ಮುಖ್ಯರಸ್ತೆ, ೪ನೆಯ ಬ್ಲಾಕು,
ರಾಜಾಜಿನಗರ, ಬೆಂಗಳೂರು - ೧೦. ದೂ : ೩೩೫೩೨೮೮

ಪ್ರಥಮ ಮುದ್ರಣ ೨೦೦೨
೧,೦೦೦ ಪ್ರತಿಗಳು





ಮುಖಪುಟ ವಿನ್ಯಾಸಕರು :-

**ಶ್ರೀ. ಕೆ. ಟಿ. ಅನಂತ**

ನಂ. ೮೫೨ , ೧ 'ಬಿ' ಮುಖ್ಯರಸ್ತೆ, ೨ ನೆಯ ಹಂತ,
ಗಿರಿನಗರ, ಬೆಂಗಳೂರು - ೮೫.

ಡಿ. ಟಿ. ಪಿ. :-

**ಓಮ್ ಕಾಮ್ಪ್ ಸೆಂಟರ್**

ನಂ. ೪೩೪, ೫೬ ನೆಯ ಅಡ್ಡರಸ್ತೆ, ೩ ನೆಯ ಬ್ಲಾಕು,
ರಾಜಾಜಿನಗರ, ಬೆಂಗಳೂರು - ೧೦.

ಮುದ್ರಕರು :-

**ಕೈಪು ಶೇಷಾದ್ರಿ**

ವೇದಭಾಷ್ಯ ಪ್ರಕಾಶನ ಸಮಿತಿ
ಬೆಂಗಳೂರು - ೫೬೦ ೦೦೪.

**ಬೆಲೆ : ರೂ. ೨೨೦/-**

# ದ್ರಾಹ್ಯಾಯಣ ಪ್ರತಿಷ್ಠಾನ - ಪರಿಚಯ

ಸಾಮವೇದ ಅಧ್ಯಯನ ಅಧ್ಯಾಪನ ಇನ್ನೂ ಹೆಚ್ಚಾಗಿ ಬೆಳೆಯಲು ಅನುಕೂಲವಾಗುವಂತೆ ಸಾಮವೇದ ಗ್ರಂಥಗಳನ್ನು ಕನ್ನಡದಲ್ಲಿ ಸಂಪಾದಿಸಿ ಯಥಾಶಕ್ತಿ ಪ್ರಕಟಿಸಿ ಪ್ರಚಾರಮಾಡಬೇಕೆಂಬ ಅಭಿಲಾಷೆಯುಳ್ಳ ಸಾಮವೇದಾಧ್ಯಯನ ಆಸಕ್ತರಿಂದ 'ದ್ರಾಹ್ಯಾಯಣ ಪ್ರತಿಷ್ಠಾನ' ವೆಂಬ ಸಂಸ್ಥೆ ರೂಪುಗೊಂಡಿದೆ. ಸಾಮವೇದದಲ್ಲಿ ಆಸಕ್ತಿ ಇರುವವರೆಲ್ಲರೂ ಯಾವಶುಲ್ಕವೂ ಇಲ್ಲದೆ ಈ ಸಂಸ್ಥೆಯ ಸದಸ್ಯರಾಗಿ ಯಥಾಮತಿ ವೇದಪುರುಷನ ಸೇವೆ ಸಲ್ಲಿಸಬಹುದು.

ಕನ್ನಡ ನಾಡಿನಲ್ಲಿ ಪರಂಪರೆಯಿಂದ ಅಸ್ತಿತ್ವದಲ್ಲಿರುವ ಸಾಮವೇದದ ಓಲೇಗರಿ ಹಾಗೂ ಹಸ್ತ ಲಿಖಿತ ಗ್ರಂಥಗಳು ನಾಗರಿ ಲಿಪಿಯಲ್ಲಿರುವುದೇ ಒಂದು ವೈಶಿಷ್ಟ್ಯ. ಈಗೀಗ ಪ್ರಯೋಗ ಕರ್ತೃಗಳು ಕೆಲವರು ತಮ್ಮ ಸ್ವಂತ ಉಪಯೋಗಕ್ಕಾಗಿ ಕನ್ನಡಲಿಪಿಯಲ್ಲಿ ಬರೆದಿಟ್ಟುಕೊಂಡಿರುವ ಪೂರ್ವಾಪರ ಪ್ರಯೋಗ ಗ್ರಂಥಗಳು ಸಂಕ್ಷಿಪ್ತವಾಗಿದ್ದು ವೈದಿಕ ಪ್ರಕ್ರಿಯೆಗಳ ಪರಿಚಯವಿಲ್ಲದ ಹೊಸದಾಗಿ ಕಲಿಯ ಬಯಸುವವರಿಗೆ ಉಪಾದೇಯ ವಾಗಿಲ್ಲ. ಸಾಮವೇದದ ಸಮಗ್ರ ಅಧ್ಯಯನ ಅಧ್ಯಾಪನ ಮಾಡಲಾಶಿಸುವವರು ದೇವನಾಗರಿ ಲಿಪಿಯಲ್ಲಿರುವ/ ಗ್ರಂಥಾಕ್ಷರದಲ್ಲಿರುವ ಮುದ್ರಿತ ಗ್ರಂಥಗಳನ್ನೇ ಆಶ್ರಯಿಸಬೇಕಾಗಿದೆ. ಈ ಗ್ರಂಥಗಳು ಕನ್ನಡಲಿಪಿಯಲ್ಲಿ ಪ್ರಕಟವಾಗಿಲ್ಲದಿರುವುದೂ ಕನ್ನಡಿಗ ಸಾಮವೇದಿಗಳು ಅಧ್ಯಯನ ಅಧ್ಯಾಪನಗಳಲ್ಲಿ ಉತ್ಸಾಹ ತಾಳದಿರುವುದಕ್ಕೆ ಒಂದು ಕಾರಣವಾಗಿದೆ. ಈ ಕೊರತೆಯನ್ನು ತುಂಬಬೇಕೆಂಬುದೇ ದ್ರಾಹ್ಯಾಯಣ ಪ್ರತಿಷ್ಠಾನದ ಆಶಯವಾಗಿದೆ.

ಈ ಹಿನ್ನೆಲೆಯಲ್ಲಿ ಕನ್ನಡನಾಡಿನಲ್ಲಿ ಸಿಗುವ ಓಲೇಗರಿ ಹಾಗೂ ಹಸ್ತಲಿಖಿತ ಸಾಮವೇದ ಗ್ರಂಥಗಳನ್ನು ಶೇಖರಿಸಿ ಪಾಠಾಂತರಗಳನ್ನು ಗುರುತಿಸಿ, ಕಂಡು ಬರುವ ವ್ಯತ್ಯಾಸಗಳನ್ನು ವಿದ್ವಾಂಸರ ಗಮನಕ್ಕೆ ತಂದು, ಅವರ ಸಲಹೆಯಂತೆ ಆಧಾರ ಗ್ರಂಥಗಳ ಸ್ಥಳ ನಿರ್ದೇಶಿಸಿ ಖಚಿತ ಪಾಠವನ್ನು ನಿರ್ಧರಿಸಲಾಗುತ್ತದೆ. ನಿರ್ಧರಿಸಲಾಗದ ಅಂಶಗಳು ಆಯಾಗ್ರಂಥಗಳ ಪರಿಶಿಷ್ಟದಲ್ಲಿ ಚರ್ಚೆಗಾಗಿ ಮಂಡಿಸಲ್ಪಡುತ್ತವೆ. ಈ ಪೂರ್ವಸಿದ್ಧತೆಯ ನಂತರ ವೈದಿಕ ಪ್ರಕ್ರಿಯೆಗಳ ಆನುಪೂರ್ವಿಯ ಪರಿಚಯವಿಲ್ಲದೆಯೂ ಸಾಮವೇದ

ಪ್ರಯೋಗಗಳನ್ನು ಕಲಿಯಬಯಸುವವರಿಗೆ ಅನುಕೂಲವಾಗುವಂತೆ ಮನ್ತ್ರ ತನ್ತ್ರ ಅನುಷ್ಠಾನ ಕ್ರಮಗಳನ್ನೂ, ಯಥಾಮತಿ ಸಂಕ್ಷಿಪ್ತವಾಗಿ ಮನ್ತ್ರಾರ್ಥಗಳನ್ನೂ, ಪ್ರತೀಕಗಳ ಪರಿಚಯವನ್ನೂ, ಸೂಕ್ತ ಟಿಪ್ಪಣಿಗಳನ್ನೂ ಕನ್ನಡದಲ್ಲಿ ಬರೆದು ಯಥಾನುಕೂಲವಾಗಿ ಪ್ರಕಟಿಸುವ ಕೈಂಕರ್ಯವನ್ನು ದ್ರಾಹ್ಯಾಯಣ ಪ್ರತಿಷ್ಠಾನ ನೆರವೇರಿಸುತ್ತಿದೆ.

ಹೀಗೆ ೧೯೯೬ರಲ್ಲಿ ಪ್ರಕಟವಾದ ಡೆಮಿ ೧/೮ ೧೨೭ ಪುಟಗಳ **'ಸಾಮವೇದ ಪರಿಚಯ'** ಗ್ರಂಥದ ನಂತರ ೩೫೫ ಪುಟಗಳ **'ನಿತ್ಯಾಹ್ನಿಕ, ಉತ್ಸರ್ಜನ, ಉಪಾಕರ್ಮ'**, ೧೦೦ ಪುಟಗಳು **'ಸಂಧ್ಯಾನುಷ್ಠಾನ'**, ೧೬೪ ಪುಟಗಳ **'ಶ್ರಾದ್ಧಪ್ರಯೋಗ'**, ೩೦೨ ಪುಟಗಳ **'ಅಪರಪ್ರಯೋಗ'**, ೫೩೨ ಪುಟಗಳ **'ಪೂರ್ವಪ್ರಯೋಗ'** ಗ್ರಂಥಗಳನ್ನು ನಮ್ಮ ಸಮಾಜದ ಎಲ್ಲಾ ಸ್ತರದ ಜನರೂ ಶ್ರದ್ಧಾಭಕ್ತಿ ಆದರೋತ್ಸಾಹಗಳಿಂದ ಬರಮಾಡಿಕೊಂಡು ಸಾಮವೇದದ ಬಗೆಗೆ ಒಲವು ತೋರಿಸಿದ್ದಾರೆ.

ಈ ಮೇಲಿನ ಗ್ರಂಥಗಳಿಗೆಲ್ಲಾ ಮೂಲವಾದ ಮಿಗಿಲಾದ ವೇದವೃಕ್ಷದ ಪುಷ್ಪವೆನಿಸಿರುವ **'ಸಾಮವೇದ ಸಂಹಿತೆ'** ಯನ್ನು ೫೦೦ ಪುಟಗಳ ಐದು ಸಂಪುಟಗಳಲ್ಲಿ ತರಬೇಕೆಂಬ ಆಶಯದಿಂದ ಇದೀಗ ಆಗ್ನೇಯ ಕಾಂಡವನ್ನೊಳಗೊಂಡಿರುವ ಪ್ರಥಮ ಸಂಪುಟವನ್ನು ನಮ್ಮ ಸಮಾಜಕ್ಕೆ ಅರ್ಪಿಸಲಾಗಿದೆ.

*ಛಾಂ. ಉ.೫.೧೦.೬-೮, ಬೃ. ಉ. ೬.೨.೧೬*, **'ಯಜ್ಞಾರ್ಥಾತ್ ಕರ್ಮಣೋನ್ಯತ್ರ...** **। 'ಕರ್ಮಬ್ರಹ್ಮೋದ್ಭವಂ ವಿದ್ಧಿ.... । 'ಕರ್ಮಣೈವ ಹಿ ಸಂಸಿದ್ಧಿಮ್...'** *-ಭ.ಗೀ. ೩.೯,೧೫.೨೦ ॥* ಇತ್ಯಾದಿ ಉಪದೇಶಗಳನ್ನು ಸ್ಮರಿಸಿ, ಮನ್ತ್ರಾರ್ಥಗಳನ್ನು ತಿಳಿದು, ಶ್ರದ್ಧಾ ಭಕ್ತಿಗಳಿಂದ ವಿಧ್ಯುಕ್ತವಾಗಿ ಆಚರಿಸುವ ಕರ್ಮ ವೀರ್ಯವತ್ತಾಗಿ ಸಮೃದ್ಧ ಫಲವನ್ನು ಪಡೆಯಲು ಕರ್ತೃವಿಗೆ ನೆರವಾಗುವುದೇ ದ್ರಾಹ್ಯಾಯಣ ಪ್ರತಿಷ್ಠಾನದ ಧ್ಯೇಯವಾಗಿದೆ.

ಟಿ. ಗೌರೀಪತಿ

**ಸಾಮವೇದೋಪಾಕರ್ಮ**
**ಶ್ರೀ ಚಿತ್ರಭಾನು ಸಂವತ್ಸರ**
**೯-೯-೨೦೦೨**

**ಅಧ್ಯಕ್ಷರು**
**ದ್ರಾಹ್ಯಾಯಣ ಪ್ರತಿಷ್ಠಾನ**
**ಬೆಂಗಳೂರು**

# ಸ್ವಸ್ತಿವಾಚನ

ಕನ್ನಡನಾಡಿಗೂ ವೇದವಾಙ್ಮಯವ್ಯಾಖ್ಯಾನಕ್ಕೂ ವಿಶೇಷವಾದ ಸಂಬಂಧವು ಇತಿಹಾಸ ಕಾಲದಿಂದ ನಡೆದುಬಂದಿದೆ. ವೇದಾಂತದ ವಿವಿಧ ಮುಖಗಳನ್ನು ವಿಶದೀಕರಿಸಿದ ಶಂಕರ-ರಾಮಾನುಜ-ಶ್ರೀಪತಿ-ಶ್ರೀಕಂಠ-ಮಧ್ವ-ವಲ್ಲಭ ಮುಂತಾದ ವರೆಲ್ಲ ಒಂದಲ್ಲ ಒಂದು ರೀತಿ ಕರ್ಣಾಟಕಕ್ಕೆ ಸೇರಿದವರೇ. ವಿಶೇಷತಃ ಸಮಗ್ರ ವೇದಸಾಹಿತ್ಯಕ್ಕೆ 'ನ ಭೂತೋ ನ ಭವಿಷ್ಯತಿ' ಎಂಬಂಥ ಭಾಷ್ಯವನ್ನು ರಚಿಸಿದ ಶ್ರೀ ಸಾಯಣಾಚಾರ್ಯರು ನಮ್ಮೀ ನಾಡಿನವರೇ ಎಂಬುದು ನಮಗೆಲ್ಲ ಹೆಮ್ಮೆ ತರುವಂಥ ಸಂಗತಿ. ಇಪ್ಪತ್ತನೆಯ ಶತಮಾನದ ಮಧ್ಯಭಾಗದಲ್ಲಿ ಸಮಗ್ರವಾಗಿ ಋಗ್ವೇದದ ಸಂಹಿತೆ-ಬ್ರಾಹ್ಮಣ-ಆರಣ್ಯಕಗಳನ್ನು ಮೂವತ್ತೈದು ಬೃಹತ್ಸಂಪುಟಗಳಲ್ಲಿ ಮೂಲ, ಪದಪಾಠ, ಪ್ರತಿಪದಾರ್ಥ, ಸಾಯಣಭಾಷ್ಯ ಮತ್ತದರ ಅನುವಾದ, ತಾತ್ಪರ್ಯ, ವಿಶೇಷ ವಿಚಾರ ಹಾಗೂ ಮಂತ್ರಗಳ ಆಂಗ್ಲಾನುವಾದದೊಡನೆ ಕನ್ನಡನುಡಿಗೆ ತಂದ ಜಯಚಾಮರಾಜೇಂದ್ರ ಗ್ರಂಥರತ್ನಮಾಲೆಯ ಸಂಪಾದಕವರ್ಗದ ಕೆಲಸವು ಯಾವ ನಾಡು-ನುಡಿಗಳಿಗಾಗಲಿ ಹೆಮ್ಮೆ ತರುವಂಥದ್ದು. ಈಚೆಗೆ ಪ್ರೊ|| ಎಸ್.ಕೆ.ರಾಮಚಂದ್ರ ರಾಯರು ಮೂವತ್ತು ಸಂಪುಟಗಳಲ್ಲಿ ಋಕ್ಸಂಹಿತೆಯ ನೂತನವ್ಯಾಖ್ಯಾನವನ್ನು ಯಾಸ್ಕಾಚಾರ್ಯರ ನಿರುಕ್ತದ ಬೆಳಕಿನಲ್ಲಿ ಆಧ್ಯಾತ್ಮಿಕಾರ್ಥಪರವಾಗಿ ಮಾಡಲು ಉದ್ಯುಕ್ತರಾಗಿರುವುದು ತುಂಬ ಸ್ಮರಣೀಯವಿಕ್ರಮ. ಅಂತೆಯೇ ಜ್ಯೋತಿಸ್ಸಾಂಸ್ಕೃತಿಕ ಪ್ರತಿಷ್ಠಾನದವರು ಸಾಯಣಭಾಷ್ಯದೊಡನೆ ಸಮಗ್ರಕೃಷ್ಣಯಜುರ್ವೇದವನ್ನು ಕನ್ನಡಕ್ಕೆ ತರುತ್ತಿರುವ ಸಾಹಸವೂ ಸುತರಾಂ ಸ್ತುತ್ಯ. ಇವುಗಳಲ್ಲದೆ ಇತ್ತೀಚೆಗೆ ಬೆಂಗಳೂರಿನ ಆರ್ಯಸಮಾಜವು ಶ್ರೀಸುಧಾಕರ ಚತುರ್ವೇದಿಗಳ ನೇತೃತ್ವದಲ್ಲಿ ನಾಲ್ಕುವೇದಗಳನ್ನೂ ಸ್ವೋಪಜ್ಞಟೀಕೆಯೊಡನೆ ಕನ್ನಡೀಕರಿಸುತ್ತಿರುವ ವಿಸ್ಮಯಾವಹೋಪಕ್ರಮವೂ ನಿತಾಂತ ಸ್ತವನೀಯ. ಇನ್ನೂ ಇಂಥ ಹತ್ತು ಹಲವು ಹಿರಿಯ-ಕಿರಿಯ ವೇದವ್ಯಾಖ್ಯಾನ-ಪ್ರಕಾಶನ ಯತ್ನಗಳು ವೈಯಕ್ತಿಕ ಹಾಗೂ ಸಾಂಸ್ಥಿಕಸ್ತರದಲ್ಲಿ ಸಾಗುತ್ತಲೇ ಇರುವುದು ನಮ್ಮ ನಾಡಿನ ಭಾಗ್ಯ, ನಮ್ಮ ಜನತೆಯ ಸೌಭಾಗ್ಯ.

ಈ ಪುಣ್ಯನಿಃಶ್ರೇಣಿಯಲ್ಲಿಯೇ ಪ್ರಕೃತ ದ್ರಾಹ್ಯಾಯಣಪ್ರತಿಷ್ಠಾನದವರು ಹೊರತರಲಿರುವ ಸಮಗ್ರಸಾಮವೇದ ಸಂಹಿತಾಬ್ರಾಹ್ಮಣಗಳ ಸಸಾಯಣಭಾಷ್ಯ-ಕನ್ನಡ ಭಾಷಾಂತರ ಮತ್ತು ವಿಶೇಷವ್ಯಾಖ್ಯಾನ-ಟಿಪ್ಪಣಿಗಳು ಸೇರುತ್ತವೆ. ಋಗ್ಯಜುರ್ವೇದಗಳ ಬಗೆಗೆ ಸಾಕಷ್ಟು ಕೆಲಸ ಇಂಗ್ಲಿಷ್, ಹಿಂದಿ, ಮರಾಠಿ, ತೆಲುಗು ಹಾಗೂ ಕನ್ನಡಭಾಷೆಗಳಲ್ಲಿಯೂ - ಕೆಲಮಟ್ಟಿಗೆ - ಆಗಿದೆ. ಆದರೆ ಸಾಮವೇದದ ಬಗೆಗೆ ತುಂಬ ಅಲ್ಪಪ್ರಮಾಣದ ಕಾರ್ಯ ನಡೆದಿದೆ. ಇದು ಗುಣ-ಗಾತ್ರಗಳೆರಡರಲ್ಲಿಯೂ ಅಲ್ಪ. ಇದಕ್ಕೆ ಕಾರಣ ಸಾಮವೇದದ ಬಗೆಗೆ ಸಾಮಾನ್ಯರಿಗೂ ವಿದ್ವಾಂಸರಿಗೂ ಸಮಾನವಾಗಿರುವ

ಅನತಿಪರಿಚಯಪರಿಶ್ರಮಗಳೇ ದಿಟ. ಉತ್ತರಭಾರತದಲ್ಲಿ ಹಾಗೂ ಪಾಶ್ಚಾತ್ಯದೇಶಗಳಲ್ಲಿ ಸಾಗಿರುವ ಸಾಮವೇದಾಧ್ಯಯನ-ಸಂಶೋಧನಗಳು ಬಹುಮಟ್ಟಿಗೆ ಋಗ್ವೇದದ ನೆರಳಿನಲ್ಲಿಯೇ ಸಾಗಿವೆ. ಕೇವಲ ಋಕ್ಕಿನ ಅರ್ಥವನ್ನು ಗ್ರಹಿಸುವ, ವಿವರಿಸುವ ಯತ್ನವೇ ಇಲ್ಲಿ ಪ್ರಧಾನವಾಗಿದೆ. ಆದರೆ ಸಾಮವೇದದ ಬಹುಮುಖ್ಯವಾದ ಗಾನಕ್ರಮದ ಬಗೆಗೆ ಬಹುಮಟ್ಟಿಗೆ ಅಜ್ಞಾನ ಅಥವಾ ಅವಜ್ಞೆಯೇ ಸಾಗಿಬಂದಿದೆ. ಇದಕ್ಕೆ ಆರ್ಯಸಮಾಜದ ಸಾಮವೇದ ಪ್ರಕ್ರಿಯೆಯನ್ನೊಂದು ನಿದರ್ಶನವಾಗಿ ಇಲ್ಲಿ ಪ್ರಸ್ತಾವಿಸಬಹುದು. ಇನ್ನು ದಕ್ಷಿಣಭಾರತದ-ವಿಶೇಷತಃ ತಮಿಳುನಾಡಿನ - ಯತ್ನವನ್ನು ಗಮನಿಸಿದರೆ ಇಲ್ಲಿ ಅರ್ಥಮಹತ್ತ್ವದ ಬಗೆಗೆ ಅಂಥ ಕೆಲಸ ಸಾಗದಿರುವುದು ಎದ್ದುಕಾಣುವ ಸಂಗತಿ. ಈ ಎರಡೂ ಕೊರತೆಗಳನ್ನು ಕೂಡಿದಮಟ್ಟಿಗೂ ನೀಗಿ **'ಸಾಮವೇದದ ತತ್ತ್ವ ಮತ್ತು ಪ್ರಯೋಗಗಳನ್ನು ಒಟ್ಟಾಗಿ ಉಜ್ಜೀವನಗೊಳಿಸುವ ತುಡಿತವೇ'** ದ್ರಾಹ್ಯಾಯಣಪ್ರತಿಷ್ಠಾನದ ಪ್ರಕೃತೋದ್ಯಮದಲ್ಲಿ ಎದ್ದುಕಾಣುವ ವಿಶೇಷತೆ.

ಯಾಜ್ಞಿಕವಾದ ವೇದವ್ಯಾಖ್ಯಾನಪದ್ಧತಿಯನ್ನು ಸಾಯಣಾಚಾರ್ಯರ ಹಾದಿಯೆಂದು ಹೆಸರಿಸಿ, ಆ ಪ್ರಕ್ರಿಯೆಯು ಶುಷ್ಕಕರ್ಮಕಾಂಡಪ್ರಧಾನವೆಂದು ಹೀಗಳೆದು ತನ್ಮೂಲಕ ಅಧಿಯಜ್ಞಾರ್ಥವನ್ನೇ ವೇದವಿರುದ್ಧವೆಂದು ನಿರಾದರಿಸುವುದು ಆಧುನಿಕ ಸಂಶೋಧಕರ ಅನುದಿನದ ಪಲ್ಲವಿಯಾಗಿದೆ. ಇದಕ್ಕೆ ಮಹರ್ಷಿದಯಾನಂದಸರಸ್ವತಿ, ಅರವಿಂದರಂಥ ಲೋಕಪ್ರಸಿದ್ಧರೂ ಹೊರತಲ್ಲ. ಯಾಸ್ಕಮುನಿಗಳ ನಿರುಕ್ತವನ್ನೊಂದನ್ನೇ ಹಿಡಿದು ಉಳಿದೆಲ್ಲ ವೇದಾಂಗಗಳ ಪ್ರಕ್ರಿಯೆಗಳನ್ನೂ ಅವಗಣಿಸಿ, ತಾವು ಹೇಳಹೊರಟಿರುವುದು ಪರಮೋಚ್ಚವಾದ ಆಧ್ಯಾತ್ಮಿಕಾರ್ಥ; ಇದರೆದುರು ಉಳಿದದ್ದೆಲ್ಲ ಗೌಣ, ಅನಪೇಕ್ಷಿತ ಎಂಬ ನಿಲುವನ್ನು ತಾಳಿ ಮನಬಂದಂತೆ ಪೂರ್ವಗ್ರಹನಿರ್ದಿಷ್ಟವಾದ 'ಆಧ್ಯಾತ್ಮಿಕ' ಅರ್ಥಗಳನ್ನು ತಮ್ಮ ತಮ್ಮ ಮತಗಳಿಗೆ ಅನುಕೂಲಿಸುವಂತೆ ಕಾಣುತ್ತಿರುವ, ಆರೋಪಿಸುತ್ತಿರುವ ವೇದವ್ಯಾಖ್ಯಾತೃಗಳ ಪರಂಪರೆ ಇಂದು-ನಿನ್ನೆಯದಲ್ಲ; ಶತಮಾನಗಳಿಂದ ಇಳಿದು ಬಂದಿದೆ. ದಿಟವೇ, **'ಆಧ್ಯಾತ್ಮಿಕಾರ್ಥವೇ ವೇದದ ಹೃದಯ'**. ಇದನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ಆಧ್ಯಾತ್ಮಿಕಾರ್ಥದ ದ್ರವ್ಯ ತುಂಬ ಅಲ್ಪ. ಅದರ ತತ್ತ್ವ ಮಾತ್ರ ಅಪಾರ. ಹತ್ತಾರು ವಾಕ್ಯಗಳೊಳಗೆ ಸಮಗ್ರವೇದಗಳ ಆಧ್ಯಾತ್ಮಿಕಾರ್ಥ ಅಡಗಬಲ್ಲುದು. ಇನ್ನುಳಿದ ವಿಸ್ತರಣೆಯೆಲ್ಲ ಅದನ್ನು ಬೇರೆ ಬೇರೆ ಸ್ತರಗಳಿಂದ ಪೋಷಿಸಬಲ್ಲ ಅಧಿಭೂತ-ಅಧಿದೈವ-ಅಧಿಯಜ್ಞಾರ್ಥಗಳಿಗೇ ಮೀಸಲಾಗುವುದು ಅನಿವಾರ್ಯ. ತತ್ತ್ವಪ್ರತಿಪಾದಕ ವಾಕ್ಯವೊಂದು ಸೂತ್ರ. ಅದಕ್ಕೆ ಪ್ರಯೋಗಸಾಫಲ್ಯದ ಭಾಷ್ಯ ಸಹಜವಾಗಿಯೇ ಬಹುಬೃಹದ್ಗಾತ್ರದ್ದಾಗುತ್ತದೆ. ಇಂಥ ಸಮಗ್ರದೃಷ್ಟಿಯ ವೇದಾರ್ಥ ಪದ್ಧತಿಯನ್ನು ಕೇವಲ ಕರ್ಮಕಾಂಡೀಯವೆಂದು ಕುಂದಿಡುವುದು ಕುಹಕರ ದಾರಿಯಷ್ಟೇ ಆಗುವುದು. ದುಂಬಿಗೆ ಒಂದು ಹನಿ ಮಕರಂದಮಾತ್ರ ಮುಖ್ಯವಾಗಿರುವಾಗ ಅಷ್ಟು ದೊಡ್ಡ ಹೂವು. ಅದರ ಬಣ್ಣ-ಬೆಡಗು-ಕಂಪು-ಸೊಂಪುಗಳೆಲ್ಲ ಅದೇಕಿರಬೇಕು? ಆ ಹೂವನ್ನು ತಾಳುವ ಗಿಡದ

ಎಲೆ-ರಂಬೆ-ಕೊಂಬೆಗಳ ವಿಸ್ತಾರ ಏಕಿರಬೇಕು? ಇವೆಲ್ಲ ವ್ಯರ್ಥ, ಇದಲ್ಲ ಪರಮಾರ್ಥವೆಂದು ಹೇಳುವವರು ಕೇವಲ ದುಂಬಿಯ ದೃಷ್ಟಿಯನ್ನಷ್ಟೇ ಉಳ್ಳವರಲ್ಲದೆ ಆ ಗಿಡದಿಂದ ಬಹುವಿಧಪ್ರಯೋಜನಗಳನ್ನು ಪಡೆಯುವ ಇನ್ನುಳಿದ ಪ್ರಪಂಚದ ಅನೇಕ ಜೀವಿಗಳ ಆಶಯಗಳನ್ನು ಮರೆತಿರುತ್ತಾರೆ. ಅಲ್ಲದೆ ಒಂದು ಹನಿ ಮಕರಂದವಾದರೂ ಇಡಿಯ ಗಿಡದ ಫಲ. ಬಿಂದುಮಾತ್ರಮಕರಂದೋತ್ಪತ್ತಿಗೆ ಆ ತರುವಿನಷ್ಟು ವಿಸ್ತಾರವಾದ ಭೂಮಿಕೆ ಅತ್ಯವಶ್ಯ. ಆಧ್ಯಾತ್ಮಿಕಾರ್ಥವು ಶೂನ್ಯದಿಂದ ಸಂಭವಿಸದು. ವೇದಗಳು ಮಾನವ ಜೀವನದ ಸಮಸ್ತಮೌಲ್ಯಗಳ ಸಮಗ್ರಾಭ್ಯುದಯಕ್ಕೆ ಹೊರಟಕಾರಣ, ಜ್ಞಾನಕಾಂಡಕ್ಕಿಂತ ಕರ್ಮಕಾಂಡದ ದ್ರವ್ಯವ್ಯಾಪ್ತಿ ಸಹಜವಾಗಿಯೇ ಬೃಹದ್ಗಾತ್ರದ್ದಾದ ಕಾರಣ ವೇದವಿವರಣೆಯಲ್ಲಿ ಅಧಿಯಜ್ಞದೃಷ್ಟಿ ಅನಿವಾರ್ಯ ವಿಸ್ತಾರದ್ದಾಗುತ್ತದೆ. ಹಾಗೆಂದು ಆಧ್ಯಾತ್ಮಿಕಾರ್ಥದ ಬಗೆಗೆ ಖಂಡಿತವಾಗಿ ಅವಜ್ಞೆಯಿಲ್ಲ. ಅದೇ ನಮ್ಮ ಚರಮಗಂತವ್ಯ. ಒಟ್ಟಿನಲ್ಲಿ ಈ ಕೃತ್ಸ್ನದೃಷ್ಟಿಯ ರಸಫಲವನ್ನೇ ನಾವು ಪ್ರಕೃತ ದ್ರಾಹ್ಯಾಯಣ ಪ್ರತಿಷ್ಠಾನದ ಸಾಮವೇದಸಂಪುಟಗಳಲ್ಲಿ ಕಾಣಬಹುದು. ಆದುದರಿಂದಲೇ ಇದು ಕರ್ಮ-ಜ್ಞಾನ-ಉಪಾಸನೆಗಳೆಂಬ ಕಾಂಡತ್ರಯಾಭಿಮಾನಿಗಳಿಗೂ ಸಮಾನವಾಗಿ ಆದರಣೀಯವಾಗಿದೆ. ಇಲ್ಲಿರುವುದು ಸಕಲರಿಗೂ ಅವಿರೋಧವಾದ ಸಮಗ್ರಸಂಸ್ಕೃತಿದೃಷ್ಟಿ.

ಸಂಹಿತಾಪಾಠ, ವಿವಿಧಗಾನಕ್ರಮ, ಪದಪಾಠ, ಪ್ರತಿಪದಾರ್ಥ, ಸಾಯಣಭಾಷ್ಯ, ಅನುವಾದ, ವಿಶೇಷವ್ಯಾಖ್ಯಾನ-ಟಿಪ್ಪಣಿಗಳೆಲ್ಲ ಸೇರಿರುವ ಈ ಸಾಮವೇದಾವೃತ್ತಿಯು ಬಹುಶಃ ಸಾಮವೇದಾನುವಾದೇತಿಹಾಸದಲ್ಲಿಯೇ ಮೊದಲಬಾರಿಗೆ ಮಂತ್ರಗಳ ಛಂದೋಬದ್ಧಪದ್ಯಾನುವಾದವನ್ನೂ ಒಳಗೊಂಡಿರುವುದು ಮತ್ತೊಂದು ವಿಶೇಷತೆ. ಇಂಥ ಸೇವೆಯ ಮೂಲಕ ಭಗವಾನ್ ವೇದಪುರುಷನ ಆರಾಧನೆಗೆ ಅವಕಾಶವನ್ನು ನನಗೊದವಿಸಿದ ದ್ರಾಹ್ಯಾಯಣಪ್ರತಿಷ್ಠಾನದ ಎಲ್ಲ ಪದಾಧಿಕಾರಿಗಳಿಗೂ, ಸಂಪಾದಕವರ್ಗಕ್ಕೂ ನನ್ನ ವಿನಮ್ರ ನಮೋವಾಕಗಳು. ಮುಖ್ಯವಾಗಿ ನನಗೆ ಸಾಮವೇದದ ದಿಗ್ದರ್ಶನವನ್ನು ಮಾಡಿಸಿದ ಗುರುಗಳಾದ **ಪೂಜ್ಯ ವೇ.ಬ್ರ.ಶ್ರೀ॥ ಶೇಷಣ್ಣಶ್ರೌತಿಗಳಿಗೆ** ನನ್ನ ನಿತಾಂತ ಕೃತಜ್ಞತಾಂಜಲಿಗಳು ಸಲ್ಲುತ್ತವೆ. ಈ ಮುನ್ನ ಪ್ರತಿಷ್ಠಾನವು ತಂದ ಪೂರ್ವಾಪರ ಪ್ರಯೋಗಾದಿಗಳ ಹಲವು ಸಂಪುಟಗಳ ಅನನ್ಯಮಹತ್ತ್ವವನ್ನು ಬಲ್ಲವರಿಗೆ ಶ್ರೀ ಶೇಷಣ್ಣಶ್ರೌತಿಗಳ ವೈದುಷ್ಯ ಸುವಿದಿತ. ಅವರ ಹಾಗೂ ಇನ್ನಿತರ ವಿದ್ವಾಂಸರ ಪರಿಶ್ರಮದ ಫಲವಾದ ಈ ಸಾಮವೇದಸಂಪುಟಗಳು ಶ್ರುತಿಭಗವತಿಯ ಶ್ರವಣಾಲಂಕೃತಿಗಳಾಗಲಿ.

**- ಶತಾವಧಾನಿ ಡಾ॥ ಆರ್.ಗಣೇಶ್**

# ಅಭಿನಂದನೆ

**ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ।**
**ತಗ್ಂ ಹ ದೇವಮಾತ್ಮಬುದ್ಧಿಪ್ರಸಾದಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ ॥**

*ಶ್ವೇ. ಉ.೬.೧೮ ॥*

ವೇದಗಳ ಬಗ್ಗೆ ಆಸಕ್ತಿ ಅರಿವುಗಳು ಕಡಿಮೆಯಾಗುತ್ತಿರುವ ಆಧುನಿಕ ಸಮಯದಲ್ಲಿ ವೇದಗಳ ಪೈಕಿ ಕಡಿಮೆ ಸಂಖ್ಯೆಯಲ್ಲಿ ಸಿಗುವ ಸಾಮಗರ ಉಪಕಾರಕ್ಕಾಗಿ ಪ್ರಧಾನ ವಾಗಿಯೂ, ಇತರ ಶಾಖೆಗಳ ಜ್ಞಾನಾಭಿವೃದ್ಧಿಗಾಗಿಯೂ **'ದ್ರಾಹ್ಯಾಯಣ ಪ್ರತಿಷ್ಠಾನ'** ವು ಬಹಳ ಸ್ತುತ್ಯರ್ಹವಾದ ಸೇವೆಯನ್ನು ಸಲ್ಲಿಸುತ್ತಿರುವುದು ಸರ್ವವಿದಿತವಷ್ಟೆ. ಪ್ರತಿಷ್ಠಾನ ದಿಂದ ಈ ಹಿಂದೆ ಹೊರಬಂದಿರುವ ಅನೇಕ ಪುಸ್ತಕಗಳಿಗಿಂತ ಪ್ರಸ್ತುತ ಪ್ರಕಾಶಿತವಾಗುತ್ತಿ ರುವ **'ಸಾಮವೇದ ಸಂಹಿತೆ'** - *ಸಮಗ್ರ ಮೂಲ, ಪದಪಾಠ, ಸಾಯಣ ಭಾಷ್ಯ ಹಾಗೂ ವಿಸ್ತೃತ ಕನ್ನಡಾನುವಾದದೊಡನೆ* - ಕನ್ನಡ ಭಾಷೆಯಲ್ಲಿ ಮೊದಲಸಲ ವಾದ್ದರಿಂದಲೂ, ಬಹಳ ಶ್ರದ್ಧಾಪೂರ್ವಕವಾಗಿ, ಅಚ್ಚುಕಟ್ಟಾಗಿ ಹೊರಬರುತ್ತಿರುವುದ ರಿಂದಲೂ ಬಹಳ ಸ್ವಾಗತಾರ್ಹವಾಗಿದೆ.

ಇದು ಐದು ಸಂಪುಟಗಳಲ್ಲಿ ಸಂಪೂರ್ಣವಾಗುವಂತೆ ಯೋಜಿಸಲ್ಪಟ್ಟಿದ್ದು ಇದೀಗ ಮೊದಲ ಸಂಪುಟ ಹೊರಬರುತ್ತಿದೆ. ಈ ಸಂಪುಟದಲ್ಲಿ ವಿಶೇಷವಾಗಿ ಪ್ರಸ್ತಾವನೆಯಲ್ಲಿ, ಸಾಮವೇದದ ಅನೇಕ ಅಂಶಗಳ ಬಗ್ಗೆ ಪ್ರಮಾಣಪುರಸ್ಸರವಾಗಿ ವಿಶದವಾದ ವಿವರಣೆ ನೀಡ ಲಾಗಿದೆ. ಸಾಯಣಭಾಷ್ಯ ಸಹಿತವಾದ ಸಾಮವೇದ ಸಂಹಿತೆಯ ಮೂಲ ನಾಗರೀ ಮತ್ತು ಗ್ರಂಥಲಿಪಿಗಳಲ್ಲೂ, ಪದ, ಭಾಷ್ಯಗಳು ನಾಗರೀಲಿಪಿಯಲ್ಲಿ ಮತ್ತು ಪ್ರತಿಪದಾರ್ಥ, ತಾತ್ಪರ್ಯ ಮತ್ತು ಭಾಷ್ಯದ ಅನುವಾದ ತಮಿಳು ಭಾಷೆಯಲ್ಲಿ ಸುಮಾರು ನೂರು ವರ್ಷಗಳ ಹಿಂದೆ ಮುದ್ರಿತವಾಗಿದೆ. ಸಂಸ್ಕೃತೇತರ ಭಾಷೆಗಳಲ್ಲಿ ಆಂಗ್ಲ, ಹಿಂದಿಗಳ ನಂತರ ಇದೀಗ ಕನ್ನಡಾನುವಾದ ಬರುತ್ತಿದೆ ಎಂಬುದು ಗಮನಾರ್ಹ. ಶ್ರೀಮಾನ್ ನಾಗಪ್ಪ ಹಾಗೂ ಶ್ರೀ ಶೇಷಣ್ಣ ಶ್ರೌತಿಗಳು ಪರಂಪರಾಗತ ಪ್ರಕಾಂಡ ಪಂಡಿತರೂ, ಪರಿಶ್ರಮಶೀಲರೂ ಆಗಿರುವುದರಿಂದ ಬಹಳ ಕಾಳಜಿ ವಹಿಸಿ ಬಹಳಷ್ಟು ಮಾಹಿತಿಗಳನ್ನು ಒದಗಿಸಿರುತ್ತಾರೆ.

ಮುದ್ರಣವು ಆಧುನಿಕ ಕಂಪ್ಯೂಟರ್ ಯಂತ್ರದ ಬಳಕೆಯಿಂದ ಆಗಿರುವ ಕಾರಣ ಮುಂದೆ ಅನೇಕ ವಿಧಗಳಲ್ಲಿ ಉಪಯೋಗಕ್ಕೆ ಬರಲು ಅವಕಾಶವಿದೆ. ನಾನು ವೇದಶಾಸ್ತ್ರ ವಾಙ್ಮಯಗಳ ಸಮಗ್ರಕೋಶವೊಂದನ್ನು ಕಂಪ್ಯೂಟರ್ ಮಾಧ್ಯಮದಲ್ಲಿ ರಚಿಸತೊಡಗಿರುವ ಕಾರಣ ಈ ಪ್ರಯತ್ನದ ಪ್ರಯೋಜನವನ್ನೂ ಬಹುಮುಖವಾಗಿ ಬೆಳೆಸಲು ಅವಕಾಶವಿರುವುದನ್ನೂ ಮನಗಾಣುತ್ತೇನೆ. ಉದಾಹರಣೆಗೆ, ಮನ್ತ್ರ, ಪದ, ಋಷಿ, ಛನ್ದಸ್ಸು, ದೇವತೆ, ವಿನಿಯೋಗ, ವಿಚಾರ, ಭಾಷ್ಯದಲ್ಲಿನ ವಿಶೇಷಗಳು, ಗಾನಕ್ಕೆ ಸಂಬಂಧಿಸಿದ ಅಂಶಗಳು, ವರ್ಣ, ಸ್ವರ, ಉಚ್ಚಾರಣೆ ಮುಂತಾದವಕ್ಕೆ ಸಂಬಂಧಿಸಿದ ವೇದಾಂಗಗಳ ಪ್ರಮಾಣ, ಆಕರ ಮೊದಲಾದವುಗಳ ಸೂಚಿ ನಿರ್ಮಾಣ, ಭಾರತೀಯ ಲಿಪಿಗಳಲ್ಲಿ ಲಿಪ್ಯಂತರಣ, ಹುಡುಕಲು ಸೌಕರ್ಯ ಹೈಪರ್ ಟೆಕ್ಸ್ಟ್ ಲಿಂಕ್ಸ್ ಪ್ರಮಾಣಗ್ರಂಥಗಳ ಸಮನ್ವಯನ ಮುಂತಾದ ಅನೇಕ ಸೌಲಭ್ಯಗಳನ್ನು ಮುಂದೆ ಏರ್ಪಡಿಸಬಹುದು. ಇವುಗಳು ಪುಸ್ತಕರೂಪದಲ್ಲಿ ಅವಶ್ಯಕವಾದರೂ, ಎಲೆಕ್ಟ್ರಾನಿಕ್ ರೂಪದಲ್ಲಿ ಬಳಸಲು ಇಂದು ವ್ಯವಸ್ಥೆ ಇದೆ. ಇಂಟರ್‌ನೆಟ್ ಮೂಲಕವಾಗಿಯೂ ಈ ವಿಷಯಗಳ ಜ್ಞಾನ, ವಿಚಾರ ವಿನಿಮಯ ಸಾಧ್ಯವಾಗುತ್ತಿದೆ.

ನಾನು ಈ ಸಂಪುಟದ ಕರಡಚ್ಚನ್ನು ಸಂಪೂರ್ಣ ಓದಿ ನೋಡಿ, ಅದರ ವೈಶಿಷ್ಟ್ಯಗಳ ಬಗ್ಗೆ ಬಹಳ ಸಂತುಷ್ಟನಾಗಿದ್ದೇನೆ ಮತ್ತು ಬೇಗಲೇ ಮತ್ತಿತರ ಸಂಪುಟಗಳ ಬಿಡುಗಡೆಯನ್ನು ನಿರೀಕ್ಷಿಸುತ್ತೇನೆ. ವೇದಾಭಿಮಾನಿಗಳೂ, ಜಿಜ್ಞಾಸುಗಳೆಲ್ಲರೂ ಈ ಉತ್ತಮ ಪ್ರಯಾಸಕ್ಕೆ ಬೆಂಬಲ ನೀಡಿ ತಮ್ಮ ಆತ್ಮಕ್ಷೇಮವನ್ನು ಪಡೆದುಕೊಳ್ಳಲೆಂದು ಆಶಿಸುತ್ತೇನೆ.

ಇಂತಿ ಸಜ್ಜನವಿಧೇಯ
ವೇದವಾರಿಧಿ, ವೇದವಿಜ್ಞಾನ ಶಿರೋಮಣಿ,
ವೈದಿಕಭೂಷಣಂ, ವಾಚಸ್ಪತಿ
**ಡಾ॥ ಪಿ.ರಾಮಾನುಜಮ್**
ಭಾರತೀಯ ಪರಂಪರೆ ಗುಂಪು ಸಂಯೋಜಕರು
ಸಿ-ಡಾಕ್, ಬೆಂಗಳೂರು

೧೪-೧೧-೦೧
ವಿಷು ವರ್ಷ, ನರಕಚತುರ್ದಶಿ
ಬೆಂಗಳೂರು.

# ಶುಭಾಶಂಸನ

ಭಗವಂತನು ಗೀತೆಯಲ್ಲಿ 'ವೇದಾನಾಂ ಸಾಮವೇದೋऽಸ್ಮಿ' ಎಂದು ಇಲ್ಲಿ ತನ್ನ ತೇಜೋऽಂಶ ವಿಶೇಷ ರೂಪವಾದ 'ವಿಭೂತಿ'ಯಿರುವುದನ್ನು ತಾನೇ ಬಾಯಿಬಿಟ್ಟು ಹೇಳಿದ್ದೇಕೆ? ಎಂಬುದು ವೈದಿಕರೆಲ್ಲರಿಗೆ ಚಿಂತನಾರ್ಹವಾಗಿದೆ. ತೈತ್ತಿರೀಯ ಸಂಹಿತಾ ಭಾಷ್ಯಾರಂಭದಲ್ಲಿ ಶ್ರೀ ಸಾಯಣಾಚಾರ್ಯರು 'ಭಿತ್ತಿಸ್ಥಾನೀಯೋ ಯಜುರ್ವೇದಃ, ಚಿತ್ರಾಸ್ಥಾನಾವಿತರೇ' - ಯಜುರ್ವೇದವು ಗೋಡೆಯಿದ್ದಂತೆ, ಉಳಿದವು ಅದರ ಮೇಲೆ ಬರೆದ ಚಿತ್ರಗಳಂತೆ - ಎಂದಿರುವುದು ಇನ್ನೊಂದು ದೃಷ್ಟಿಯಲ್ಲಿ! 'ಗೋಡೆಯಿದ್ದರಲ್ಲವೋ ಚಿತ್ರ?' ಎಂಬ ಉಪಮೆಯಲ್ಲಿ 'ಯಜುಸ್ತತ್ತ್ವದ' ವೇದ ಹೃದಯತ್ತ್ವವನ್ನು ಸಾಯಣರು ಎತ್ತಿ ಹಿಡಿದುದು ವೈಚಾರಿಕ ದೃಷ್ಟಿಯಲ್ಲಿ; ಇದೇ ಜೀವನವೇ ವೈದಿಕ ದರ್ಶನದಲ್ಲಿ ಆತ್ಮಾರ್ಪಣೆಯೆಂದು 'ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನಃ....' ಎಂದು ಮುಕ್ತಾಯವಾಗುವ ಹಾಗೆ ನಿರ್ಣೀತವಾದ, ತೈತ್ತಿರೀಯಾರಾಣ್ಯಕದ ಕೊನೆಯ ಅನುವಾಕದ ಹಿನ್ನೆಲೆಯಲ್ಲಿ. 'ಯಜ್ಞೋ ವೈ ವಿಷ್ಣುಃ' ಎಂಬ ವೈದಿಕ ಸಮೀಕರಣದ ಸಾಂಕೇತಿಕ ಅರ್ಥ ಇದನ್ನು ಪೋಷಿಸುತ್ತದೆ ಮತ್ತು ಮನೋಮಯ ಪುರುಷನನ್ನು ತೈತ್ತಿರೀಯ ಉಪನಿಷತ್ತಿನ ಆನಂದಮಯ ವಿದ್ಯೆಯು ಪಕ್ಷಿಯ - ಗರುಡ - ರೂಪಕದಲ್ಲಿ ವರ್ಣಿಸುತ್ತಾ 'ತಸ್ಯ ಯಜುರೇವ ಶಿರಃ' ಎಂದು ಮತ್ತೆ ಯಾಜುಷ ತತ್ತ್ವವನ್ನೇ ಶಿರಃಪ್ರಾಯವೆಂದೂ, ಋಕ್ಸಾಮಗಳನ್ನು ಬಲ-ಎಡರೆಕ್ಕೆಗಳೆಂದೂ ಕಲ್ಪಿಸಿರುವುದೂ ಈ ಭಾವದಲ್ಲೇ, ಸಾಮವೇದ ಇರಲಿ, ಋಗ್ವೇದದ ಸ್ಥಾನವೇನೆಂಬ ಪ್ರಶ್ನೆಗೆ ತೈತ್ತಿರೀಯ ಸಂಹಿತೆಯಲ್ಲೇ - ೬.೫.೧೦. ೩೫ರಲ್ಲಿ :

**ತದ್ಯದ್ವೈ ಯಜ್ಞಸ್ಯ ಸಾಮ್ನಾ ಯಾಜುಷಾ ಕ್ರಿಯತೇ**
**ಶಿಥಿಲಂ ತದ್ಯದೃಚಾ ತದ್ದೃಢಂ.....'**

ಎಂದು ಏಕೆ ಹೇಳಿದೆಯೆಂದೂ ವಿಚಾರಣಾರ್ಹವಾಗಿದೆ. ಯಜ್ಞವನ್ನು ಮಾಡುವಾಗ ಋಕ್ಕುಗಳನ್ನು ಬಿಟ್ಟು, ಕೇವಲ ಯಾಜುಷಕರಣಗಳಿಂದಲೂ, ಸಾಮಗಳ ಬಳಕೆಯಿಂದಲೂ ಮಾಡುವುದಾದರೆ ಆಗ ಯಜ್ಞವೇ ಶಿಥಿಲವಾಗುವುದೆಂದೂ ಹಾಗಾಗದೆ ಯಾಜುಷ ವಿದ್ಯೆಯು, ಯಜ್ಞಕರಣವು, ಯಜ್ಞಫಲವು ಊರ್ಜಿತವಾಗಬೇಕಾದರೆ, ಉಚಿತವಾದ ಋಕ್ಕುಗಳನ್ನು ಬಳಸಿ, ಸರಿಯಾಗಿ ದೇವತಾ ವಿಶೇಷಗಳನ್ನು ಯಥಾವತ್ತಾಗಿ ಕರೆದು ಆಹ್ವಾನಿಸಿದಾಗ ಮಾತ್ರ ಯಜ್ಞವು ದೃಢವಾಗುವುದೆಂದೂ ಹೇಳಿದ್ದು, ಋಗ್ವೇದದ ಸ್ಥಾನವನ್ನು ಪ್ರತಿಪಾದಿಸುತ್ತದೆ.

ಒಂದಕ್ಕೊಂದು ವಿರೋಧವಿಲ್ಲ ಎಂಬುದೇ ಗಮನೀಯ. ಹೇಗೆಂದರೆ ಚತುರ್ವೇದಗಳ ಹೃದಯವೇ ಯಜ್ಞತತ್ತ್ವ, ಅದರ ಕೊನೆಯ ಮೆಟ್ಟಿಲು - '**ವಸುರಣ್ವೋ ವಿಭೂರಸಿ... ಓಂ ಇತ್ಯಾತ್ಮಾನಂ ಯುಂಜೀಥ....**' ಎಂದು ತೈತ್ತಿರೀಯ ಉಪನಿಷತ್ತಿನ ದ್ರಾವಿಡಗಣನೆಯ ಚತುರ್ಥಪ್ರಶ್ನದ '**ನಾರಾಯಣೀಯ**'ದ ಕೊನೆಯ ಅನುವಾಕದಲ್ಲಿ ಉಕ್ತವಾದ - ಆತ್ಮಾರ್ಪಣೆ, ಭಗವಂತನಿಗೆ ಆತ್ಮಹವಿಃ ಸಮರ್ಪಣೆ ಎಂಬುದು. ಈ ಯಜ್ಞವೂ ಇತರ ರೂಪಾಂತರಗಳೂ ಸಿದ್ಧಿಹೊಂದುವುದು ಸಮರ್ಥ ಋಕ್ಕುಗಳನ್ನು ದೇವತಾ ಛಂದೋನುಸಂಧಾನ ಪೂರ್ವಕವಾಗಿ ಪ್ರಯೋಗಿಸಿ ಅವರನ್ನು ಕರೆದಾಗ ಮಾತ್ರ.

'ಸಾಮವೇದದ ಪಾತ್ರವೇನು? ಅದನ್ನೇಕೆ ಭಗವಂತ ತನ್ನ ವಿಶೇಷ ವಿಭೂತಿ ಎಂದು ಉಲ್ಲೇಖಿಸಿದ? ಋಗ್ಗಜುಸ್ಸುಗಳನ್ನು ಬಿಟ್ಟದ್ದೇಕೆ?' ಎಂಬ ಪ್ರಶ್ನೆಗೆ ಮಾರ್ಮಿಕ ಉತ್ತರ ಹೇಳಬೇಕಾಗುತ್ತದೆ. ಇದು ವಿವರ ಸಾಪೇಕ್ಷವಾದರೂ ಇಲ್ಲಿ ದಿಗ್ದರ್ಶನ ಮಾತ್ರ ಶಕ್ಯ.

ವೇದದ ಪರಮಗುರಿ, ಪರತತ್ತ್ವದ ಸಾಕ್ಷಾತ್ಕಾರ, ಪರಮಾತ್ಮಾನುಭವ, ಪರದರ್ಶನ, ಸ್ವಯಂಪ್ರಯೋಜನ ರೂಪದ ದೈವಾನಂದಾನುಭೂತಿ. ಅದನ್ನೇ ಯೋಗ ಎಂದೂ ವೇದವೂ - '**ಯುಂಜತೇ ಮನ ಉತಯುಂಜತೇ ಧಿಯಃ**' - ನಿರ್ದೇಶಿಸಿದೆ.

'**ಸರ್ವೇ ವೇದಾ ಯಾತ್ಪದ ಮಾಮನನ್ತಿ**' - ಕಠ
'**ವೇದೈಶ್ಚ ಸರ್ವೈರಹಮೇವ ವೇದ್ಯಃ**' - ಗೀತೆ
'**ನಾರಾಯಣ ಪರಾ ವೇದಾಃ**' - ಶ್ರೀಭಾಗವತ

ಇತ್ಯಾದಿ ಪ್ರಮಾಣಗಳು ವೇದಾಧ್ಯಯನದ ಗುರಿಯನ್ನು ಯೋಗಾನುಭೂತಿಯಲ್ಲಿ ತೋರಿಸಿವೆ.

ಋಕ್ಕುಗಳನ್ನು ವಿಶೇಷ ಗಾನದಲ್ಲಿ 'ಹಾಡಿ' ದಾಗ ಬರುವ ಆನಂದವು ಈ ಯೋಗಕ್ಕೆ ವೇದ ಸಮೀಪವಾದ ಅನುಭವ. ಮುಕ್ತಾತ್ಮನ ಅನುಭವ ಪರಮಪದದಲ್ಲಿ ಈ ಸಾಮ ಗಾನವೇ ಆಗಿದೆಯೆಂದು ತೈತ್ತಿರೀಯದ ಬ್ರಹ್ಮಾನಂದ, ಭೃಗುವಲ್ಲಿಗಳು ನಿರ್ದೇಶಿಸುತ್ತವೆ. '**ಏತತ್ ಸಾಮಗಾಯನ್ನಾಸ್ತೇ.....**'

ಋಗ್ವೇದವಾಗಲಿ, ಯಜುರ್ವೇದವಾಗಲಿ, ಅಧ್ಯಯನವಾಗಲಿ, ಯಾಗಗಾಗಲಿ, ಯಜ್ಞದ ಆಚರಣೆಯಾಗಲಿ, ಇಡೀ ವೇದವಾಙ್ಮಯದ ಗುರಿ ಈ ಬ್ರಹ್ಮಾನಂದಾನುರೂಪ ಯೋಗ ಎಂಬುದನ್ನು ವೈದಿಕರು ಮನಗಂಡರೆ, ಗೀತಾಚಾರ್ಯನ ಸಾಮವೇದ ಪ್ರಾಶಸ್ತ್ಯದ ಕುರಿತ ಸೂಕ್ತಿಯು ಮನಬಿಚ್ಚಿ ತೆರೆದುಕೊಳ್ಳುತ್ತದೆ. ಇಲ್ಲವಾದರೆ ಶುಷ್ಕವಿವಾದಗಳು ತಪ್ಪಲಾರವು. '**ಯಸ್ತನ್ನ ವೇದ ಕಿಂ ಋಚಾ ಕರಿಷ್ಯತಿ?**' - ಆ ಭಗವಂತನನ್ನರಿಯದವನು,

ಅನುಭವಿಸದವನು, ಎಷ್ಟು ಋಕ್ಕುಗಳನ್ನು ಪಠಿಸಿದರೇನು?' ಎಂಬ ಮಾತೂ ವೇದದಲ್ಲೇ ಬರುತ್ತಾ ಇದನ್ನು ಇನ್ನಷ್ಟು ಸಮರ್ಥಿಸುತ್ತದೆ.

'ವಿದ್ಯಾ' ಎಂಬುದು ಈ ಭಗವದನುಭೂತಿಯೇ! ಇಂಟ್ಯೂಇಶನ್, ಡೈರೆಕ್ಟ್ ಪರ್ಸೆಪ್ಶನ್ - ಇದೇ ಯೋಗ, ಇದೇ ಉಪಾಸನೆ, ವೇದನ, ನಿದಿಧ್ಯಾಸನ, ಅನುಧ್ಯಾನ ಎಂಬುದು ಬ್ರಹ್ಮಸೂತ್ರಕಾರರ ಮತ. ಇದೇ ಉಪನಿಷತ್ತುಗಳ ಹೃದಯವೂ ಸಹ.

ಇಂಥ ದ್ವಾತ್ರಿಂಶತ್ ವಿದ್ಯೆಗಳಲ್ಲಿ ಇಪ್ಪತ್ತಕ್ಕಿಂತ ಹೆಚ್ಚು ಸಾಮವೇದದ ಛಾಂದೋಗ್ಯ ಉಪನಿಷತ್ತಿನಲ್ಲೇ ಇದ್ದು, ಅವುಗಳಲ್ಲಿ ಮತತ್ರಯಾಚಾರ್ಯರಿಗೂ ಮುಖ್ಯವಾದ ಸದ್ ವಿದ್ಯೆಯೂ - **ತತ್ ತ್ವಂ ಅಸಿ** ಅನುಭವವೂ - ಅಡಗಿರುವುದನ್ನು ಮನಗಂಡರೆ, ಸಾಮವೇದದ ಮಹತಿಯ ಅರಿವಾದೀತು. ಛಾಂದೋಗ್ಯವು ತೊಡಗುವುದೇ **'ಉದ್ಗೀಥ'** ವಿದ್ಯೆಯಿಂದ. ಎತ್ತರದ ಸ್ವರದಲ್ಲಿ ಪ್ರಣವವನ್ನು ಸಾಮಬದ್ಧವಾಗಿ ಹಾಡಿ ಭಗವಂತನನ್ನು ಅನುಭವಿಸುವ ಪ್ರಕಾರದ ಹಲವು ಅಂಶಗಳನ್ನು ಈ ವಿದ್ಯೆ, ತುಂಬ ಗಹನ, ಗೂಢ ಮಿಸ್ಟಿಕಲ್ ಭಾಷೆ, ಸಂಜ್ಞೆಗಳಲ್ಲಿ ನಿರೂಪಿಸಿ ಇದನ್ನು ಉಳಿದವಕ್ಕಿಂತ 'ಅರ್ಥೈಸಲು' ಹೆಚ್ಚು ಕಠಿಣವಾಗಿಸಿದೆ ಇಡೀ ಸಾಮವೇದವೇ 'ಉದ್ಗೀಥ' ವಿಸ್ತಾರ, 'ಉದ್ಗೀಥವು' ಅದರ ಸಂಗ್ರಹ.

ಭಗವಂತನು ಕರ್ಮಾರಾಧ್ಯ; ಜ್ಞಾನಗಮ್ಯ, ಉಪಾಸನಾವೇದ್ಯ, ಸಾಮಗಾನ ವಿಶೇಷಗಳಿಂದ ಸಾಕ್ಷಾತ್ಕೃತನಾಗಿ ಅನುಭವದಲ್ಲಿ ನೆಲೆನಿಲ್ಲುತ್ತಾನೆ. ಶಬ್ದಾತೀತನು 'ಶಬ್ದ' ವೆನಿಸಿದ ವೇದದ ಒಡಲಲ್ಲೇ ಇರುತ್ತಾ ಸಾಮವೇದವು ಶಬ್ದದಾಚೆಯ ಅನುಭವವೈಕ ವೇದ್ಯನಿಗೆ ಹೊಸ್ತಿಲಿನಂತೆ ಇದ್ದು, ಶಬ್ದದ ಈಚಿನ ಲೋಕಕ್ಕೂ ಅವನಿಗೂ ಕೊಂಡಿಯಂತೆ ಇರುವುದೇ ವಿಶೇಷ. ಅದು ಗೀತಾಚಾರ್ಯನ ಸೂಕ್ತಿಯ ಅರ್ಥ ಎಂದು ತೋರುತ್ತದೆ.

ಇಷ್ಟು ಮುಖ್ಯವಾದ ಸಾಮವೇದದ ಕೌಥುಮ ಶಾಖೆಯ ಸಂಹಿತೆಗೆ ಶ್ರೀಯುತ ಬ್ರ.ಶ್ರೀ ಶೇಷಣ್ಣ ಶ್ರೌತಿಗಳು ಪರಮಸಾಹಸಮಾಡಿ, ಪ್ರಪ್ರಥಮವಾಗಿ ಕನ್ನಡ ಲಿಪಿಯಲ್ಲಿ ಮೂಲವನ್ನು, ಸ್ವರವತ್ತಾಗಿ, ಮುದ್ರಿಸಿ, ಪದಪಾಠ, ಗಾನಕ್ರಮವಿನ್ಯಾಸಗಳನ್ನು ಕೊಟ್ಟು, ಅರ್ಥಸಹಿತ ಮುದ್ರಿಸುವ ಹೊಣೆ ಹೊತ್ತು ಈ ಮಹಾಸಂಪುಟವನ್ನು ಹೊರತರುತ್ತಿರುವುದು ಭಗವಂತನ ವಿಶೇಷ ಅನುಗ್ರಹದಿಂದಲೇ ಎಂದು ಯಾರಾದರೂ ತಲೆಬಾಗಿ, ತಲೆದೂಗಿ ಹೇಳಲೇ ಬೇಕಾಗಿದೆ. ಈ ಪ್ರೇರಣೆಯೇ ದಿವ್ಯ ಅತಿಮಾನುಷ ಮತ್ತು ಋಷಿಪ್ರೇರಿತ ಎಂದು ನಾನು ದೃಢವಾಗಿ ಭಾವಿಸಿದ್ದೇನೆ.

ಗೀತೆಗೆ ಸಮಗ್ರ ಮಹಾಭಾರತವೇ ಪರಿಪೂರ್ಣವ್ಯಾಖ್ಯಾನ ಎಂಬ ಗ್ರಹಿಕೆಯ ದಾರಿಯಲ್ಲಿ ಉಪನಿಷತ್ತುಗಳಿಗೂ ಸಮಗ್ರ ಸಂಹಿತಾ ಸಾಹಿತ್ಯವು ಮಾತ್ರ ಸಮರ್ಪಕ ವ್ಯಾಖ್ಯಾನವಾಗಿ ಅನವಶ್ಯ ಗೊಂದಲಗಳನ್ನು ನಿವಾರಿಸಬಲ್ಲದು ಎಂದು ನನ್ನ ನಂಬಿಕೆ. ವೇದಗಳ ಈ ಭಾಗಗಳನ್ನು ಲಘುದೃಷ್ಟಿಯಿಂದ ಕಾಣುತ್ತ, ಅನವಶ್ಯವಾದ, ಕೃತಕ ಕರ್ಮ ಕಾಂಡ - ಜ್ಞಾನಕಾಂಡಗಳ ಗೊಂದಲದಲ್ಲಿಬಿದ್ದೇ ವೈದಿಕರು ವೇದದ ಹತ್ಯಾಕಾಂಡವನ್ನು ಆರಂಭಿಸಿದರು ಎಂದು ನಾನು ಗ್ರಂಥಗಳಲ್ಲಿ ಬರೆದು ಮುದ್ರಿಸಿ ನಿರ್ವೇದಪಟ್ಟಿದ್ದೇನೆ ಪೂರ್ವೋತ್ತರ ಮೀಮಾಂಸಾ ಶಾಸ್ತ್ರಗಳನ್ನು 'ರಾಹು-ಕೇತು' ಮೀಮಾಂಸಾಶಾಸ್ತ್ರವನ್ನಾಗಿಸಿದ ದೌರ್ಭಾಗ್ಯ ಇದೇ ಎಂದು ನನ್ನ ಗುರುಗಳು ಹೇಳುತ್ತಿದ್ದರು! ಈ ಅನಾದರ ಇನ್ನಾದರೂ ತಪ್ಪಬೇಕು. ವೇದದ ಪ್ರತ್ಯಕ್ಷರವೂ ಭಗವಂತನನ್ನೇ ಕುರಿತದ್ದು.

**ಇತಿ ವಿದ್ಯಾ ತಪೋಯೋನಿಃ ಅಯೋನಿರ್ವಿಷ್ಣುರೇಡಿತಃ ।**
**ವಾಕ್‌ಯಜ್ಞೇನಾರ್ಚಿತೇದೇವಃ ಪ್ರೀಯತಾಂ ಮೇ ಜನಾರ್ದನಃ ॥**

ಎಂದು ವೇದಾಧ್ಯಯನ ಪರರೂ, ನಿತ್ಯಸ್ವಾಧ್ಯಾಯಶೀಲರೂ, ಏಕೆ ಪಠಿಸುತ್ತಾರೆ? **'ವಾಕ್‌ಯಜ್ಞ'** ಎನಿಸಿದ ಸಂಹಿತಾಪಾರಾಯಣವು, ಅರ್ಥಾನುಸಂಧಾನಯುಕ್ತವೂ, ಯೋಗ ಶೀಲವೂ, ಅನುಭವಾತ್ಮಕವೂ ಆದರೆ ಇದಕ್ಕಿಂತ ಹೆಚ್ಚಿನ ಪುರುಷಾರ್ಥ ಏನಿದೆ?

ಇಂಥ ಕೈಂಕರ್ಯಕ್ಕೆ ಎಳೆಸಿರುವ ಶ್ರೀ ಶೇಷಣ್ಣಶ್ರೌತಿಗಳು ಅಭಿನಂದನೀಯರು, ಪ್ರಾತಃಸ್ಮರಣೀಯರು, ಸಮಸ್ತವೇದಾಭಿಮಾನಿಗಳ ಗೌರವಾದರ ಕೃತಜ್ಞತೆಗಳಿಗೆ ಪಾತ್ರರು. ಅವರ ಪ್ರಯತ್ನ ನಿರ್ವಿಘ್ನವಾಗಿ ನಡೆದು ಸಮಗ್ರ ಸಾಮಸಂಹಿತೆಯ ಉದ್ದಿಷ್ಟ ಎಲ್ಲಾ ಸಂಪುಟಗಳು ಬೇಗ ಹೊರಬರಲಿ ಎಂದು ಭಗವಂತನನ್ನು ಪ್ರಾರ್ಥಿಸುತ್ತೇನೆ. ವಯೋವೃದ್ಧರಾದ ಇವರಿಗೆ ಭಗವಂತನು ದೀರ್ಘಾಯುಸ್ಸನ್ನು, ಐಶ್ವರ್ಯವನ್ನೂ ಕೊಟ್ಟು ಕರುಣಿಸಲಿ ಎಂದು ಬೇಡುತ್ತೇನೆ.

೯.೬.೨೦೦೨ ಇತಿ, ವೇದಜ್ಞಾನಾಂ ದಾಸಾನುದಾಸಃ
**ಬೆಂಗಳೂರು** **ಕೆ.ಎಸ್.ನಾರಾಯಣಾಚಾರ್ಯಃ**

(ಪ್ರೊ॥ ಕೆ.ಎಸ್.ನಾರಾಯಣಾಚಾರ್ಯಃ, ನಿವೃತ್ತ ಪ್ರಾಚಾರ್ಯಃ, ಕರ್ನಾಟಕ ಆರ್ಟ್ಸ್ ಕಾಲೇಜು, ಧಾರ್ವಾಡ, 'ವಿದ್ವನ್ಮಣಿ', 'ವೇದಭೂಷಣ', 'ವಾಲ್ಮೀಕಿ ಹೃದಯಜ್ಞಃ', 'ಗಮಕ ರತ್ನಾಕರ', 'ಕರ್ನಾಟಕ ಕಲಾಶ್ರೀ', 'ಪ್ರವಚನ ಕಲಾನಿಧಿ', 'ರಾಮಾಯಣಾಚಾರ್ಯ', 'ಪ್ರವಚನ ರತ್ನಾಕರ', 'ವೇದಸಂಸ್ಕೃತಿ ಪರಿಚಯ', ದಶಸಂಪುಟ ರಚಯಿತಾ ಮತ್ತು ಅರವತ್ತಕ್ಕೂ ಮೀರಿದ ವೇದ, ಪುರಾಣೇತಿಹಾಸಾಧಾರಿತ ಕೃತಿಗಳ ಕರ್ತಾ)

# ಸಂಪಾದಕರ ಬಿನ್ನಹ

ಸಮಸ್ತ ಭೂತಜಾತಕ್ಕೂ ಕಲ್ಯಾಣಕಾರಿಯಾದ ಮಾನವರ ಧರ್ಮಾರ್ಥಕಾಮ ಮೋಕ್ಷಗಳಿಗೆ ಸಾಧನವಾದ ಸನಾತನವಾದ ನಿತ್ಯವಾದ ವೇದವೆಂಬ ಮಹಾವೃಕ್ಷಕ್ಕೆ ಸಾರ್ಥಕತೆಯನ್ನೂ ಸೌಂದರ್ಯವನ್ನೂ ತರುತ್ತಿರುವ 'ಸಾಮವೇದ' ವೆಂಬ ದಿವ್ಯಪುಷ್ಪವು ಭಕ್ತಿಶ್ರದ್ಧೆ ಸಡಗರಗಳಿಂದ ನಮ್ಮ ಸಮಾಜಕ್ಕೆ ಇದೀಗ ಅರ್ಪಿತವಾಗುತ್ತಿದೆ. ಸಾಮವೇದ ಸಂಹಿತೆಯೆಂಬ ಕನ್ನಡದ ಈ ಗ್ರಂಥ ಸಂಪಾದನೆಗೆ ಶ್ರೀ ಸತ್ಯವ್ರತ ಸಾಮಶ್ರಮಿಭಟ್ಟಾಚಾರ್ಯರು ಸಂಸ್ಕೃತದಲ್ಲಿ ಸಂಪಾದಿಸಿ ಪ್ರಕಟಿಸಿರುವ ಶ್ರೀ ಸಾಯಣಾಚಾರ್ಯ ಭಾಷ್ಯ ಸಹಿತವಾದ ಸಾಮಸಂಹಿತೆಯ ೧೯೮೩ರ ಪುನರ್ಮುದ್ರಣ ಪ್ರತಿಯು ಆಧಾರವಾಗಿದೆ. 'ಋಕ್' ಗಳ ಪಾಠಕ್ಕೆ ಶ್ರೀಪಾದ ದಾಮೋದರ ಸಾತವಲೇಕರರು ಸಂಪಾದಿಸಿ ಪ್ರಕಟಿಸಿರುವ ೧೯೮೯ರ ಪ್ರತಿಯನ್ನು ಆಶ್ರಯಿಸಲಾಗಿದೆ. ಶ್ರೀ ಮಾಯೂರಂ ರಾಮನಾಥ ದೀಕ್ಷಿತರು ಸಂಸ್ಕೃತದಲ್ಲಿ ಸಂಪಾದಿಸಿ ಪ್ರಕಟಿಸಿರುವ ೧೯೭೮ರ ಮುದ್ರಿತ ಪ್ರತಿಯ ಪದಪಾಠವನ್ನೂ ಶ್ರೀ ರಾ.ಶಂಕರನಾರಾಯಣ ಶ್ರೌತಿಗಳಿಂದ ಪರಿಶೋಧಿಸಲ್ಪಟ್ಟು ೧೯೭೬ರಲ್ಲಿ ಶ್ರೀ ಶ್ರೀ. ಕಂಚಿಕಾಮಕೋಟಿ ಪೀಠಾಧಿಪತಿಗಳು ಪ್ರಕಟಿಸಿರುವ ಮುದ್ರಿತ ಪ್ರತಿಯ ಸಾಮಗಾನದ ಪಾಠವನ್ನೂ ಅನುಸರಿಸ ಲಾಗಿದೆ. ಸಾಮಗಾನ ಸಂಹಿತೆ, ಛನ್ದಾರ್ಚಿಕ ಸಂಹಿತೆ, ಪದಪಾಠ ಹಾಗೂ ಭಾಷ್ಯವನ್ನು ಪ್ರತ್ಯೇಕ ಪ್ರತ್ಯೇಕವಾಗಿಯೇ ಅಧ್ಯಯನ ಅಧ್ಯಾಪನಗಳಲ್ಲಿ ತೊಡಗಿಸಿ ಕೊಳ್ಳುವ ಪರಂಪರೆಯು ಬಾಲ್ಯದಿಂದಲೇ ರೂಢಿಸಿ ಕೊಳ್ಳುವುದಕ್ಕೆ ಅನುಕೂಲವಾಗಿದ್ದು ಅದನ್ನನುಸರಿಸಿ ಸಂಸ್ಕೃತದಲ್ಲಿ ಪ್ರತ್ಯೇಕವಾದ ಗ್ರಂಥಗಳು ರೂಪುಗೊಂಡಿವೆ.

ಈಗ ಬಾಲ್ಯದಿಂದಲೇ ರೂಢಿಸಿಕೊಳ್ಳಬೇಕಾದ ವೇದದ ಅಧ್ಯಯನ ಪರಂಪರೆ ಬಹುವಿರಳವಾಗುತ್ತಿರುವುದರಿಂದ ಲೌಕಿಕ ವಿದ್ಯಾಭ್ಯಾಸ ಮಾಡುವುದರೊಂದಿಗೆ ಯಥಾಶಕ್ತಿ ಯಥಾನುಕೂಲವಾಗಿ ಸಾಮವೇದಾಧ್ಯಯನ ಪರಂಪರೆಯನ್ನೂ ಮುಂದುವರೆಸಬೇಕೆಂಬ ಪ್ರವೃತ್ತಿಯುಳ್ಳವರಿಗೂ ಅರ್ಥಸಹಿತ ಕಲಿಯಬೇಕೆಂಬ ಜಿಜ್ಞಾಸುಗಳಿಗೂ ಕುತೂಹಲಿಗಳಾದ ಅನ್ಯವಿದ್ಯಾ ಪರಿಣತರಿಗೂ ಅನುಕೂಲವಾಗುವಂತೆ ಸಾಮವೇದದ ಪ್ರತಿಯೊಂದು ಋಕ್ ಮನ್ತ್ರಕ್ಕೂ ಸಂಬಂಧಿಸಿದ ಋಕ್ - ಋಷಿ, ಛನ್ದಸ್ಸು, ದೇವತಾ, ಪದ, ಗಾನ, ಸಾಯಣಭಾಷ್ಯ, ವಿಶೇಷ ವಿಷಯಗಳು, ಕನ್ನಡದಲ್ಲಿ ಅರ್ಥ, ಭಾವಾನುವಾದ, ಪದ್ಯಾನುವಾದ ಹಾಗೂ ಸಾಮವೇದದ ಸಮಸ್ತ ಋಕ್ ಮನ್ತ್ರಗಳ ಅಕಾರಾದಿ ಅಕ್ಷರಾನುಕ್ರಮಣಿಕೆ, ದಶತಿ, ಖಂಡ ಪ್ರಪಾಠಕ, ಅಧ್ಯಾಯ, ಕಾಂಡ ಎಂಬ ವಿಭಾಗ ಸಂಕೇತ

ಸಂಖ್ಯೆ ಮುಂತಾದ ಅಧ್ಯಯನಾನುಕೂಲ ಪರಿಕರಗಳು ಒಂದು ನಿರ್ದಿಷ್ಟಕ್ರಮದಲ್ಲಿರುವಂತೆ ಪ್ರಕೃತ ಗ್ರಂಥವನ್ನು ರೂಪಿಸಲಾಗಿದೆ. ಈ ಕ್ರಮವು ಏಕತಾನದ ಮಂಪರಿಲ್ಲದೆ ಸುಲಭಗ್ರಾಹ್ಯವಾಗಿದ್ದು, ಸಾಮಗಾನವನ್ನು ಬಹುಶೀಘ್ರವಾಗಿಯೂ ಹೆಚ್ಚು ಸಮರ್ಥವಾಗಿಯೂ ಕಲಿಯಲೂ ಕಲಿಸಲೂ ಸಾಧ್ಯವೆಂಬುದು ಪ್ರತಿಷ್ಠಾನವು ಕೆಲವು ವರ್ಷಗಳಿಂದ ನಡೆಸುತ್ತಿರುವ ಅಧ್ಯಯನ ಅಧ್ಯಾಪನದಿಂದ ಮನದಟ್ಟಾಗಿದೆ. ಇಲ್ಲಿ ಅಕ್ಷರಗ್ರಹಣ, ಗ್ರಂಥಪಠನ, ಮೇಧಾಶಕ್ತಿಗಳ ಮೇಳವಲ್ಲದೆ ಖ್ಯಾತಿ ಲಾಭ ಪೂಜಾ ವಿದೂರವೂ ಲೋಕಸಂಗ್ರಹ ನಿಷ್ಠವೂ ವಸ್ತುನಿಷ್ಠವೂ ಸಾಂಪ್ರದಾಯಕವೂ ಆದ ತತ್ತ್ವಚಿಂತನೆಯೂ ಇದೆ.

ಅಧ್ಯಯನ ಸೌಕರ್ಯಕ್ಕಾಗಿಯೂ ಪರಾಮರ್ಶೆಗಾಗಿಯೂ ಈ ಗ್ರಂಥದಲ್ಲಿ ಉದ್ಧೃತವಾಗಿರುವ ಮನ್ತ್ರ, ಗಾನ, ಶ್ಲೋಕ, ವಾಕ್ಯಗಳ ಸ್ಥಳನಿರ್ದೇಶನವನ್ನು ಮಾಡಲಾಗಿದೆ. ವೇದವು ನಿಂತನೀರಾಗಿರದೆ ಪರ್ಯಾಯ ಚಿಂತನೆಗಳಿಗೆ ಅವಕಾಶವನ್ನು ನೀಡುವ ನಿತ್ಯ ನೂತನವಾದ ಅಕ್ಷಯಭಂಡಾರವಾಗಿದೆಯೆಂಬುದನ್ನು ಅಧ್ಯಯನಶೀಲರ ಗಮನಕ್ಕೆ ತರಬೇಕೆಂದು ಕೆಲವು ಪದಗಳಿಗೆ ಸಂಭವನೀಯವಾದ ಬೇರೆಬೇರೆ ಅರ್ಥಗಳನ್ನೂ ನೀಡಲಾಗಿದೆ. ಸಾಮವೇದಕ್ಕೆ ವಿಶಿಷ್ಟವಾದ ತಾಂತ್ರಿಕ ಪದಗಳು ಮೂಡಿಬಂದಿರುವ ಪ್ರಥಮ ಸಂದರ್ಭದಲ್ಲಿಯೇ ಇವುಗಳ ಕನ್ನಡ ಅರ್ಥವಿವರಣೆಗಳನ್ನೂ ನೀಡಿ ಪರ್ಯಾಯ ವಾಗಿಯೂ ಜೊತೆ ಜೊತೆಯಾಗಿಯೂ ಉಪಯೋಗಿಸಿ ಪರಿಚಯಿಸಲಾಗಿದೆ. ಋಕ್, ಪದ, ಗಾನ, ಸ್ವರ, ಭಕ್ತಿ, ಸಂಕೇತ, ಸಂಖ್ಯೆ ಮುಂತಾದ ಸಾಮಗಾನಾವಯವಗಳನ್ನು ಈ ಗ್ರಂಥದ ಪ್ರಸ್ತಾವನೆಯಲ್ಲಿ ವಿವರಿಸಿ ಸಾಮ ವೇದಾಧ್ಯಯನವನ್ನು ನೇರ್ಪುಗೊಳಿಸಲು ಅವಶ್ಯಕವಾದ ಬೌದ್ಧಿಕ ಹಿನ್ನಲೆಯನ್ನು ಯಥಾ ಶಕ್ತಿ ಒದಗಿಸಲಾಗಿದೆ.

ಸಾಮವೇದ ಸಂಹಿತೆಯನ್ನು ಕನ್ನಡದಲ್ಲಿ ಸಂಪಾದಿಸಿ ಪ್ರಕಟಿಸಬೇಕೆಂಬ ಆಶಯ ವನ್ನು ವ್ಯಕ್ತಪಡಿಸುತ್ತಿದ್ದಂತೆಯೇ ಸೂಪರಿಂಟೆಂಡಿಂಗ್ ಇಂಜನಿಯರ್ ಆಗಿ ಸೇವೆ ಸಲ್ಲಿ ಸುತ್ತಲೇ ವೇದ ವಿದ್ವಾಂಸರೂ, ಯೋಗಸಾಧಕರೂ ಆಗಿರುವ **ಶ್ರೀ ಕೆ.ಎಲ್.ರಾಮಸ್ವಾಮಿ** *ಎಂ.ಟೆಕ್.*, ಈ ಕಾರ್ಯವನ್ನು ವ್ರತವಾಗಿ ಸ್ವೀಕರಿಸಿ ಋಕ್, ಪದ, ಗಾನ, ಸಾಯಣಭಾಷ್ಯ ಹಾಗೂ ಕನ್ನಡಾನುವಾದವನ್ನೊಳಗೊಂಡ ಆಗ್ನೇಯಕಾಂಡದ ಕರಡುಪ್ರತಿಯನ್ನು ೧೯೯೩ ರಲ್ಲಿ ಸಿದ್ಧಪಡಿಸಿಟ್ಟು ಪ್ರಥಮ ಸಂಪುಟವು ಈಗ ಬೆಳಕಿಗೆ ಬರಲು ಕಾರಣಪುರುಷರಾಗಿದ್ದು ಮುಂದಿನ ಸಂಪುಟಗಳನ್ನೂ ಹೀಗೆಯೇ ಸಿದ್ಧಪಡಿಸುವ ಕೈಂಕರ್ಯದಲ್ಲಿ ತೊಡಗಿದ್ದಾರೆ.

'ದ್ರಾಹ್ಯಾಯಣ ಪ್ರತಿಷ್ಠಾನ'ದ ಗ್ರಂಥ ಸಂಪಾದನಾ ಕಾರ್ಯದಲ್ಲಿ ಪ್ರಾರಂಭ ದಿಂದಲೂ ಸಹಾಯಹಸ್ತನೀಡುತ್ತಿರುವ, ಉತ್ಸಾಹ ತುಂಬುತ್ತಿರುವ ಅವಿಳಂಬ ಸರಸ್ವತಿ ಯೆಂದೇ ಖ್ಯಾತನಾಮರಾಗಿರುವ **'ಶತಾವಧಾನಿ ಡಾ|| ಶ್ರೀ ರಾ.ಗಣೇಶ್'** ರವರಲ್ಲಿ ಸಾಮವೇದವು **ವೇದಾರ್ಥಗರ್ಭಿತವಾದ ದಿವ್ಯವಾದ, ಅನುರೂಪವಾದ, ಕನ್ನಡ ಪದ್ಯಗಳಾಗಿ** ಮೈದಳೆದು ಕನ್ನಡಕಾವ್ಯರಸಿಕರೂ ಕನ್ನಡದ ಕವಿಗಳೂ ಗಮಕಿಗಳೂ, ಸಂಗೀತಜ್ಞರೂ, ವೇದಪುರುಷನ ಭವ್ಯವಾದ ದೇಗುಲವನ್ನು ಧೈರ್ಯವಾಗಿ ಪ್ರವೇಶಿಸಲು ಅನುವು ಮಾಡಿಕೊಟ್ಟಿರುವ ಪ್ರಥಮರೆಂಬ ಹೆಗ್ಗಳಿಕೆಗೆ, ಕೀರ್ತಿಗೆ ಪಾತ್ರರನ್ನಾಗಿ ಮಾಡಿ ನಮ್ಮ ನೆಚ್ಚಿನ ಕನ್ನಡ ಕುವರ ಡಾ|| ಶ್ರೀ ರಾ.ಗಣೇಶ್‌ರವರನ್ನು ಆಶೀರ್ವದಿಸಿದೆ. ಈ ಗ್ರಂಥದ ವಿಷಯ ವಿನ್ಯಾಸವನ್ನು ರೂಪುಗೊಳಿಸುವುದರಲ್ಲಿಯೂ ನೆರಳುಪ್ರತಿಯನ್ನು ಬೇಜಾರುಪಡದೆ ತಿದ್ದಿ, ಲೋಪದೋಷಗಳನ್ನು ಸರಿಪಡಿಸುವಲ್ಲಿಯೂ, ಸಾಮವೇದ ಸಂಹಿತೆಯ ಮುಂದಲ ಸಂಪುಟಗಳು ನಿರ್ವಿಘ್ನವಾಗಿ ವೇದಾಭಿಮಾನಿಗಳ ಕೈಸೇರಬೇಕೆಂದು ಶಾಸ್ತ್ರೋಕ್ತವಾದ ಸ್ವಸ್ತಿವಾಚನರೂಪವಾದ ಹಾರೈಕೆಯನ್ನು ಬರೆದುಕೊಡುವುದರಲ್ಲಿಯೂ ಅಪರೂಪದ ಆಕರ ಗ್ರಂಥಗಳನ್ನು ಪರಿಚಯಿಸಿಕೊಡುವುದರಲ್ಲಿಯೂ ಸಾಮವೇದದ ಬಗೆಗಿರುವ ತಮ್ಮ ಅತಿಶಯವಾದ ಶ್ರದ್ಧಾಭಕ್ತಿಯನ್ನು ಕಾರ್ಯರೂಪಕ್ಕಿಳಿಸಿ - **ಈ ತೆರನ ಗ್ರಂಥಗಳು ಬೆಳಕಿಗೆ ಬರಲು ಘನತೆವೆತ್ತ ಮಹಾವಿದ್ವಾಂಸರು ಹೇಗೆ ಸಹಕರಿಸಬೇಕೆಂಬ** ಮೇಲ್ಪಙ್ಕ್ತಿಯನ್ನು ಹಾಕಿಕೊಟ್ಟು ಸಮಾಜಪೂಜಿತರಾಗಿದ್ದಾರೆ.

ಸೆಂಟರ್ ಫಾರ್ ಅಡ್ವಾನ್ಸ್ ಕಂಪ್ಯೂಟಂಗ್, ಸಿ-ಡಾಕ್‌ನ ಪರಂಪರೆ ಸಂಪ್ರದಾಯ ಗುಂಪಿನ ಸಂಯೋಜಕರಾಗಿ, ಉನ್ನತ ತಾಂತ್ರಿಕ ವೃತ್ತಿ ನಿರತರಾಗಿರುವ **ಡಾ|| ಪಿ.ರಾಮಾನುಜನ್**'ರವರು ವೇದವಾರಿಧಿ, ವೇದವಿಜ್ಞಾನಕೋವಿದ, ವೈದಿಕಭೂಷಣ ವಾಚಸ್ಪತಿ ಪದವಿಗಳಿಂದಲಂಕೃತರಾಗಿ ವೈದಿಕ ಪರಂಪರೆಯಲ್ಲಿ ಸಂಸ್ಕೃತ ಮತ್ತು ವೇದವಿದ್ಯಾ ಪರಿಣತರಾಗಿ ಶಾಸ್ತ್ರೋಕ್ತ ವೇದಾಧ್ಯಯನಾಧ್ಯಾಪನಗಳನ್ನೂ ಅಕ್ಷರಶಃ ವೈದಿಕ ವೇಷ ಭೂಷಣ, ನಿತ್ಯ ಜೀವನಕ್ರಮವನ್ನೂ ರೂಢಿಸಿಕೊಂಡು ಬಂದಿರುವ ಬಹು ಅಪರೂಪದ ಸಜ್ಜನರು, ವೈದಿಕ ಕಾರ್ಯಕ್ರಮಗಳಲ್ಲಿ ಶಾಸ್ತ್ರಸಂಗೋಷ್ಠಿಗಳಲ್ಲಿ ಸಂಭ್ರಮ ಉತ್ಸಾಹಗಳಿಂದ ಪಾಲ್ಗೊಳ್ಳುತ್ತಾ ವೈದಿಕ ಸಂಸ್ಕೃತಿಯನ್ನು ಭವ್ಯವಾಗಿ ಬೆಳಸುವ ಕೈಂಕರ್ಯದಲ್ಲಿ ತಮ್ಮನ್ನೇ ತೊಡಗಿಸಿಕೊಂಡಿರುವ ಈ ಮಹನೀಯರು **'ದ್ರಾಹ್ಯಾಯಣ ಪ್ರತಿಷ್ಠಾನ'** ದ ಗ್ರಂಥಗಳ ಬಗೆಗೆ ಅಭಿಮಾನ ಬೆಳೆಸಿಕೊಂಡು ಪ್ರೋತ್ಸಾಹಿಸುತ್ತಿದ್ದಾರೆ. ಇವರು ಪ್ರಕೃತ ಸಾಮವೇದ ಸಂಹಿತೆಯ

ಈ ಪ್ರಥಮ ಸಂಪುಟವನ್ನು ಸಂಪೂರ್ಣವಾಗಿ ಓದಿ, ಸಂತುಷ್ಟರಾಗಿ ಈ ಗ್ರಂಥದ ಮುಂಬರುವ ಪ್ರಯೋಜನಗಳನ್ನು ಮುಂಗಾಣುತ್ತಾ ಅಭಿನಂದನಾ ಲೇಖನವನ್ನು ಬರೆದುಕೊಟ್ಟು ವೇದಪುರುಷನ ಕೃಪೆಗೆ ಪಾತ್ರರಾಗಿದ್ದಾರೆ.

ಧಾರವಾಡ ಕರ್ನಾಟಕ ಆರ್ಟ್ಸ್‌ಕಾಲೇಜಿನ ನಿವೃತ್ತ ಪ್ರಾಚಾರ್ಯರೂ ಆಂಗ್ಲಭಾಷಾ ವಿಭಾಗದ ಮುಖ್ಯಸ್ಥರೂ ವೇದಸಂಸ್ಕಾರಗಳ ಪ್ರಯೋಗ ಪರಿಣತರೂ ವೇದಪುರಾಣೇತಿಹಾಸ ಆಧಾರಿತ ಬಹುಸಂಖ್ಯೆಯ ಕೃತಿ ರಚನೆಗಳಿಂದಲೂ ಪ್ರವಚನಗಳಿಂದಲೂ ಗಮಕವಾಚನ ಗಳಿಂದಲೂ ಆರ್ಷೇಯ ಸಂಸ್ಕೃತಿಯ ಬಹುಮುಖ ಪರಿಚಯವನ್ನು ನಾಡಿನ ಜನತೆಗೆ ಮಾಡಿ ಕೊಡುತ್ತಾ ಕನ್ನಡಿಗರಿಗೆ ಬಹುಪರಿಚಿತರಾಗಿರುವವರೂ ಪ್ರಖ್ಯಾತ ಸಂಘ ಸಂಸ್ಥೆಗಳಿಂದ ವೇದಭೂಷಣ ವಿದ್ವನ್ಮಣಿ ಗಮಕ ಕಲಾರತ್ನ ಮುಂತಾದ ವಿವಿಧ ಪ್ರಶಸ್ತಿಗಳಿಂದ ಅಲಂಕೃತರೂ ಪೂಜಿತರೂ ಆಗಿರುವ ವೇದಮೂರ್ತಿ **ಶ್ರೀ ಕೆ.ಎಸ್. ನಾರಾಯಣಾಚಾರ್ಯರು** ದ್ರಾಹ್ಯಾಯಾಣ ಪ್ರತಿಷ್ಠಾನದ ಸಾಮವೇದದ ಗ್ರಂಥಗಳ ಪ್ರಥಮ ಪರಿಚಯದಿಂದಲೇ ಸಂತುಷ್ಟರಾಗಿ ಉತ್ಸಾಹದಿಂದ ಈ ಸಾಮವೇದ ಸಂಹಿತೆಯ ಪ್ರಥಮ ಸಂಪುಟದ ನೆರಳು ಪ್ರತಿಯನ್ನು ಅವಲೋಕಿಸಿ ಈ ಕೃತಿಶ್ರೇಣಿಗೆ ಶುಭಾಶಂಸನೆ ಮಾಡಿ ಸಾಮವೇದದ ಬಗೆಗಿರುವ ತಮ್ಮ ಕಳಕಳಿಯನ್ನು ವ್ಯಕ್ತಪಡಿಸಿರುವ ಸಹೃದಯತೆ ಸಜ್ಜನಿಕೆಗಾಗಿ ಮಾರುಹೋಗುತ್ತಾ ಈ ಮಹಾನುಭಾವರಿಗೆ ದ್ರಾಹ್ಯಾಯಣ ಪ್ರತಿಷ್ಠಾನವು ಸದಾ ಲೇಸನ್ನೇ ಬಯಸುತ್ತದೆ.

ವಿಶ್ರಾಂತ ರೈಲ್ವೆ ಇಂಜಿನಿಯರೂ, ದ್ರಾಹ್ಯಾಯಣ ಪ್ರತಿಷ್ಠಾನದ ಅಧ್ಯಕ್ಷರೂ, ಸಾಮ ವೇದಾಧ್ಯಯನ ಅಧ್ಯಾಪನಾನಿರತರೂ, ವೇದವಾರಿಧಿ, ಸಾಮವೇದವಾರಿಧಿ, ವೇದಶ್ರೀ ಪದವಿಗಳಿಂದಲಂಕೃತರೂ ಆದ **'ಶ್ರೀ ಟಿ.ಗೌರೀಪತಿಗಳು'** ವೇದಸಂಗೋಷ್ಠಿಗಳಲ್ಲಿ ವೇದಾಭಿಮಾನಿಗಳ ಸಭೆಸಮಾರಂಭಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾ ಸಾಮವೇದದ ಹಿರಿಮೆಗರಿಮೆಗಳನ್ನು ಸಮಾಜಬಾಂಧವರಿಗೆ ಪರಿಚಯ ಮಾಡಿಕೊಡುವ ಕೈಂಕರ್ಯದಲ್ಲಿ ತೊಡಗಿದ್ದಾರೆ. ಈ ಮಹನೀಯರು ಸಾಮವೇದದ ಜೀವನಾಡಿಯೇ ಆಗಿರುವ ಸ್ವರವನ್ನು ಪ್ರತಿಷ್ಠಾನದ ಹಿಂದಿನ ಗ್ರಂಥಗಳಲ್ಲಿ ತಿದ್ದಿದಂತೆಯೇ ಪ್ರಕೃತ ಸಾಮವೇದ ಸಂಹಿತಾ ಗ್ರಂಥದ ಪ್ರಥಮ ಸಂಪುಟದಲ್ಲಿ ಋಕ್, ಪದ, ಗಾನಗಳ ಸ್ವರವನ್ನೂ, ಬೇಜಾರಿಲ್ಲದೆ ಆಲಸ್ಯಕ್ಕೆಡೆಕೊಡದೆ ಒಂದುಬಾರಿಯಲ್ಲ, ಮೂರುಬಾರಿ ತಿದ್ದಿ ಖಚಿತಪಡಿಸಿಕೊಂಡೇ ಮುದ್ರಣಕ್ಕೆ ಒಪ್ಪಿಸಿದ್ದಾರೆ. ಪಠ್ಯದಲ್ಲಿನ ದೋಷಗಳನ್ನೂ ಗ್ರಂಥಮುದ್ರಣದಲ್ಲಿನ ದೋಷಗಳನ್ನೂ ದೂರ ಮಾಡಲು ಪ್ರಯತ್ನಿಸಿದ್ದಾರೆ. ತಮ್ಮಲ್ಲಿನ ಗ್ರಂಥಗಳನ್ನು ಕೊಟ್ಟು

ಗ್ರಂಥಸಂಪಾದನೆಗೆ, ಪ್ರಕಟಣೆಗೆ, ಅನೇಕ ರೀತಿಯಲ್ಲಿ ನೆರವಾಗಿ ವೇದಪುರುಷನ ಕೃಪೆಗೆ ಪಾತ್ರರಾಗಿದ್ದಾರೆ.

ವಿಶ್ರಾಂತ ಡೆಪ್ಯುಟಿ ಇಂಜಿನಿಯರೂ, ಯೋಗಸಾಧಕರೂ, ವೇದವೇದಾಂತ ವಿಜ್ಞಾನ ಅಧ್ಯಯನಶೀಲರೂ, ಆಯುರ್ವೇದ ಪ್ರಯೋಗ ನಿರತರೂ, ಸಮಾಜಸೇವಾ ಕಾರ್ಯಗಳಲ್ಲಿ ನಿಷ್ಠೆಯಿಂದ ಪಾಲ್ಗೊಳ್ಳುವವರೂ ದ್ರಾಹ್ಯಾಯಣ ಪ್ರತಿಷ್ಠಾನದ ಸಮಸ್ತಕಾರ್ಯಗಳಿಗೂ ಅಂದಿನಿಂದ ಸಾಕ್ಷೀಭೂತರಾಗಿರುವವರೂ ಆದ **ಶ್ರೀ ಹೆಚ್.ಸುಬ್ರಹ್ಮಣ್ಯಶಾಸ್ತ್ರಿಗಳು** ಪರಾಮರ್ಶಗ್ರಂಥಗಳನ್ನೂ ಅವತರಣಿಕೆಗಳನ್ನೂ ಒದಗಿಸುತ್ತಾ ತಮ್ಮದೇ ಆದ ಗ್ರಂಥ ಭಂಡಾರದ ನೆರವು ನೀಡುತ್ತಾ ಪ್ರಕೃತ ಗ್ರಂಥದ ವಿವಿಧ ಅನುಕ್ರಮಣಿಕೆಗಳನ್ನು ಸಿದ್ಧಪಡಿಸುವುದರಲ್ಲಿಯೂ ಡಿ.ಟಿ.ಪಿ ಆಗಿರುವ ಪ್ರತಿಗಳನ್ನು ಕೈಬರೆಹದ ಪ್ರತಿಗಳೊಂದಿಗೆ ತಾಳೆ ನೋಡುವುದರಲ್ಲೂ ಎಡೆಬಿಡದೆ ಸಹಾಯಹಸ್ತ ನೀಡುತ್ತಾ ವೇದಪುರುಷನ ಆಶೀರ್ವಾದಕ್ಕೆ ಪಾತ್ರರಾಗಿದ್ದಾರೆ. ಖ್ಯಾತ ನಾಮರಾದ ವಿಜ್ಞಾನಿಗಳೊಡನೆ ರಾಷ್ಟ್ರೀಯ ವಿಜ್ಞಾನಮಂದಿರಗಳಲ್ಲಿ ಬಹುರಾಷ್ಟ್ರೀಯ ಕಂಪನಿಗಳಲ್ಲಿ ಜವಾಬ್ದಾರಿಗಳನ್ನು ನಿರ್ವಹಿಸಿ ವಿಶ್ರಾಂತರಾಗಿರುವವರೂ, ಸತ್ಸಂಗನಿರತರೂ ಮೂರೂ ವೇದಗಳಲ್ಲಿ ಸಾಕಷ್ಟು ಪ್ರವೇಶವಿರುವವರೂ ವೇದಸೇವಾಚತುರ ಎಂಬ ಬಿರುದಾಂಕಿತರೂ ಆದ **ಶ್ರೀ ದೇವನಹಳ್ಳಿ ಶ್ರೀನಿವಾಸರವರು** ತಮ್ಮ ಇಂಗ್ಲಿಷ್, ಕನ್ನಡ, ಸಂಸ್ಕೃತ, ಬಂಗಾಳಿ ಲಿಪಿ ಮತ್ತು ಭಾಷೆಗಳ ತಿಳುವಳಿಕೆಯಿಂದ ಬಂಗಾಲಿ ಲಿಪಿ ಸಾಮ್ಯದ ಸಂಸ್ಕೃತಾಕ್ಷರದ ತೊಂಬತ್ತು ಪುಟಗಳ ಸಾಯಣ ಭಾಷ್ಯಾವತರಣಿಕೆಯನ್ನು ಸ್ಪಷ್ಟವಾದ ಕನ್ನಡಲಿಪಿಯಲ್ಲಿ ಸುಗಮವಾಗಿ ಓದಲನುಕೂಲವಾಗುವಂತೆ ಬರೆದುಕೊಟ್ಟು ವೇದಪುರುಷನ ಸೇವೆಯಲ್ಲಿ ಭಾಗಿಯಾಗಿದ್ದಾರೆ.

ತಾತಾವಿಜ್ಞಾನಮಂದಿರದಲ್ಲಿ ವೃತ್ತಿನಿರತರೂ, ಸುಪ್ರಸಿದ್ಧ ಗಮಕಿಗಳೂ, ಸಂಗೀತಜ್ಞರೂ, ಕನ್ನಡ ಕಾವ್ಯಗಳನ್ನು ಗಮಕಕ್ಕೆ ಒಗ್ಗಿಸಿಕೊಂಡು, ಕನ್ನಡ ಕಾವ್ಯರಸಿಕರ ಮನದಣಿಸುವವರೂ ಗಮಕ ಕಲೆಯ ಅಭಿವೃದ್ಧಿಗೆ ಸರ್ವತೋಮುಖ ಸೇವೆ ಸಲ್ಲಿಸುತ್ತಿರುವವರೂ ಆದ **'ಕಡಬ ಸುಬ್ರಹ್ಮಣ್ಯ'** ಪ್ರಕೃತ ಗ್ರಂಥದಲ್ಲಿನ ಭಾಷೆಯ ಶಿಥಿಲತೆ ಆದಿ ಲೋಪದೋಷಗಳನ್ನು ತಿದ್ದಿ ಭಾಷೆಯ ಸುಭಗತೆಯನ್ನು ಉತ್ತಮಗೊಳಿಸಿ ವೇದಪುರುಷನ ಆಶೀರ್ವಾದಕ್ಕೆ ಪಾತ್ರರಾಗಿದ್ದಾರೆ. ನಾಗಮಂಗಲ ಬ್ರಾಹ್ಮಣ ಸಭೆಯ ಸರ್ವತೋಮುಖ ಬೆಳವಣಿಗೆಗೆ ಕಾರಣರಾದ ವೇದ ಮತ್ತು ವೇದಸಂಸ್ಕೃತಿಯ ಅನುಷ್ಠಾನದಲ್ಲಿ ಬ್ರಾಹ್ಮಣ ಸಭೆಗಳಿಗೆಲ್ಲಾ ಅನುಕರಣೀಯವಾದ ಸುಸಂಘಟಿತ ಸಾಮೂಹಿಕ ಪ್ರಯತ್ನದಲ್ಲಿ ಬಹುಯಶಸ್ವಿ

ಯಾಗಿರುವವರೂ ಋಗ್ವೇದ ಅಧ್ಯಯನ ಅಧ್ಯಾಪನಗಳಲ್ಲಿ ನಿರತರಾಗಿರುವವರೂ ಆದ **ಶ್ರೀ ಎಂ.ಆರ್.ನಾರಾಯಣಶಾಸ್ತ್ರಿಗಳು** ತಮ್ಮ ಗ್ರಂಥಭಂಡಾರವನ್ನೇ ಒದಗಿಸಿ ತಮ್ಮ ಅನುಭವ ವನ್ನೂ ವಿದ್ವತ್ತನ್ನೂ ಪ್ರತಿಷ್ಠಾನದೊಂದಿಗೆ ಹಂಚಿಕೊಂಡು ವೇದಪುರುಷನ ಕೈಂಕರ್ಯದಲ್ಲಿ ಪಾಲ್ಗೊಂಡಿರುವ ಧನ್ಯತೆಯನ್ನು ಕಂಡುಕೊಂಡಿದ್ದಾರೆ.

ವಿಶ್ರಾಂತ ಪ್ರಾಚಾರ್ಯರೂ ದಶಗ್ರಂಥಿ ಆದಿ ಎಲ್ಲಾ ನಾಲ್ಕೂ ವೇದಗಳ ಷಡಂಗಗಳ ಆಗಮಗಳ ಹಾಗೂ ಸಮಸ್ತ ಆರ್ಷೇಯ ಗ್ರಂಥಗಳನ್ನೆಲ್ಲಾ ಸಂಗ್ರಹಿಸುತ್ತಾ ಅವುಗಳೆಲ್ಲ ವನ್ನೂ ಅರ್ಥಸಹಿತ ನಿತ್ಯಪಾರಾಯಣ ಮಾಡುತ್ತಿರುವ ಡಾ|| **ಕೆ.ಟಿ.ವಿಶ್ವನಾಥರವರು** ತಮ್ಮ ಗ್ರಂಥಭಂಡಾರದ ನೆರವನ್ನಿತ್ತು ಪ್ರತಿಷ್ಠಾನದ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಎನ್.ಎ.ಎಲ್.ನಲ್ಲಿ ವಿಜ್ಞಾನಿಗಳೂ ಸಂಸ್ಕೃತವ್ಯಾಕರಣದಲ್ಲಿ ಎಂ.ಎ., ಪದವಿಧರರೂ ಆದ **ಶ್ರೀ ಎಸ್.ಎಸ್.ಸುಬ್ರಹ್ಮಣ್ಯಶಾಸ್ತ್ರಿ** ಎಂ.ಇ., ಇವರು ತಮ್ಮ ಗ್ರಂಥಭಂಡಾರದ ನೆರವು ನೀಡಿ ವೇದದ ಕೆಲಸಕ್ಕೆ ಪ್ರೋತ್ಸಾಹಿಸಿದ್ದಾರೆ. ಕಂಚಿಕಾಮಕೋಟಿಪೀಠದ ಮಹಾಸ್ವಾಮಿಗಳ ಪ್ರೀತಿಪಾತ್ರರಾದ ಸಾಮವೇದ ಮತ್ತು ಸಂಸ್ಕೃತ ವಿದ್ಯಾಭ್ಯಾಸ ನಿರತರಾದ **ಶ್ರೀ ಜ್ಯೋತಿರಾದಿತ್ಯ**, ಇವರು ಪಂಜಾಬ್ ವಿಶ್ವವಿದ್ಯಾಲಯದಿಂದ ಅಪರೂಪದ ಆಕರ ಗ್ರಂಥ ಗಳನ್ನು ಎರವಲು ಕೊಟ್ಟು ವೇದಪುರುಷನ ಕೃಪೆಗೆ ಪಾತ್ರರಾಗಿದ್ದಾರೆ.

ವಿಶ್ರಾಂತ ತಹಸೀಲ್ದಾರರೂ ಮೂರೂ ವೇದಗಳ ಪ್ರಯೋಗ ಚತುರರೂ ಆದ **ಶ್ರೀ ವೆಂಕಟರಾಮ ಪುರಾಣಿಕರೂ**, ಪ್ರತಿಷ್ಠಾನದ ಗ್ರಂಥಸಂಪಾದನೆಯಲ್ಲಿ ನೆರವಾಗಿರುವುದಲ್ಲದೆ ಸಾಮವೇದಿಗಳ ವಿಳಾಸಗಳನ್ನು ಗುರುತಿಸಿ ಅವರುಗಳ ಮನೆಗೆ ಹೋಗಿ ಪ್ರತಿಷ್ಠಾನದ ಗ್ರಂಥಗಳನ್ನು ಪರಿಚಯಿಸುತ್ತಾ ವಿತರಣೆ ಮಾಡುತ್ತಾ ವೇದಪುರುಷನ ಸೇವೆಯಲ್ಲಿ ಸಂತೋಷವನ್ನು ಪಡೆಯುತ್ತಿದ್ದಾರೆ. ಕೈಗಾರಿಕೋದ್ಯಮಿಗಳೂ, ವೇದಾಭಿಮಾನಿಗಳೂ ಆದ **ಶ್ರೀ ಬಿ.ಎನ್.ನಾಗರಾಜ್**ರವರೂ ಸುಪ್ರಸಿದ್ಧ ಗಮಕಿಗಳಾದ **ಶ್ರೀ ಸಾಮಗ ಶ್ರೀಕಂಠಯ್ಯ ನವರೂ**, ಅವರ ಸುಪುತ್ರರೂ ದ್ರಾಹ್ಯಾಯಣ ಪ್ರತಿಷ್ಠಾನದ ಸಾಮವೇದ ಗ್ರಂಥಗಳ ಪ್ರಕಟಣೆ ಹಾಗೂ ವಿತರಣೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ತನುಮನಧನಗಳಿಂದ ವೇದಪುರುಷನನ್ನು ಅರ್ಚಿಸುತ್ತಾ ಭಗವಂತನ ಕೃಪಾಶೀರ್ವಾದಗಳಿಗೆ ಪಾತ್ರರಾಗಿದ್ದಾರೆ.

ವೇದಾಧ್ಯಯನ ಅಧ್ಯಾಪನದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಓಮ್ ಕಾಮ್ಪ್ ಸೆಂಟರಿನ ಒಡೆಯರಾದ ಗೆಳೆಯ **ಕಿಶೋರ್ ಕಾಶ್ಯಪರು** ಲಾಭದಾಯಕವಲ್ಲದ ಕ್ಲಿಷ್ಟಕರವಾದ

ಅಪರೂಪದ ತ್ರ್ಯಕ್ಷರ, ಚತುರಕ್ಷರಗಳಿಂದ ವಿಶೇಷ ಸ್ವರವಿನ್ಯಾಸಗಳಿಂದ, ವಿವಿಧ ಆಶಯಗಳ ಸಂಖ್ಯಾಸಂಕೇತಗಳಿಂದೊಡಗೂಡಿದ ಈ ಗ್ರಂಥದ ಡಿ.ಟಿ.ಪಿ.ಯನ್ನು ತಾಂತ್ರಿಕ ನಿಪುಣತೆ ಯಿಂದಲೂ ಭಕ್ತಿಶ್ರದ್ಧೆಗಳಿಂದಲೂ ಸುಂದರವಾಗಿ, ಅಚ್ಚುಕಟ್ಟಾಗಿ ನಿರ್ವಹಿಸಿ ಹೊಗಳಿಕೆಗೆ ಪಾತ್ರರಾಗಿದ್ದಾರೆ. ಕೃಷಿ ವ್ಯಾಪಾರ ಇಂಜನಿಯರಿಂಗ್ ವೃತ್ತಿಗಳಲ್ಲಿ ನಿರತರಾಗಿಯೂ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ದೈವಪ್ರೇರಿತರಾಗಿ ಭಾರತೀಯ ಚಿಂತನೆ ಹಾಗೂ ಜೀವನಕ್ರಮಗಳೆಲ್ಲವೂ ವೇದಮೂಲವೆಂದೇ ಕನ್ನಡ, ತೆಲುಗು, ಇಂಗ್ಲಿಷ್ ಭಾಷೆಗಳಲ್ಲಿ ವಿದೇಶಗಳಲ್ಲಿ ಹಾಗೂ ಭಾರತ ದೇಶದಾದ್ಯಂತ ಉಪನ್ಯಾಸ ಮಾಡುತ್ತಾ ವೇದಸಂಗೋಷ್ಠಿ ಗಳನ್ನೂ ಚರ್ಚಾಕೂಟಗಳನ್ನೂ ವಿವಿಧ ಪ್ರಕಾರಗಳಲ್ಲಿ ಸ್ತರಗಳಲ್ಲಿ ಸಂಘಟಿಸುತ್ತಾ ಮುದ್ರಣ ಮಾಧ್ಯಮದಿಂದಲೂ ಧ್ವನಿಸುರುಳಿಗಳ ಮೂಲಕವೂ ವೇದಪ್ರಚಾರವನ್ನು ಕೈಗೊಂಡು, ಇದಕ್ಕಾಗಿ ತಾವೇ ವ್ಯವಸ್ಥೆ ಮಾಡಿರುವ **'ವೇದ ಭಾಷ್ಯ ಪ್ರಕಾಶನ ಸಮಿತಿ'** ವತಿಯಿಂದ ವೇದಸಾಹಿತ್ಯವನ್ನು ಕನ್ನಡದಲ್ಲಿ ಮುದ್ರಿಸಿ ಸಹಸ್ರಾರು ಮನೆಮನೆಗಳಿಗೂ ಮನಮನಗಳಿಗೂ ಮುಟ್ಟಿಸುತ್ತಿರುವ ಸನ್ಮಾನ್ಯರಾದ **ಶ್ರೀ ಕೈಪು ಶೇಷಾದ್ರಿಗಳು 'ದ್ರಾಹ್ಯಾಯಣ ಪ್ರತಿಷ್ಠಾನದ ಕೆಲಸ'** ತಮ್ಮದೆಂದೇ ಭಾವಿಸಿ ಈ **'ಸಾಮವೇದ ಸಂಹಿತೆ'** ಪ್ರಥಮ ಸಂಪುಟವನ್ನು ಅಲ್ಪವೆಚ್ಚದಲ್ಲಿ, ಬಹುಅಂದವಾಗಿ, ಮುದ್ರಿಸಿಕೊಟ್ಟು ವೇದ ಪುರುಷನ ಕೃಪೆಗೆ ಪಾತ್ರರಾಗಿದ್ದಾರೆ. **'ಶ್ರೀ ಶಂಕರಕೃಪಾ'** ಹಾಗೂ **'ವಿಪ್ರನುಡಿ'** ಯ ಸಂಪಾದಕರು ಪ್ರತಿಷ್ಠಾನದ ಗ್ರಂಥಗಳನ್ನು ತಮ್ಮ ಮಾಸಿಕ ಪತ್ರಿಕೆಗಳಲ್ಲಿ ಪರಿಚಯ ಮಾಡಿಕೊಟ್ಟು ವೇದಪುರುಷನ ಸೇವೆ ಮಾಡಿದ್ದಾರೆ.

ಬಹುಶಾಸ್ತ್ರವೇತ್ತರೂ ಸಮಸ್ತ ವೈದಿಕ ಕರ್ಮಗಳ ಅನುಷ್ಠಾನ ಪರಿಣತರೂ ಸಾಮಗಾನ ಬಲ್ಲವರೂ ಬೆಂಗಳೂರು ರಾಗಿಗುಡ್ಡ ದೇವಸ್ಥಾನ ಮತ್ತು ಹೆಬ್ಬೂರು ಕೋದಂಡಾಶ್ರಮಗಳನ್ನು ಪವಿತ್ರ ಯಾತ್ರಾಸ್ಥಳಗಳನ್ನಾಗಿಸಿ ಸಮಾಜದ ಎಲ್ಲಾ ಸ್ತರದ ಜನರಲ್ಲೂ ವೇದಸಂಸ್ಕೃತಿಯ ಬಗೆಗೆ ಶ್ರದ್ಧೆ ಭಕ್ತಿ ಆಸಕ್ತಿಗಳನ್ನು ಬೆಳಸುತ್ತಿರುವ **ಶ್ರೀ ಕೋದಂಡಾಶ್ರಮ ಮಠಾಧೀಶರಾದ ಪೂಜ್ಯಶ್ರೀ ನಾರಾಯಣಾಶ್ರಮ ಮಹಾಸ್ವಾಮಿಗಳು** ಪ್ರಾರಂಭದಿಂದಲೂ ದ್ರಾಹ್ಯಾಯಣ ಪ್ರತಿಷ್ಠಾನದ ಗ್ರಂಥಗಳ ಬಗೆಗೆ ಸಾಮವೇದಿಗಳಲ್ಲಿ ಆಸಕ್ತಿಯನ್ನುಂಟು ಮಾಡುತ್ತಾ ಸಾಮವೇದದ ಬಗೆಗೆ ವೇದಾಭಿಮಾನಿಗಳ ಕರ್ತವ್ಯ ಪ್ರಜ್ಞೆಯನ್ನು ಜಾಗೃತಗೊಳಿಸಿ ಪ್ರೇರಿಸಿ ಕಾರ್ಯೋನ್ಮುಖಗೊಳಿಸಿ ಆಶೀರ್ವಾದಿಸುತ್ತಿದ್ದಾರೆ.

ನ್ಯೂಜರ್ಸಿ ವಿಶ್ವವಿದ್ಯಾಲಯದ ಪಿ.ಎಚ್.ಡಿ., ಪಡೆದು ಅಮೆರಿಕಾದ ವಿಶ್ವ ವಿದ್ಯಾಲಯಗಳಲ್ಲಿ ಸೇವೆ ಸಲ್ಲಿಸಿ ಪ್ರಸಿದ್ಧ ಐ.ಬಿ.ಎಮ್. ೩೬೦ ಕಂಪ್ಯೂಟರನ್ನು ಅಭಿವೃದ್ಧಿ

ಗೊಳಿಸಿದ ಶ್ರೇಷ್ಠ ವಿಜ್ಞಾನಿಗಳೆಂಬ ಕೀರ್ತಿಭಾಜನರಾಗಿರುವಾಗಲೇ ಸ್ವಾಮಿ ವಿಶ್ವಾನಂದರ ಮಾರ್ಗದರ್ಶನದಲ್ಲಿ ಅಷ್ಟಾಂಗಯೋಗಮಾರ್ಗವನ್ನನುಕ್ರಮಿಸಿ ಅಂತರಾತ್ಮನ ಕರೆಗೆ ಓಗೊಟ್ಟು, ನಚಿಕೇತನಂತಹವರಿಗೆ ಮಾತ್ರ ಸಾಧ್ಯವಾದ ಬಹು ಗೌರವಾನ್ವಿತ ಪದವಿ, ಪ್ರತಿಷ್ಠೆ, ಭೋಗಭಾಗ್ಯಗಳನ್ನು ತ್ಯಾಗಮಾಡಿ ಋಷಿಕೇಶದಲ್ಲಿ ತಪಃಸ್ವಾಧ್ಯಾಯ ಸಾಧನಾನಿರತ ರಾಗಿದ್ದು ಇಂದೂ ಸಹ **ಖ್ಯಾತ ವಿಜ್ಞಾನಿಯು ಮಹಾಯೋಗಿಯಾಗಿ** ಪರಿವರ್ತನೆಯಾಗುವ ಮೇಲ್ಪಂಕ್ತಿಯನ್ನು ಹಾಕಿಕೊಟ್ಟು ವಿಧ್ಯುಕ್ತವಾಗಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಹೊಸೂರು ತಾಲ್ಲೂಕಿನ ಅಣುಸೋಣೆಯ ಶಾಂತಪರಿಸರದ ಹಂಸಾಶ್ರಮದಲ್ಲಿ ಯೋಗಾರೂಢ ರಾಗಿರುವ ಪೂಜ್ಯರಾದ **ಸ್ವಾಮಿ ವಿರಾಜೇಶ್ವರರು** ದ್ರಾಹ್ಯಾಯಣ ಪ್ರತಿಷ್ಠಾನದ ಗ್ರಂಥಗಳನ್ನು ನೋಡಿ ಇನ್ನಷ್ಟು ಸಾಮವೇದದ ಗ್ರಂಥಗಳು ಸಮಾಜಕ್ಕೆ ಅರ್ಪಿತವಾಗಲೆಂದು ಆರು ಸಹಸ್ರ ರೂಪಾಯಿಗಳ ಸುವರ್ಣಮಂತ್ರಾಕ್ಷತೆಯನ್ನು ಅನುಗ್ರಹಿಸಿ ಆಶೀರ್ವದಿಸಿದ್ದಾರೆ. ಕನ್ನಡವೇ ಮೊದಲಾಗಿ ಬಹುಭಾಷೆಗಳನ್ನುಬಲ್ಲ ಸ್ವಾಮೀಜಿಯವರು ವಿಜ್ಞಾನಿಯ ಸತ್ಯಶೋಧನೆ, ಸಾಧನೆಯ ಕಲೆ ಮತ್ತು ವಿಜ್ಞಾನ ಭಗವದ್ಗೀತೆಯ ವಿಜ್ಞಾನ, ಮುಂತಾದ ಗ್ರಂಥಗಳ ಮೂಲಕವೂ, ಹಂಸಯೋಗ ಎಂಬ ತ್ರೈಮಾಸಿಕ ಪತ್ರಿಕೆಯ ಮೂಲಕವೂ, ಸತ್ಸಂಗದ ಮೂಲಕವೂ, ಜ್ಞಾನಜ್ಯೋತಿಯನ್ನು ಬೆಳಗಿಸುತ್ತಿರುವುದು ನಮ್ಮ ಭಾಗ್ಯವಾಗಿದೆ.

ಈ ಸಾಮವೇದ ಸಂಹಿತಾ ಪ್ರಥಮ ಸಂಪುಟದ ಪ್ರಕಟಣೆಗಾಗಿ ಗೆಳೆಯರಾದ ವೇದಾಭಿಮಾನಿಗಳೊಬ್ಬರು ಹತ್ತು ಸಹಸ್ರರೂಪಾಯಿಗಳನ್ನೂ ಸಮೀಪ ಬಂಧುಗಳಾದ **ಶ್ರೀ ಕಡಬಾ ಸುಬ್ರಹ್ಮಣ್ಯ** ಹತ್ತು ಸಹಸ್ರರೂಪಾಯಿಗಳನ್ನೂ **ಶ್ರೀ ಕೆ.ಎನ್.ಪ್ರಭಾಕರರವರು** ತಮ್ಮ ತಂದೆಯವರಾದ **ದಿ|| ಶ್ರೀ ಕೆ.ನರಸಿಂಹಮೂರ್ತಿಗಳವರ** ಹೆಸರಿನಲ್ಲಿ ಹತ್ತು ಸಹಸ್ರ ರೂಪಾಯಿ ಗಳನ್ನೂ ನೀಡಿ ವೇದಪುರುಷನ ಕೃಪೆಗೆ ಪಾತ್ರರಾಗಿದ್ದಾರೆ. ಈ ಜ್ಞಾನಯಜ್ಞದಲ್ಲಿ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಜ್ಞಾತಾಜ್ಞಾತವಾಗಿಯೂ ಭಾಗವಹಿಸುತ್ತಿರುವ ಸಮಸ್ತರ ಮೇಲೂ ಭಗವಂತನ ಕೃಪೆ ಮಳೆಗರೆಯುತ್ತಿರಲಿ. ಋಷಿ ಸದೃಶರೂ, ಆದ್ಯರೂ, ಪೂಜ್ಯರೂ ಆದ ಪೂರ್ವ ಸೂರಿಗಳಿಗೆ ಮುಡಿಬಾಚಿ ಕೃತಜ್ಞತೆಯನ್ನರ್ಪಿಸುತ್ತೇವೆ.

**ಸಂಪಾದಕ ಮಂಡಲಿ**
ದ್ರಾಹ್ಯಾಯಣ ಪ್ರತಿಷ್ಠಾನ

# ಆಧಾರ ಗ್ರಂಥ ಸಂಕೇತ ಸೂಚಿ

ಅಮರ - ಅಮರಕೋಶ
ಅ.ತ. - ಅಕ್ಷರ ತನ್ತ್ರ
ಅಥ.ವೇ - ಅಥರ್ವವೇದ
ಆರ - ಆರಣ್ಯಗೇಯಗಾನ
ಆಪ.ಶ್ರೌ - ಆಪಸ್ತಮ್ಬ ಶ್ರೌತಸೂತ್ರ
ಆರ್ಷೇ.ಕಲ್ಪ - ಆರ್ಷೇಯ ಕಲ್ಪಸೂತ್ರ
ಆರ್ಷೇ.ಬ್ರಾ. - ಆರ್ಷೇಯ ಬ್ರಾಹ್ಮಣ
ಆರ್ಷೇ.ದೀ - ಆರ್ಷೇಯ ದೀಪ
ಆಶ್ವ.ಗೃ.ಸೂ. - ಆಶ್ವಲಾಯನ ಗೃಹ್ಯಸೂತ್ರ
ಊಹ - ಊಹಗಾನ
ಸಾ.ಋ - ಸಾಮವೇದ ಛನ್ದಾರ್ಚಿಕಾ
ಜಯಚಾಮರಾಜೇಂದ್ರ ವೇದರತ್ನಮಾಲಾ - ೩೬ ಸಂಪುಟಗಳು
ಋ.ಸಂ. - ಋಗ್ವೇದ ಸಂಹಿತೆ
ಋ.ತ - ಋಕ್ ತನ್ತ್ರ
ಋ.ಪ್ರಾತಿ - ಋಗ್ವೇದ ಪ್ರಾತಿಶಾಖ್ಯ
ಐ.ಆ - ಐತರೇಯ ಆರಣ್ಯಕ
ಐ.ಬ್ರಾ - ಐತರೇಯ ಬ್ರಾಹ್ಮಣ
ಕಾ.ಶ್ರೌ - ಕಾತ್ಯಾಯನ ಶ್ರೌತಸೂತ್ರ
ಕ್ಷು.ಕ.ಸೂ. - ಕ್ಷುದ್ರ ಕಲ್ಪಸೂತ್ರ
ಖಾ.ಗೃ.ಸೂ - ಖಾದಿರ ಗೃಹ್ಯಸೂತ್ರ
ಗಾಯ.ವಿ.ಸೂ - ಗಾಯತ್ರೀ ವಿಧಾನಸೂತ್ರ
ಗ್ರಾಮ - ಗ್ರಾಮಗೇಯಗಾನ
ಗೋಪ.ಬ್ರಾ - ಗೋಪಥ ಬ್ರಾಹ್ಮಣ
ಗೋಭಿ.ಗೃ.ಸೂ - ಗೋಭಿಲ ಗೃಹ್ಯಸೂತ್ರ
ಗೌ.ಧ.ಸೂ - ಗೌತಮ ಧರ್ಮಸೂತ್ರ
ಗೌ.ಶಿ - ಗೌತಮ ಶಿಕ್ಷಾ
ಛಂ.ವಿ - ಛನ್ದೋ ವಿಚಿತಿ
ಛಾಂ.ಉ - ಛಾನ್ದೋಗ್ಯೋಪನಿಷತ್
ಛಾಂ.ಬ್ರಾ - ಛಾನ್ದೋಗ್ಯ ಬ್ರಾಹ್ಮಣ
ಜೈ.ಆ.ಬ್ರಾ - ಜೈಮಿನೀಯ ಆರ್ಷೇಯ ಬ್ರಾಹ್ಮಣ
ಜೈ.ಉ.ಬ್ರಾ - ಜೈಮಿನೀಯ ಉಪನಿಷತ್ ಬ್ರಾಹ್ಮಣ
ಜೈ.ನ್ಯಾ.ವಿ. - ಜೈಮಿನೀಯ ನ್ಯಾಯಮಾಲಾ ವಿಸ್ತರ
ಜೈ.ಬ್ರಾ - ಜೈಮಿನೀಯ ಬ್ರಾಹ್ಮಣ
ಜೈ.ಮೀ.ಸೂ - ಜೈಮಿನೀ ಮೀಮಾಂಸಾಸೂತ್ರ
ತಾಂ.ಮ.ಬ್ರಾ - ತಾಣ್ಡ್ಯಮಹಾಬ್ರಾಹ್ಮಣ
ತೈ.ಆರ - ತೈತ್ತಿರೀಯ ಆರಣ್ಯಕ
ತೈ.ಉಪ - ತೈತ್ತಿರೀಯೋಪನಿಷತ್ತು
ತೈ.ಪ್ರಾತಿ - ತೈತ್ತಿರೀಯ ಪ್ರಾತಿಶಾಖ್ಯ
ತೈ.ಬ್ರಾ - ತೈತ್ತಿರೀಯ ಬ್ರಾಹ್ಮಣ
ತೈ.ಸಂ. - ತೈತ್ತಿರೀಯ ಸಂಹಿತಾ
ದೇ.ಬ್ರಾ - ದೇವತಾಧ್ಯಾಯ ಬ್ರಾಹ್ಮಣ
ದೇ.ಭಾ - ದೇವೀ ಭಾಗವತ
ದ್ರಾಹ್ಯಾ.ಶ್ರೌ. - ದ್ರಾಹ್ಯಾಯಣ ಶ್ರೌತಸೂತ್ರ
ನಾ.ಶಿ - ನಾರದೀಯ ಶಿಕ್ಷಾ
ನಾ.ಪು - ನಾರದ ಪುರಾಣ
ನಿ.ಸೂ - ನಿದಾನಸೂತ್ರ
ನಿರು - ನಿರುಕ್ತ
ಪಂ.ವಿ.ಸೂ - ಪಂಚವಿಧಸೂತ್ರ
ಪತ.ಭಾ - ಪತಂಜಲೀ ಭಾಷ್ಯ

| | | | |
|---|---|---|---|
| ಪಾಣಿನಿ - ಪಾಣಿನೀಯ ಅಷ್ಟಾಧ್ಯಾಯೀ | | ರಹ - ರಹಸ್ಯ/ ಊಹ್ಯ ಗಾನ | |
| ಪಾ.ಶಿ - ಪಾಣಿನೀಯ ಶಿಕ್ಷಾ | | ಲ.ಋ - ಲಘು ಋಕ್ ತನ್ತ್ರ | |
| ಪು.ಸೂ - ಪುಷ್ಪ ಸೂತ್ರ | | ಲಾ.ಶ್ರೌ - ಲಾಟ್ಯಾಯನ ಶ್ರೌತಸೂತ್ರ | |
| ಪ್ರ.ಉಪ - ಪ್ರಶ್ನ ಉಪನಿಷತ್ತು | | ಲೋ.ಶಿ - ಲೋಮಶೀ ಶಿಕ್ಷಾ | |
| ಪ್ರತಿ.ಸೂ - ಪ್ರತಿಹಾರ ಸೂತ್ರ | | ವಾಜಿ ಪ್ರಾತಿ - ವಾಜಸೇನೀಯ ಪ್ರಾತಿಶಾಖ್ಯ | |
| ಬ್ರ.ಸೂ - ಬ್ರಹ್ಮಸೂತ್ರ ಶಾಂಕರಭಾಷ್ಯ | | ವಾ.ರಾ - ವಾಲ್ಮೀಕಿ ರಾಮಾಯಣ | |
| ಬೃಹ.ಉ - ಬೃಹದಾರಣ್ಯಕ ಉಪನಿಷತ್ತು | | ವಿ - ವಿವರಣಕಾರಃ | |
| ಬೋ.ಶ್ರೌ - ಬೋಧಾಯನ ಶ್ರೌತಸೂತ್ರ | | ಶತ.ಬ್ರಾ - ಶತಪಥ ಬ್ರಾಹ್ಮಣ | |
| ಭ.ಗೀ - ಭಗವದ್ಗೀತೆ - ಶಾಂಕರಭಾಷ್ಯ | | ಶಾಂ.ಗೃ.ಸೂ - ಶಾಂಖಾಯನ ಗೃಹ್ಯಸೂತ್ರ | |
| ಭಾ.ಶಿ - ಭಾರದ್ವಾಜ ಶಿಕ್ಷಾ | | ಶಿ.ಸಂ - ಶಿಕ್ಷಾ ಸಂಗ್ರಹ | |
| ಮನು - ಮನುಸ್ಮೃತಿ | | ಶಿ.ಪು - ಶಿವ ಪುರಾಣ | |
| ಮ.ಭಾ - ಮಹಾಭಾರತ | | ಷ.ವಿಂ.ಬ್ರಾ - ಷಡ್ವಿಂಶ ಬ್ರಾಹ್ಮಣ | |
| ಮಾಧವ - ಮಾಧವರ ಸಾಮಸಂಹಿತಾ ಭಾಷ್ಯ | | ಸಂ.ಉ.ಬ್ರಾ - ಸಂಹಿತೋಪನಿಷತ್ ಬ್ರಾಹ್ಮಣ | |
| ಮಾಂ.ಉಪ - ಮಾಂಡೂಕ್ಯೋಪನಿಷತ್ತು | | ಸಾ.ಆ.ದೀ - ಸಾಮವೇದ ಆರ್ಷೇಯ ದೀಪ | |
| ಮಾ.ಲ - ಮಾತ್ರಾ ಲಕ್ಷಣ | | ಸಾಮ.ತ - ಸಾಮ ತನ್ತ್ರ | |
| ಮಾ.ಶಿ - ಮಾಣ್ಡೂಕೀ ಶಿಕ್ಷಾ | | ಸಾ.ಗಾ - ಸಾಮಗಾನ | |
| ಮು.ಉಪ - ಮುಣ್ಡಕೋಪನಿಷತ್ತು | | ಸಾ.ಸಂ - ಸಾಮವೇದ ಸಂಹಿತೆ | |
| ಮೈ.ಸಂ - ಮೈತ್ರಾಯಣಿ ಸಂಹಿತಾ | | ಸಾ.ಸ - ಸಾಮಸಪ್ತ ಲಕ್ಷಣ | |
| ಯಜು - ಯಜುರ್ವೇದ | | ಸಾ.ವಿ.ಬ್ರಾ - ಸಾಮವಿಧಾನ ಬ್ರಾಹ್ಮಣ | |
| ಯಾಜ್ಞ.ಶಿ - ಯಾಜ್ಞವಲ್ಕ್ಯ ಶಿಕ್ಷಾ | | ಸ್ತೋ.ಸಂ - ಸ್ತೋಭಾನು ಸಂಹಾರ | |
| | | ವಂ.ಬ್ರಾ - ವಂಶಬ್ರಾಹ್ಮಣ | |

**ಸಹಾಯಕ ಗ್ರಂಥ ಋಣ :**

| | | |
|---|---|---|
| ಸಾಮಗಾನ | - | ಡಾ|| ಪಂಕಜಮಾಲಾ ಶರ್ಮಾ |
| ದಿ ಸಾಮನ್ ಚಾಂಟ್ಸ್ | - | ಡಾ|| ಜಿ. ಹೆಚ್. ತರ್ಲೇಕರ್ |
| ಸೀಕ್ರೆಟ್ ಆಫ್ ದಿ ವೇದಾಸ್ ಮತ್ತು ಮಿಸ್ಟಿಕ್ ಫೈರ್ | - | ಅರಬಿನ್ದೋಃ |
| ವೇದಾರ್ಥ ಪಾರಿಜಾತ | - | ಸ್ವಾಮಿ ಕರಪಾತ್ರೀಜೀ |
| ವೇದಿಕ್ ಬಿಬ್ಲಿಯೋಗ್ರಫಿ | - | ಬಿ. ಓ. ಆರ್. ಐ. ಪುಣೆ |

# ಸಾಮವೇದ ಸಂಹಿತೆ - ವಿಷಯ ಸೂಚಿ



|| ಓಮ್ ||

# ಸಾಮವೇದದ ಋಕ್ ಮನ್ತ್ರಗಳ ಅಕ್ಷರಾನುಕ್ರಮಣಿಕೆ

| ಪ್ರಥಮಪದ | ಋಕ್‌ಸಂಖ್ಯೆ |
|---|---|
| **ಅ** | |
| ಅಕ್ರಾನ್ತ್ಸಮುದ್ರಃ | ೫೨೯, ೧೨೫೩ |
| ಅಕ್ಷನ್ನಮೀಮದನ್ತ | ೪೧೫ |
| ಅಗನ್ಮ ಮಹಾ ನಮಸಾ | ೧೩೦೪ |
| ಅಗನ್ಮ ವೃತ್ರ ಹಂತಮಂ | ೮೯ |
| ಅಗ್ನ ಆಯಾಹಿ ವೀತಯೇ | ೧,೬೬೦ |
| ಅಗ್ನ ಆ ಯಾಹ್ಯಗ್ನಿಭಿರ್ಹೋತಾರಂ | ೧೫೫೨ |
| ಅಗ್ನ ಆಯೂಂಷಿ | (೬೨೭, ೧೪೬೪, ೧೫೧೮) |
| ಅಗ್ನ ಓಜಿಷ್ಠಮಾ ಭರ | ೮೧ |
| ಅಗ್ನಿಃ ಪ್ರತ್ನೇನ ಜನ್ಮನಾ | ೧೭೧೧ |
| ಅಗ್ನಿಃ ಪ್ರಿಯೇಷು ಧಾಮಸು | ೧೭೧೦ |
| ಅಗ್ನಿಂ ತಂ ಮನ್ಯೇ | ೪೨೫, ೧೭೩೭ |
| ಅಗ್ನಿಂ ದೂತಂ ವೃಣೀಮಹೇ | ೩, ೭೯೦ |
| ಅಗ್ನಿಂ ನರೋ ದೀಧಿತಿಭಿಃ | ೭೨, ೧೩೭೩ |
| ಅಗ್ನಿಂ ವೋ ದೇವಮಗ್ನಿಭಿಃ | ೧೨೧೯ |
| ಅಗ್ನಿಂ ವೋ ವೃಧನ್ತಂ | ೨೧, ೯೪೬ |
| ಅಗ್ನಿಜ್ ಸೂನುಂ ಸಹಸೋ | ೧೫೫೫ |
| ಅಗ್ನಿಜ್ ಹಿನ್ವನ್ತು ನೋ | ೧೫೨೭ |
| ಅಗ್ನಿಜ್ ಹೋತಾರಂ ಮನ್ಯೇ | ೪೬೫, ೧೮೧೩ |
| ಅಗ್ನಿನಾಗ್ನಿಃ ಸಮಿಧ್ಯತೇ | ೮೪೪ |
| ಅಗ್ನಿಮಗ್ನಿಜ್ ಹವೀಮಭಿಃ | ೭೯೧ |
| ಅಗ್ನಿಮಿನ್ಧಾನೋ ಮನಸಾ | ೧೯ |
| ಅಗ್ನಿಮೀಡಿಷ್ವಾವಸೇ | ೪೯ |
| ಅಗ್ನಿಮೀಡೇ ಪುರೋಹಿತಂ | ೬೦೫ |
| ಅಗ್ನಿರಸ್ಮಿ ಜನ್ಮನಾ | ೬೧೩ |
| ಅಗ್ನಿರಿನ್ದ್ರಾಯ ಪವತೇ | ೧೮೨೫ |
| ಅಗ್ನಿರುಕ್ಥೇ ಪುರೋಹಿತೋ | ೪೮ |
| ಅಗ್ನಿರ್ಋಷಿಃ ಪವಮಾನಃ | ೧೫೧೯ |
| ಅಗ್ನಿರ್ಜಾಗಾರ ತಮೃಚಃ | ೧೮೨೭ |
| ಅಗ್ನಿರ್ಜುಷತ ನೋ ಗಿರೋ | ೧೪೦೬ |
| ಅಗ್ನಿರ್ಜ್ಯೋತಿರ್ಜ್ಯೋತಿರಗ್ನಿಃ | ೧೮೩೧ |
| ಅಗ್ನಿರ್ಮೂರ್ಧಾ ದಿವಃ | ೨೭, ೧೫೩೨ |
| ಅಗ್ನಿರ್ವೃತ್ರಾಣಿ ಜಙ್ಘನದ್ | ೪, ೧೩೯೬ |
| ಅಗ್ನಿರ್ಹಿ ವಾಜಿನಂ ವಿಶೇ | ೧೭೩೮ |
| ಅಗ್ನಿಸ್ತಿಗ್ಮೇನ ಶೋಚಿಷಾ | ೨೨ |
| ಅಗ್ನೇ ಕೇತುರ್ವಿಶಾಮಸಿ | ೧೫೩೧ |
| ಅಗ್ನೇ ಜರಿತರ್ವಿಶ್ಪತಿಃ | ೩೯ |
| ಅಗ್ನೇ ತಮದ್ಯಾಶ್ವಂ | ೪೩೪, ೧೭೭೭ |
| ಅಗ್ನೇ ತವ ಶ್ರವೋ ವಯೋ | ೧೮೧೬ |
| ಅಗ್ನೇ ತ್ವಂ ನೋ ಅನ್ತಮ | ೪೪೮, ೧೧೦೭ |
| ಅಗ್ನೇ ದೇವಾಜ್ ಇಹ | ೭೯೨ |
| ಅಗ್ನೇ ನಕ್ಷತ್ರಮಜರಮಾ | ೧೫೩೦ |
| ಅಗ್ನೇ ಪವಸ್ವ ಸ್ವಪಾ | ೧೫೨೦ |
| ಅಗ್ನೇ ಪಾವಕ ರೋಚಿಷಾ | ೧೫೨೧ |
| ಅಗ್ನೇ ಮೃಡ ಮಹಾಜ್ ಅಸ್ಯಯ | ೨೩ |
| ಅಗ್ನೇ ಯಜಿಷ್ಠೋ ಅಧ್ವರೇ | ೧೦೦ |

## ಆ

## ಇ

## ಊ



## ಋ

## ಗ



## ಘ



## ಚ



## ಜ

## ನ



## ಪ

## ರ



## ವ

## ಸ

## ಹ



- ಓಮ್ -

# ಸಾಮವೇದ ಸಂಹಿತೆ

## ಪ್ರಸ್ತಾವನೆ

ವೇದಗಳು ಅಖಂಡಭಾರತದ ಭೌತಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಭಾವೈಕ್ಯದ ದೃಢವಾದ ಶಾಶ್ವತವಾದ ನೆಲಗಟ್ಟಾಗಿವೆ. ವೇದಗಳಲ್ಲಿರುವ ಆಧ್ಯಾತ್ಮಿಕ ಚಿಂತನೆಗಳು ಜೀವನದರ್ಶನಗಳು ಕಂಡುಕೊಂಡಿರುವ ಸತ್ಯ-ಋತಗಳು ಆಚರಣೆಯಲ್ಲಿರುವ ಆಚಾರ ವ್ಯವಹಾರಗಳು, ವರ್ಣಾಶ್ರಮಧರ್ಮಗಳು ಸಾರ್ವಕಾಲಿಕವೂ ಸಾರ್ವದೇಶಿಕವೂ ಆಗಿದ್ದು ಚಿರಂತನ ಮೌಲ್ಯದವೂ ಆಗಿವೆ. ಪ್ರಪಂಚದಲ್ಲಿರುವ ಅತಿ ಪ್ರಾಚೀನವಾದ ಗ್ರಂಥಗಳೇ ವೇದಗಳು. ಇದಕ್ಕಿಂತ ಪ್ರಾಚೀನವಾದ ಭಾಷೆಯಾಗಲೀ ಗ್ರಂಥವಾಗಲೀ ಯಾವುದೂ ಇಲ್ಲ. ಅನೇಕ ಮತಗಳಿಗೂ ಧರ್ಮಗಳಿಗೂ ಭಾಷೆಗಳಿಗೂ ಕಲೆಗಳಿಗೂ ವಿದ್ಯೆಗಳಿಗೂ ದರ್ಶನಗಳಿಗೂ ವೇದಗಳು ಮಾತೃಸ್ಥಾನವಾಗಿವೆ. ಸಮಸ್ತ ಜ್ಞಾನ ಹಾಗೂ ವಿವಿಧ ಪದ್ಧತಿ ಕ್ರಿಯೆ ದೃಷ್ಟಿಗಳ ಮೂಲಕ ದೀರ್ಘವಾದ ಚಿಂತನೆಗಳಿಂದ ಫಲ ದೊರಕುವವರೆಗಿನ ಅನೇಕ ವಿದ್ಯೆಗಳ ವಿಚಾರವನ್ನು ಒಳಗೊಂಡಿರುವುದರಿಂದ ವಿವಿಧ ಶಾಸ್ತ್ರವೇತ್ತರಿಗೆ ವೇದವು ವಿದ್ಯಾನಿಧಿಯಾಗಿದೆ. ವೇದಗಳಿಂದ ನಮ್ಮ ಪ್ರಾಚೀನರ ನಡೆನುಡಿ ಇಷ್ಟಾನಿಷ್ಟ ರೀತಿನೀತಿ ನ್ಯಾಯಧರ್ಮ ಪೂಜಾವಿಧಾನ ಕಲೆಸಂಸ್ಕೃತಿ ಜೀವನಕ್ರಮ ಗುರಿ ಆದರ್ಶ ಸಾಧನೆ ಸಮೃದ್ಧಿಗಳ ಅರಿವಾಗಿ ನಮ್ಮ ಆಂತರ್ಯದಲ್ಲಿ ಸ್ಫೂರ್ತಿಯ ಚಿಲುಮೆಯು ಪುಟಿದೆದ್ದು ಕೀಳರಿಮೆಯು ಅಳಿದು ಹೋಗಿ ಹೆಮ್ಮೆಯಿಂದ ತಲೆ ಎತ್ತಿಕೊಂಡು ನಮ್ಮ ಏಳಿಗೆಗೂ ನಮ್ಮ ನಾಡುನುಡಿಗಳ ಸಮೃದ್ಧಿಗೂ ಸೊಂಟಕಟ್ಟಿ ದುಡಿಯಲು ಉದ್ಯುಕ್ತರಾಗುತ್ತೇವೆ. ಜೀವನದ ಗುರಿಯನ್ನು ಮುಟ್ಟಿ ಕೃತಕೃತ್ಯರಾಗುತ್ತೇವೆ. ಕೀರ್ತಿಭಾಜನರಾಗುತ್ತೇವೆ.

**ವೇದವಾಣಿ :** ಅನಾದಿ ಸಂಪ್ರದಾಯದಿಂದ ಮಹಾಜನ ಪರಿಗೃಹೀತವಾಗಿರುವ ಗ್ರಂಥರಾಶಿಯೇ ವೇದ. ಇದು ನಿಯಮಪೂರ್ವಕವಾಗಿ ಗುರುಶಿಷ್ಯ ಸಂಪ್ರದಾಯದಲ್ಲಿ ಅನಾದಿಕಾಲದಿಂದ ಮಹಾತ್ಮರ ಹೃದಯದಲ್ಲಿರುವುದು. **ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ** .... ತೈ. ಆ. ೧೦. ೭೯, ಶ್ರುತಿಸ್ಮೃತಿ ಪ್ರತಿಪಾದಿತವಾದ ಬಾವಿ, ಕೆರೆ, ತೋಪು ಆದಿ ನಿರ್ಮಾಣರೂಪವಾದ ಧರ್ಮವು ಸಮಸ್ತ ಜೀವಜಗತ್ತಿಗೇ ಆಶ್ರಯವಾಗಿದೆ. **ವೇದೋಽಖಿಲೋ ಧರ್ಮಮೂಲಮ್** - ಮನು ೨.೬ ॥ ಧರ್ಮದ ಮೂಲವೇ ವೇದವಾಗಿದೆ. **ಋಚಸ್ಸಾಮಾನಿ ಯಜೂಗ್‌ಂಷಿ । ಸಾ ಹಿ ಶ್ರೀರಮೃತಾ ಸತಾಮ್** - ತೈ. ಬ್ರಾ. ೧.೨.೨೬ ॥ ಅಮೃತತ್ವವನ್ನು ಪಡೆಯಲಾಶಿಸುವ ಸತ್ಪುರುಷರಿಗೆ ವೇದಗಳೇ ಸಾಧನವಾಗಿವೆ.

**ನಾ ವೇದವಿನ್ಮನುತೇ ತಂ ಬೃಹನ್ತಮ್** - *ತೈ. ಬ್ರಾ. ೩.೧೨.೫೫* // ವೇದವನ್ನೇ ಅರಿಯದವರು ಮಹಾಮಹಿಮೋಪೇತನಾದ ಭಗವಂತನನ್ನು ಪಡೆಯಲಾರರು. ಭಗವಂತನೂ ಅವನ ಜ್ಞಾನವಾದ ವೇದವೂ ನಿತ್ಯವಾದದ್ದು. ಅನ್ಯರ ಸಹಾಯವನ್ನು ಪಡೆಯದೆ ಸೂರ್ಯನು ಸ್ವತಃ ತನ್ನ ಪ್ರಕಾಶದಿಂದಲೇ ಪ್ರಪಂಚಕ್ಕೆ ತನ್ನ ಪರಿಚಯ ಮಾಡಿಕೊಡುವಂತೆ ಸತ್ಯಸ್ವರೂಪವೂ ಸಮಸ್ತ ಜ್ಞಾನದ ಗಣಿಯೂ ಆಗಿರುವ ವೇದವು ಸ್ವತಃ ಪ್ರಮಾಣಸ್ವರೂಪವಾಗಿದ್ದು ಅನ್ಯಶಾಸ್ತ್ರಗಳ ಸಹಾಯವನ್ನು ಪಡೆಯದೆ ಸ್ವತಃ ತನ್ನ ಪರಿಚಯವನ್ನು ಮಾಡಿಕೊಡುತ್ತದೆ. **ಶಾಸ್ತ್ರಯೋನಿತ್ವಾತ್** - *ಬ್ರ. ಸೂ. ೧.೧.೩* // ಜನಸಾಮಾನ್ಯರ ಹಿತಕ್ಕಾಗಿ ಲೋಕೋಪಕಾರ ದೃಷ್ಟಿಯಿಂದ ಋಷಿಗಳು ವೇದಗಳ ಆಧಾರದಿಂದ ಅನೇಕ ಶಾಸ್ತ್ರಗಳನ್ನು ರಚಿಸಿದ್ದಾರೆ. **ನಿತ್ಯಸ್ತುಸ್ಯಾದ್ದರ್ಶನಸ್ಯ ಪರಾರ್ಥತ್ವಾತ್** - *ಪೂ. ಮೀ. ೧.೧.೧೮* // ಬೇರೇ ಇಲ್ಲದಿದ್ದರೆ ಮರ, ಕೊಂಬೆ, ಎಲೆ, ಪುಷ್ಪ, ಫಲಗಳ ಅಸ್ತಿತ್ವವೇ ಇರಲಾರದಂತೆ ವೇದವೇ ಇಲ್ಲದಿದ್ದರೆ ಅನ್ಯಶಾಸ್ತ್ರಗಳೇ ಇರುತ್ತಿರಲಿಲ್ಲ.

**ಇಷ್ಟಪ್ರಾಪ್ತ್ಯನಿಷ್ಟಪರಿಹಾರಾಯೋರಲೌಕಿಕಮುಪಾಯಂ ಯೋ ಗ್ರಂಥೋ ವೇದಯತಿ ಸ ವೇದಃ । ಅಲೌಕಿಕ ಪದೇನ ಪ್ರತ್ಯಕ್ಷ ಅನುಮಾನೇ ವ್ಯಾವರ್ತ್ಯೇತೇ ॥ ವೇದಾರ್ಥ ಪ್ರಕಾಶಿಕೇ ॥** ವೇದವು ಪ್ರತ್ಯಕ್ಷ ಅನುಮಾನಗಳಿಂದ ತಿಳಿಯಲಾಗದ ಇಷ್ಟಪ್ರಾಪ್ತಿ ಅನಿಷ್ಟ ನಿವೃತ್ತಿಗಳ ಅಲೌಕಿಕ ಉಪಾಯಗಳನ್ನು ತಿಳಿಸಿಕೊಡುವುದರಲ್ಲೇ ತಾತ್ಪರ್ಯ ಉಳ್ಳದ್ದಾಗಿದೆ. **ಸರ್ವೋಽಪ್ಯಯಂ ವೇದಃ ಪ್ರತ್ಯಕ್ಷಾನುಮಾನಾಭ್ಯಾಂ ಅನವಗತೇಷ್ಟಾನಿಷ್ಟ ಪ್ರಾಪ್ತಿ ಪರಿಹಾರೋಪಾಯ ಪ್ರಕಾಶನ ಪರಃ** - *ಬೃ. ಉ., ಶಂ. ಭಾ* // ವೇದ ಎಂದರೆ **ವಿಂತೇ - ವಿಚಾರಣೇ । ಸತ್ತಾಯಾಂ ವಿದ್ಯತೇ ಜ್ಞಾನೇ ವೇತ್ತಿ ॥** ವಿಚಾರಣೆ ಮಾಡು ಎಂದು ಅರ್ಥವಿರುವುದರಿಂದ ವೇದದ ತಾತ್ಪರ್ಯ - **'ಆತ್ಮಜ್ಞಾನ'** ಎಂದು ವೇದಾಂತಿಗಳೂ **'ಧರ್ಮ'** ಎಂದು ಮೀಮಾಂಸಕರೂ ನೆಲೆ ಗೊಳಿಸಿದ್ದಾರೆ. **ವಿದಂತ್ಯನೇನ ಧರ್ಮಂ ವೇದ - ಕ್ಷೀರಸ್ವಾಮಿ ॥** ಧರ್ಮವನ್ನು ಇದರಿಂದ ತಿಳಿಯುತ್ತಾರಾದುದರಿಂದ ವೇದ. **ವ್ಯುತ್ಪದ್ಯತೇ ಚ ವೇದಶಬ್ದಃ । ವಿದಂತ್ಯನನ್ಯ ಪ್ರಮಾಣಂ ವೇದ್ಯಂ ಧರ್ಮಲಕ್ಷಣಮರ್ಥಮಸ್ಮದಿತಿ ವೇದಃ - ಮೇಧಾತಿಥಿ ॥** ಅನ್ಯ ಪ್ರಮಾಣದಿಂದ ತಿಳಿಯಬೇಕಾದ ಧರ್ಮಲಕ್ಷಣದ ಅರ್ಥವನ್ನು ಇದರಿಂದ ತಿಳಿಯುತ್ತೇವೆಯಾದುದರಿಂದ ಇದು ವೇದ. **ನಿಃಶ್ರೇಯಸಕರಾಣಿ ಕರ್ಮಾಣಿ ಆವೇದಯಂತೀತಿ ವೇದ** - *ಕಪರ್ದಿಸ್ವಾಮಿ* // ಮೋಕ್ಷಸುಖಪ್ರದವಾದ ಕರ್ಮಗಳನ್ನು ತಿಳಿಸುವುದರಿಂದ ವೇದ **ಶಬ್ದಾರ್ಥಮಾರಂಭಾಣಾನಾಂ ತು ಕರ್ಮಣಾಂ ಸಮಾಮ್ನಾಯ ಸಮಾಪ್ತೌ ವೇದಶಬ್ದಃ** - *ಹಿರಣ್ಯಕೇಶಿ ಶ್ರೌತಸೂತ್ರ* // ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗದ ಕರ್ಮ

ಗಳಬಗೆಗೆ ಅಧಿಕಾರಯುತವಾದ ವಿಹಿತವಾದ ಶಬ್ದ ಪ್ರಮಾಣವೇ ವೇದ. ಮನ್ತ್ರ ಗುಪ್ತ **ಭಾಷಣೇ - ಗುಪ್ತಾನಾಂ ಪದಾರ್ಥಾನಾಂ ಭಾಷಣಂ ಯಸ್ಮಿನ್ ವರ್ತತೇ ಸ ಮನ್ತ್ರೋವೇದಃ ।** ಇನ್ದ್ರಿಯ ಗೋಚರವಾಗದ ಹಾಗೂ ಸೃಷ್ಟಿಯ ಸಮಸ್ತ ಪದಾರ್ಥಗಳ ಯಥಾರ್ಥ ಜ್ಞಾನದ ರಾಶಿಯಾದ ಮನ್ತ್ರಗಳೇ ವೇದ. ಸರ್ವರಿಗೂ ಸಂಶಯಕ್ಕೆಡೆಯಿಲ್ಲದೆ ಸಮಸ್ತ ಸದ್ವಿದ್ಯೆಗಳನ್ನೂ ತಿಳಿಸುವ ಚತುರ್ವಿಧ ಪುರುಷಾರ್ಥಗಳ ಸಿದ್ಧಿಗೆ ಸಾಧನವಾಗಿರುವ ಜ್ಞಾನರಾಶಿಯೇ ವೇದ.

**.... ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಙ್ಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನಿ ಅಸ್ಯೈವೈತಾನಿ ನಿಃಶ್ವಸಿತಾನಿ** - *ಬೃ. ಉ. ೨. ೪. ೧೦* ॥ ಉರಿಯುವ ಕಟ್ಟಿಗೆಯ ಬೆಂಕಿಯಿಂದ ಹೊಗೆ ಕಿಡಿ ಬರುವಂತೆ ವಿಶೇಷ ಪ್ರಯತ್ನವಿಲ್ಲದೆ ಮನುಷ್ಯನು ತನ್ನ ಉಸಿರನ್ನು ಸ್ವಾಭಾವಿಕವಾಗಿ ಹೊರಗೆ ಬಿಡುವಂತೆ, ಯಾವ ಪ್ರಯತ್ನವೂ ಇಲ್ಲದೆ ಲೀಲಾನ್ಯಾಯದಿಂದ ಭಗವಂತನ ಸ್ವಾಭಾವಿಕ ನಿಃಶ್ವಾಸವೇ ಕೆಳ ಉಸಿರೇ, ಆತ್ಮರೂಪವಾಗಿ ನಿತ್ಯವಾದ ಚತುರ್ವೇದಾದಿಗಳಾಗಿವೆ - *ಬ್ರ. ಸೂ. ೧. ೩. ೩.* **ಅತ ಏವ ಚ ನಿತ್ಯತ್ವಮ್ ।** *ಬ್ರ. ಸೂ. ೧. ೩. ೨೯* ॥ ಇದನ್ನೇ ದೈವೀವಾಕ್ ಎನ್ನುತ್ತಾರೆ. **ದೇವೀಂ ವಾಚಮಜ ನಯನ್ತ ದೇವಾಸ್ತಾಂ ವಿಶ್ವರೂಪಾಃ ಪಶವೋ ವದನ್ತಿ** - *ಋ. ಸಂ. ೮. ೧೦೦. ೧೧,* ನಿರು. *೧೧. ೨೯* ॥ **ಅಗ್ನಿವಾಯು ರವಿಭ್ಯಸ್ತು ತ್ರಯಂ ಬ್ರಹ್ಮ ಸನಾತನಂ । ದುದೋಹ ಯಜ್ಞಸಿದ್ಧ್ಯರ್ಥಮೃಗ್ಯಜುಃ ಸಾಮ ಲಕ್ಷಣಂ** - ಮನು. *೧. ೨೩* ॥ **ತ್ರಯೋ ವೇದಾ ಅಜಾಯಂತ .... ಸಾಮವೇದ ಆದಿತ್ಯಾತ್** - *ಐತರೇಯ* ॥ **ಅಗ್ನೇ ಋಚೋ .... ಸಾಮಾನ್ಯಾದಿತ್ವಾತ್** - *ಛಾಂ. ಉ.* ॥ .... **ಸೂರ್ಯಾತ್ ಸಾಮವೇದಃ** - *ಶತಪಥ* ॥

ದೇವತೆಗಳಿಂದ ಅಂದರೆ ಅಂತರಿಕ್ಷ, ಸೂರ್ಯ, ಚಂದ್ರ, ಗ್ರಹ, ನಕ್ಷತ್ರ, ಅಗ್ನಿ, ವಾಯುಗಳಿಂದ - ಸತತವಾಗಿ ಅನವರತವಾಗಿ ಹೊರಹೊಮ್ಮುತ್ತಿರುವ ವಿದ್ಯುತ್ತರಂಗಗಳಿಗೆ ಛಂದಸ್ಸು ಎಂಬ ಅಭಿಧಾನವೂ ಇದೆ. ಈ ಪ್ರಕಾಶದ ಅಲೆಗಳನ್ನು ಛಂದಸ್ಸುಗಳನ್ನು ಅಧ್ಯಯನಮಾಡಿ ಈ ಪ್ರಕಾಶದ ಅಲೆಗಳ ಗುಣಧರ್ಮಗಳನ್ನು ವಿಜ್ಞಾನಿಗಳು ಅರಿತಿದ್ದಾರೆ. **'ಅನ್ತರಿಕ್ಷೇ ದುಂದುಭಿಯೋ ವಿತತಾ ವದಂತಿ'** ಎಂಬ *ಜೈ. ಬ್ರಾ. ೨. ೪೦೪* ಹೇಳುವ ಅಂತರಿಕ್ಷ ದುಂದುಭಿಯೇ ವಿಜ್ಞಾನಿಗಳು ತಿಳಿಸುವ **'ಮ್ಯೂಸಿಕ್ ಆಫ್ ಸ್ಫಿಯರ್'** ಎಂದು ಅನುಮಾನಿಸ ಬಹುದಾಗಿದೆ. **ಯಾದ್ದೇವಾಪಿಃ ..... । ದೇವಶ್ರುತಂ ವೃಷ್ಟಿವನಿಂ ರರಾಣೋ ಬೃಹಸ್ಪತಿ ರ್ವಾಚಮಸ್ಮಾ ಅಯಚ್ಛತು ॥** *ಋ. ಸಂ. ೧೦. ೯೮. ೭೫.* ॥ ಭಗವಂತನು ಲೋಕಾನು ಗ್ರಹಾರ್ಥವಾಗಿ ಯೋಗಿಗಳ ನಿಷ್ಕಲ್ಮಷ ಹೃದಯದಲ್ಲಿ ದೇವವಾಣಿಯು ಪ್ರಕಾಶವಾಗುವಂತೆ

ಅಂತರ್ಧಾನವಾಗುವಂತೆ ಮಾಡಿದನು. ಈ ವಿಜ್ಞಾನಮಯೀ ದೈವೀವಾಕ್ಕನ್ನು ಋಷಿಗಳು ಯೋಗಬಲದಿಂದ ತಪಸ್ಸಿನಿಂದ ಗ್ರಹಿಸಿ ಲೋಕಕ್ಕೆ ಅನುಗ್ರಹಿಸಿ ರುವ ವೈಖರೀ ರೂಪವಾದ ಭಗವಂತನ ವಾಗ್ವಿಭೂತಿಯೇ ಈ ನಾಲ್ಕು ವೇದಗಳು. ಇವು ಭಗವದ್ವಾಣಿಯಾಗಿರುವುದರಿಂದ ಸಮಸ್ತ ದೋಷಗಳಿಂದ ಮುಕ್ತವಾಗಿದ್ದು ಎಲ್ಲಾ ಜೀವ ಜಂತುಗಳ ಮನುಷ್ಯರ ದೇವತೆಗಳ ಭಾಷೆಗಳ ಉತ್ಪತ್ತಿಸ್ಥಾನವಾಗಿದೆ.

**ಅನಾದಿನಿಧನಾ ನಿತ್ಯಾವಾಗುತ್ಸೃಷ್ಟಾ ಸ್ವಯಂಭುವಾ ।**
**ಆದೌ ವೇದಮಯೀ ದಿವ್ಯಾಯುತಃ ಸರ್ವಾಃ ಪ್ರವೃತ್ತಯಃ ॥**

*ಮ. ಭಾ. ಶಾಂ. ಪ. ೨೨೪.೫೫ ॥*

**ತಸ್ಮಾತ್ ಬ್ರಾಹ್ಮಣ ಉಭೇ ವಾಚೌ ವದತಿ ದೈವೀಂ ಚ ಮಾನುಷಿಂ ಚ ।**
**ಸರ್ವೇಷಾಂ ತು ಸ ನಾಮಾನಿ ಕರ್ಮಾಣಿ ಚ ಪೃಥಕ್ ಪೃಥಕ್ ॥**
**ವೇದಶಬ್ದೇಭ್ಯ ಏನಾದೌ ಪೃಥಕ್ ಸಂಸ್ಥಾಶ್ಚ ನಿರ್ಮಮೇ ॥** ಮನು. *೧.೨೧ ॥*

ಸೃಷ್ಟಿಯ ಆರಂಭದಲ್ಲಿ ಸಮಸ್ತ ಹೆಸರುಗಳೂ ಕರ್ಮಗಳೂ ವ್ಯಷ್ಟಿ ಮತ್ತು ಸಮಷ್ಟಿಯ ಲೌಕಿಕ ಧಾರ್ಮಿಕ ದಾರ್ಶನಿಕ ಚಿಂತನೆಗಳೂ ಜ್ಞಾನಗಳೂ ವಿದ್ಯೆಗಳೂ ವೇದಭಾಷೆಯಿಂದಲೇ ಮೂಡಿಬಂದಿವೆ. ಅಂದರೆ ಮಾನವನ ಸಾಮಾಜಿಕ ಆರ್ಥಿಕ ಧಾರ್ಮಿಕ ರಾಜಕೀಯದ ಆಧಾರದ ನೆಲಗಟ್ಟು ವೇದಗಳೇ ಆಗಿವೆ. ಕವಿ ಶಿಲ್ಪಿ ಚಿತ್ರಕಾರರೇ ಮುಂತಾದ ಅಭಿಜಾತ ಕಲಾವಿದರು ತಾವೇ ಸೃಷ್ಟಿಸಿದ ಕಲೆಯನ್ನು, ವಿಜ್ಞಾನಿಯು ತಾನೇ ಕಂಡುಹಿಡಿದ ನೂತನ ಸೃಷ್ಟಿಯನ್ನು ತಾವೇ ಪರಿಚಯ ಮಾಡಿಕೊಡುವ ಪರಿಯಲ್ಲೇ ಭಗವಂತನು ತಾನು ಮಾಡಿರುವ ಸೃಷ್ಟಿಯನ್ನೂ ತನ್ನನ್ನೂ ವೇದಗಳ ಮೂಲಕ ಪರಿಚಯಿಸಿಕೊಟ್ಟಿದ್ದಾನೆ.

**ವೇದಾಬ್ರಹ್ಮಾತ್ಮವಿಷಯಾಸ್ತ್ರಿಕಾಣ್ಡ ವಿಷಯಾ ಇಮೇ ।**
**ಪರೋಕ್ಷವಾದಾ ಋಷಯಃ ಪರೋಕ್ಷಂ ಮಮ ಚ ಪ್ರಿಯಮ್ ॥**

**ಶಬ್ದಬ್ರಹ್ಮ ಸುದುರ್ಬೋಧಂ ಪ್ರಾಣೇನ್ದ್ರಿಯ ಮನೋಮಯಮ್ ।**
**ಅನನ್ತಪಾರಂ ಗಂಭೀರಂ ದುರ್ವಿಗಾಹ್ಯಂ ಸಮುದ್ರವತ್ ॥**

**ಶ್ರೀ ಕೃಷ್ಣ ಉದ್ಧವನಿಗೆ ವೇದದ ಬಗೆಗೆ ಉಪದೇಶ ಮಾಡುತ್ತಾನೆ :-** ವೇದಗಳು ಕರ್ಮ ಉಪಾಸನೆ ಜ್ಞಾನ ಎಂಬ ಮೂರು ಪ್ರಕರಣಗಳನ್ನೊಳಗೊಂಡಿದ್ದು ಬ್ರಹ್ಮ ಮತ್ತು ಆತ್ಮದ ಬಗೆಗೆ ಪ್ರಸ್ತಾಪಿಸುತ್ತವೆ. ಎಲ್ಲಾ ಮನ್ತ್ರಗಳೂ ಮನ್ತ್ರದ್ರಷ್ಟಾರರಾದ ಋಷಿಗಳೂ ಈ

ವಿಷಯಗಳನ್ನು ಪ್ರತ್ಯಕ್ಷವಾಗಿ ನೇರವಾಗಿ ತಿಳಿಸದೆ ಪರೋಕ್ಷವಾಗಿಯೋ ಗುಪ್ತವಾಗಿಯೋ ಅನ್ತಃಕರಣ ಶುದ್ಧಿಯಾದವರಿಗೆ ಮಾತ್ರ ಅರಿವಾಗುವಂತೆ ಬೋಧಿಸುತ್ತಾರೆ. ಈ ಪರೋಕ್ಷ ಬೋಧನೆಯೇ ನನಗೆ ಬಹುಪ್ರಿಯವಾದುದಾಗಿದೆ. ವೇದಗಳೇ '**ಶಬ್ದಬ್ರಹ್ಮ**' ಎನಿಸಿಕೊಂಡು ನನ್ನ ಮೂರ್ತಿ ಸ್ವರೂಪವಾದ ಪ್ರತೀಕವಾಗಿರುವುದರಿಂದ ಇದರ ರಹಸ್ಯವನ್ನರಿಯುವುದು ಬಹು ಶ್ರಮಸಾಧ್ಯವಾದುದಾಗಿದೆ. ಈ ವೇದವೆಂಬ '**ಶಬ್ದಬ್ರಹ್ಮವು**' ಪರಾ ಪಶ್ಯನ್ತೀ ಮಧ್ಯಮಾ ವಾಣಿಯ ರೂಪದಲ್ಲಿ ಪ್ರಾಣ ಮನಸ್ಸು ಮತ್ತು ಇನ್ದ್ರಿಯಮಯವಾಗಿ ಸಮುದ್ರದಂತೆ ಮೇರೆಯೇ ಇಲ್ಲದುದೂ ಆಳವಾದುದೂ ಗಂಭೀರವಾದುದೂ ಆಗಿರುತ್ತದೆ. ಇದನ್ನು ತಿಳಿದುಕೊಳ್ಳಲು ಸುಲಭವಾಗುವಂತೆ ಅನಂತಶಕ್ತಿಸಂಪನ್ನನೂ ಸ್ವಯಂಬ್ರಹ್ಮನೂ ಆದ ನಾನೇ 'ಕೃಷ್ಣನೇ' ವೇದವಾಣಿಯನ್ನು ವಿಸ್ತರಿಸಿ ಎಲ್ಲೆಲ್ಲೂ ವ್ಯಾಪಿಸಿರುವಂತೆ ಮಾಡಿದ್ದೇನೆ. ಕಮಲದ ದಂಟಿನಲ್ಲಿರುವ ಬಹುಸೂಕ್ಷ್ಮವಾದ ನಾರಿನಂತೆ ವೇದವಾಣಿಯು ಸಮಸ್ತ ಜೀವರಾಶಿಗಳಲ್ಲಿ ವ್ಯಾಪಿಸಿ ಅನಾಹತನಾದವಾಗಿ ಮಿಡಿಯುತ್ತಿದೆ.

ಈ ವೇದವಾಣಿಯು ಕರ್ಮಕಾಂಡದಲ್ಲಿ ಅನುಸರಿಸುವ ವಿಧಾನವನ್ನೂ ಉಪಾಸನಾ ಕಾಂಡದಲ್ಲಿ ವರ್ಣಿಸುವ ದೇವತೆಗಳನ್ನೂ ಜ್ಞಾನಕಾಂಡದಲ್ಲಿ ಪ್ರಮಾಣಾಂತರಗಳಿಂದ ಸಿದ್ಧಮಾಡಿ ತೋರಿಸುವ ವಿಕಲ್ಪಸಹಿತ ಅರಿಯಬೇಕಾದುದೆಲ್ಲವನ್ನೂ '**ನಾನು ಕೃಷ್ಣ**' ವಿನಾ ಮತ್ತಾರೂ ಪೂರ್ಣವಾಗಿ ಅರಿಯಲಾರರು. ಎಲ್ಲಾ ಶ್ರುತಿಗಳೂ ಕರ್ಮಕಾಂಡದಲ್ಲಿ ನನ್ನ ಶುಭ ಸಂಯೋಗವನ್ನೇ ನಾಮಧೇಯವನ್ನೇ ಅಳವಡಿಸಿಕೊಂಡಿವೆ. ಉಪಾಸನಾ ಕಾಂಡದಲ್ಲಿ ವಿವಿಧ ದೇವತೆಗಳ ರೂಪದಲ್ಲಿ ನನ್ನನ್ನೇ ವರ್ಣಿಸಲಾಗಿದೆ. ಜ್ಞಾನಕಾಂಡದಲ್ಲಿ ಆಕಾಶಾದಿ ಸಮಸ್ತವನ್ನೂ ನನ್ನಲ್ಲೇ ಅಧ್ಯಾರೋಪ ಮಾಡಿ ನಂತರ **ನೇತಿ ನೇತಿ** ಎಂದು ನಿಷೇಧಿಸುತ್ತಿವೆ. ಶ್ರುತಿಗಳೆಲ್ಲಾ ನನ್ನಲ್ಲೇ ಆಶ್ರಯ ಪಡೆದು ಭೇದಗಳನ್ನು ಆರೋಪ ಮಾಡಿ ಪುನಃ ಇವೆಲ್ಲಾ ಮಾಯಾಮಾತ್ರವೆಂದು ಅನ್ಯಪ್ರಮಾಣಗಳಿಂದ ಸಿದ್ಧಮಾಡಿ ಎಲ್ಲವನ್ನೂ ನಿಷೇಧಿಸುತ್ತವೆ. ಅಂತ್ಯದಲ್ಲಿ ವೇದಗಳೆಲ್ಲಾ ನನ್ನಲ್ಲೇ ಲೀನವಾಗಿ ಕೇವಲ ಅಧಿಷ್ಠಾನ ರೂಪದಿಂದ ನಾನೇ ಶೇಷವಾಗಿರುತ್ತೇನೆ - ಭಾಗವತ. ೧೧.೨೧.೩-೪೩.

**ವಿದನ್ತಿ .... ಜಾನನ್ತಿ, ವಿದ್ಯನ್ತೇ - ಭವನ್ತಿ, ವಿನ್ದನ್ತೇ - ಲಭನ್ತೇ, ವಿನ್ದನ್ತಿ - ವಿಚಾರಯನ್ತಿ**, ಇತ್ಯಾದಿ ಸಮಸ್ತ ವ್ಯವಹಾರಗಳೂ ವಾಕ್ ಮೂಲಕ ಪದ್ಯಾತ್ಮಕವಾಗಿಯೋ ಗದ್ಯಾತ್ಮಕವಾಗಿಯೋ ಅಥವಾ ಗಾನಾತ್ಮಕವಾಗಿಯೋ ಅಂದರೆ ಈ ಮೂರು ಮಾರ್ಗ ಗಳಿಂದ ಮಾತ್ರವೇ ವ್ಯಕ್ತವಾಗುವುದು ಸಾಧ್ಯವೆಂಬುದನ್ನು ಗಮನಿಸಿದ ವೇದವ್ಯಾಸರು ವೇದದ ಪದ್ಯಾತ್ಮಕವಾದ ಭಾಗವನ್ನು ಋಗ್ವೇದ ಮತ್ತು ಅಥರ್ವಣವೇದವೆಂದೂ, ವೇದದ

ಗದ್ಯಾತ್ಮಕವಾದ ಭಾಗವನ್ನು ಯಜುರ್ವೇದವೆಂದೂ, ವೇದದ ಗಾನಾತ್ಮಕವಾದ ಭಾಗವನ್ನು ಸಾಮವೇದವೆಂದೂ ವಿಂಗಡಿಸಿದ್ದಾರೆ. ದ್ರಾಹ್ಯಾಯಣ ಪ್ರತಿಷ್ಠಾನವು **'ಸಾಮವೇದ ಪರಿಚಯ'** ಎಂಬ ತನ್ನ ಪ್ರಥಮಗ್ರಂಥದಲ್ಲಿ ಸಾಮವೇದದ ವಿವಿಧ ಆಯಾಮಗಳ ಬಗೆಗೂ ಗ್ರಂಥಗಳ ಬಗೆಗೂ ಸಾಮವೇದ ಮತ್ತು ಸಂಗೀತ ಇತ್ಯಾದಿ ವಿವಿಧ ವಿಷಯಗಳ ಬಗೆಗೂ ಪರಿಚಯ ಮಾಡಿಕೊಟ್ಟಿದೆ. ಪ್ರಕೃತ ಸಾಮವೇದ ಸಂಹಿತೆಯನ್ನು ಐದುನೂರು ಪುಟಗಳ ಐದು ಸಂಪುಟಗಳಲ್ಲಿ ಪ್ರಥಮಬಾರಿಗೆ ಕನ್ನಡದಲ್ಲಿ ಸಂಪಾದಿಸಿ ಪ್ರಕಟಿಸುವ ಯೋಜನೆಯಂತೆ ಪ್ರಕಟವಾಗುತ್ತಿರುವ ಈ ಪ್ರಥಮ ಸಂಪುಟದಲ್ಲಿ ಸಾಮವೇದ ಸಂಹಿತೆಯ ಪ್ರಸ್ತಾವ ಮಾಡಲಾಗುತ್ತಿದೆ.

ಭಗವಂತನ ದಿವ್ಯವಿಭೂತಿಯು ಸಾಮವೇದವೆಂಬುದನ್ನು ಈ ನುಡಿಗಟ್ಟುಗಳೇ ಘೋಷಿಸುತ್ತಿವೆ **ವೇದಾನಾಂ ಸಾಮವೇದೋಽಸ್ಮಿ** *ಭ.ಗೀ.೧೦.೨೨.* **'ಸಾಮವೇದಶ್ಚ ವೇದಾನಾಂ....'** *ಮ.ಭಾ.ಅನುಶಾಸನಪರ್ವ. ೧೪.೩.೭.* **॥ ತ್ರಿಸಾಮಾ ಸಾಮಗಃ ಸಾಮ ॥** - *ವಿಷ್ಣು.ಸಹಸ್ರನಾಮ. ೫೭೪-೫೭೬* **॥ ದೇವವ್ರತ ಸಮಾಖ್ಯಾತೈಸ್ತ್ರಿಭಿಃ ಸಾಮಭಿಃ ಸಾಮಗೈಃ ಸ್ತುತ ಇತಿ ತ್ರಿಸಾಮಾ । ಸಾಮಗೀಯತೀತಿ ಸಾಮಗಃ ॥ ಶ್ರಿಯಂ ಚ ವಕ್ಷಸ್ಯರವಿನ್ದ ಹಸ್ತಾಮ್ । ಕಂಠೇ ಚ ಸಾಮಾನಿ ಸಮಸ್ತರೇಫಾನ್ ॥** *ಭಾಗವತ. ೮.೨೦.೨೫* **॥ ವಾಚಃ ಋಗ್ರಸಃ । ಋಚಃ ಸಾಮರಸಃ ಸಾಮ್ನ ಉದ್ಗೀಥೋರಸಃ** - *ಛಾಂ.ಉ. ೧.೧.೨* **॥ ಸಾಮವೇದ ಏವ ಪುಷ್ಪಮ್** - *ಛಾಂ.ಉ. ೩.೩.೧* **॥ ಸ್ವರ್ಗ ಸಂಸ್ತಾವಂ ಹಿ ಸಾಮೇತಿ** - *ಛಾಂ.ಉ. ೧.೮.೫.* **॥ ಸ್ವರಿತಿ ಸಾಮಭ್ಯೋಽಕ್ಷರತ್ । ಸ ಸ್ವರ್ಗೋ ಲೋಕೋಽಭವತ್** - *ಷ.ವಿಂ.ಬ್ರಾ. ೧.೫.೭.* **॥ ಸರ್ವೇಷಾಂ ವಾ ಏಷ ವೇದಾನಾಂ ರಸೋ ಯತ್ಸಾಮ ।** *ಶತಪಥ ೮.೩.೨೩* **॥ ಯದ್ಧವೈ ಶಿವಂ ಶಾನ್ತಂ ವಾಚಸ್ತತ್ ಸಾಮ ।** *ಜೈ.ಬ್ರಾ.೩.೫೨* **॥ ಏತದ್ವೈ ಸಾಮ್ನಃ ಸ್ವಂ ಯತ್ ಸ್ವರಃ ।** *ಜೈ.ಬ್ರಾ.* **॥ ಅಂಗಿರಸಾಂ ಸಾಮಭಿಃ ಸ್ತೂಯಮಾನಾಃ** - *ಋ.ಸಂ. ೧.೧೦೭.೨* **॥ ಅಂಗಿರಸೋ ನ ಸಾಮಭಿಃ** - *ಋ.ಸಂ. ೧೦.೭೮.೫* **॥ ಉಭೌ ವಾಚಾ ವದತಿ 'ಸಾಮಗಾ' ಇವ ಗಾಯತ್ರಂ ಚ ತ್ರೈಷ್ಟುಭಂ ಚಾನುರಾಜತಿ । ಉದ್ಗಾತೇವ ಶಕುನೇ 'ಸಾಮಗಾಯಸಿ' ಬ್ರಹ್ಮಪುತ್ರ ಇವ ಸವನೇಷು ಶಂಸಸಿ ।** *ಋ.ಸಂ. ೨.೪೩.೧,೨* **॥ ಯೋ ಜಾಗಾರ ತಮು 'ಸಾಮಾನಿ' ಯನ್ತಿ** - *ಋ.ಸಂ.೫.೪೪.೧೪* **॥ ತಮೇವ ಋಷಿಂ ತಮು ಬ್ರಹ್ಮಾಣಮಾಹುಃ ಯಜ್ಞನ್ಯಂ 'ಸಾಮಗಾಂ' ಉಕ್ಥಶಾಸಮ್** - *ಋ.ಸಂ. ೧೦.೧೦೭.೬* **॥ ಉಪಗಾಸಿಷತ್ ಶ್ರವ ತ್ಸಾಮ ಗೀಯಮಾನಮ್** - *ಋ.ಸಂ. ೮.೮೧.೫* **॥**

**ಯೂಯಂ ಋಷಿಂ ಅವಥ 'ಸಾಮ' ವಿಪ್ರಮ್** - *ಋ.ಸಂ. ೫.೫೪.೧೪* ॥ ಸಂಹಿತೆಗಳಲ್ಲಿ ಸಾಮಗಾನ ಮಾಡುವವರನ್ನು **'ಸಾಮವಿಪ್ರ', 'ಸ್ತೋಮತಷ್ಟಾ', 'ಗಾಯತ್ರಿನ್',**

'ಉದ್ಗಾತಾ', 'ಸಾಮಗ' ಶಬ್ದಗಳಿಂದ ಗುರುತಿಸಲಾಗಿದೆ. ಸಾಮಗಾಯಕನಂತೆ ಆ ಪಕ್ಷಿಯು ಗಾಯತ್ರೀ ಮತ್ತು ತ್ರಿಷ್ಟುಪ್ ಛನ್ದಸ್ಸಿನಲ್ಲಿ ಗಾನ ಮಾಡುತ್ತಿರುವುದರಿಂದ ಬಹುಶೋಭಾಯಮಾನವಾಗಿದೆ. ಶಕುನ ಪಕ್ಷಿಯೇ! ಉದ್ಗಾತೃವಿನಂತೆ ಸಾಮಗಾನ ಮಾಡುತ್ತಿದ್ದೀಯೆ. ಬ್ರಹ್ಮಪುತ್ರನಂತೆ ನೀನು ಯಜ್ಞದ ಸವನಗಳಲ್ಲಿ ಗಾನಮಾಡು. ಜಾಗೃತವಾಗಿರುವವನ ಬಳಿಗೆ ಸಾಮ ಪಯಣಿಸುತ್ತದೆ. ಅವನನ್ನೇ ಋಷಿ, ಅವನನ್ನೇ ಬ್ರಹ್ಮ, ಅವನನ್ನೇ ಯಜ್ಞ ಮಾಡುವವನು. ಅವನನ್ನೇ ಸಾಮಗಾಯಕನು ಸ್ತೋತ್ರಮಾಡುವವನು ಎನ್ನುತ್ತಾರೆ. ಮನುಷ್ಯನೇ ಸಾಮಗಾನಮಾಡು. ಸಾಮಗಾನವನ್ನು ಕೇಳಲು ಅನುಕೂಲ ಮಾಡಿಕೊಡು. ಸಾಮಗಾನಮಾಡುವ ಕುಶಲ ಬ್ರಾಹ್ಮಣನನ್ನೂ ಋಷಿಯನ್ನೂ ರಕ್ಷಿಸು.

**ಏತೋನ್ವಿನ್ದ್ರಂ ಸ್ತವಾಮ, ಶುದ್ಧಂ ಶುದ್ಧೇನ ಸಾಮ್ನಾ** - *ಋ.ಸಂ. ೮.೯೫.೭* ॥ **ಇನ್ದ್ರಾಯ ಸಾಮಗಾಯತ ವಿಪ್ರಾಯ ಬೃಹತೇ ಬೃಹತ್** - *ಋ.ಸಂ. ೮.೯೮.೧* ॥ ಪವಿತ್ರವೂ ಮಹಿಮಾನ್ವಿತವೂ ಆದ **'ಬೃಹತ್‌ಸಾಮ'** ದಿಂದ ಜ್ಞಾನಿಯಾದ ಇನ್ದ್ರನೇ ನಿನ್ನನ್ನು ನಾವು ಸ್ತುತಿಸುತ್ತೇವೆ. **ಬೃಹಸ್ಪತಿಃ 'ಸಾಮಭಿಃ' ಋಕ್ವೋ ಅರ್ಚತು** - *ಋ.ಸಂ. ೧೦.೩೬.೫* ॥ **ಅರ್ಚತ ಏಕೇ ಮಹಿ ಸಾಮ ಮನ್ವತ** - *ಋ.ಸಂ. ೮.೨೯.೧೦* ॥ ಪೂಜ್ಯನಾದ ಬೃಹಸ್ಪತಿಯ ಅರ್ಚನೆಯು ಸಾಮಗಾನದಿಂದ ನಡೆಯಲಿ. ಯಾರಾದರೂ ಮಹಿಮಾನ್ವಿತವಾದ ಸಾಮ ಗಾನವನ್ನು ಮಾಡಲಿ. **ಆಂಗೂಷ್ಯಂ ಶವಸಾನಾಯಸಾಮ** - *ಋ.ಸಂ. ೧.೬೨.೨.* ॥ **ಋತಸ್ಯ 'ಸಾಮನ್' ರಣಯನ್ತದೇವಾಃ** - *ಋ.ಸಂ. ೧.೧೪೭.೧* ॥ **ಗಾಯತ್ರೇಣ ಪ್ರತಿಮಿಮೀತೇ ಅರ್ಕಂ ಅರ್ಕೇಣ ಸಾಮ ತ್ರೈಷ್ಟುಭೇನ ವಾಕಮ್** - *ಋ.ಸಂ. ೧.೧೬೪.೨೪* ॥ **ಯೇ ನಪರಃ ಸಾಮ್ನೋ ವಿದುಃ** - *ಋ.ಸಂ. ೨.೨೩.೧೬* ॥ ಮಹಾಬಲಶಾಲಿಯಾದ ಇನ್ದ್ರನ ಪ್ರೀತ್ಯರ್ಥವಾಗಿ ಸಾಮಗಾನ ಮಾಡಿ, ಯಜ್ಞದಲ್ಲಿ ಸಾಮಗಾನವನ್ನು ಆಲಿಸಿದ ದೇವತೆಗಳು ಆನಂದಿತರಾಗಿದ್ದಾರೆ. ಗಾಯತ್ರಿಯಿಂದ ಅರ್ಕ ಸಾಮವು ಉದಯವಾಗುತ್ತದೆ. ಅರ್ಕದಿಂದ ಸಾಮವೂ ತ್ರೈಷ್ಟುಭದಿಂದ ವಾಣಿಯೂ ಶ್ರೇಷ್ಠತೆ ಯನ್ನು ಪಡೆಯುತ್ತವೆ. ದೇವತೆಗಳು ಸಾಮವನ್ನು ಮಾತ್ರ ಶ್ರೇಷ್ಠವೆಂದು ಪರಿಗಣಿಸುತ್ತಾರೆ.

**ತ್ವಷ್ಟಾ ಜನತ್ ಸಾಮ್ನಃ ಸಾಮ್ನಃ ಕವಿಃ** - *ಋ.ಸಂ. ೨.೨೩.೧೭* ॥ **ಸಾಮ ಕೃಣ್ವನ್ ಸಾಮನ್ಯೋ ವಿಪಶ್ಚಿತ್ ಕ್ರನ್ದನ್ನೇತಿ** - *ಋ.ಸಂ. ೯.೯೬.೨೨* ॥ **ಪರಾವತೋ ನ ಸಾಮ ತದ್ಯತ್ರಾ ರಣನ್ತಿ ಧೀತಯಃ** - *ಋ.ಸಂ. ೯.೧೧೧.೨.* ॥ **ಸ ಹಿ ದ್ಯುತಾ ವಿದ್ಯುತಾವೇತಿ ಸಾಮ** - *ಋ.ಸಂ. ೧೦.೯೯.೨* ॥ **ತಸ್ಮಾತ್ ಯಜ್ಞಾತ್ ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ** - *ಋ.ಸಂ.*

*೧೦.೯೦.೯* ॥ ತ್ವಷ್ಟನ ಕೃಪೆಯಿಂದ ಸಾಮಗಾನದ ಜ್ಞಾನ ಲಭಿಸಿದೆ. ಸಾಮಗಾನದ ಮಹಾನ್ ಜ್ಞಾನಿಯು ಸಾಮಗಾನ ಮಾಡುತ್ತಾ ಮುಂಚೂಣಿಯಲ್ಲಿರುತ್ತಾನೆ. ಸಾಮಗಾನ ಮಾಡುತ್ತಿರುವುದನ್ನು ಕೇಳುವುದಕ್ಕಾಗಿ ವಿದ್ಯುತ್ತಿನಂತೆ ಪ್ರಕಾಶಿಸುತ್ತಿರುವ ಆಯುಧವನ್ನು ಧರಿಸಿದ ಇನ್ದ್ರನು ದಯಮಾಡಿಸುತ್ತಿದ್ದಾನೆ. ಆ ಸರ್ವಹುತವೆಂಬ ಯಜ್ಞದಲ್ಲಿ ಋಕ್ ಮತ್ತು ಸಾಮಗಳು ಉದಯವಾದವು.

**ಅಶೀತಿಭಿಃ ತಿಸೃಭಿಃ ಸಾಮಗೇಭಿಃ ಇಷ್ಟಾಪೂರ್ತೇ ಅವತು ನಃ** - *ಅಥ. ೨.೧೨.೪* ॥ **ಋಚಂ ಸಾಮಂ ಯಜಾಮಹೇ ಯಾಭ್ಯಾಂ ಕರ್ಮಾಣಿ ಕುರ್ವತೇ** - *ಅಥ. ೭.೫೪.೧೧* ॥ **ಬೃಹತಃ ಪರಿಸಾಮಾನಿ ಷಷ್ಠಾತ್ ಪಂಚಾಧಿ ನಿರ್ಮಿತಾ ಷಡುಸಾಮಾನಿ ಷಡಹಂ ವಹನ್ತಿ** - *ಅಥ. ೮.೯.೧೬* ॥ **ಸಾಮಾನಿ ಯಸ್ಯ ಲೋಮಾನಿ** - *ಅಥ. ೯.೬.೨* ॥ ೮೦x೩ = ೨೪೦ ಸಾಮಗಾಯಕರೊಂದಿಗೆ ಅನುಷ್ಠಾನಗೊಂಡಿರುವ ಇಷ್ಟಾಪೂರ್ತಗಳು ನಮ್ಮನ್ನು ರಕ್ಷಿಸಲಿ. ಋಕ್ ಮತ್ತು ಸಾಮಗಳಿಂದ ಯಜ್ಞಾದಿ ಕರ್ಮಗಳನ್ನು ನೆರವೇರಿಸುತ್ತೇವೆ. ಆರನೆಯ ಬೃಹತ್ಸಾಮದ ಆಧಾರದ ಮೇಲೆ ಐದು ಬಗೆಯ ಸಾಮಗಳು ಉದಯವಾಗಿವೆ. ಆರು ದಿನಗಳ ಯಜ್ಞದಲ್ಲಿ ಆರು ಸಾಮಗಳ ಗಾನವಾಗುತ್ತದೆ.

**ಸಪತ್ನಹ ಋಕ್ಸಂಶಿತಃ ಸಾಮತೇಜಾಃ** - *ಅಥ. ೧೦.೫.೩೦* ॥ **ಯತ್ರ ಋಷಯಃ ಪ್ರಥಮಜಾ ಋಚಃ ಸಾಮ ಯಜುರ್ಮಹೀ** - *ಅಥ. ೧೦.೭.೧೪* ॥ **ಸಾಮ್ನಾ ಯೇ ಸಾಮ ಸಂವಿದುಃ ಅಜಸ್ತದ್ದೃಶೇ ಕ್ವ** - *ಅಥ. ೧೦.೮.೪೧* ॥ **ವಶಾ ಸಮುದ್ರೇ ಪ್ರಾನ್ಯತ್ಯತ್ ಋಚಃ ಸಾಮಾನಿ ವಿಭ್ರಾತೀ** - *ಅಥ. ೧೦.೧೦.೧೪* ॥ **ಬ್ರಹ್ಮಣಾ ಪರಿಗೃಹೀತಾ ಸಾಮ್ನಾ ಪರ್ಯೂಢಾ** - *ಅಥ. ೧೧.೩.೧೫* ॥ ಶತ್ರುಗಳನ್ನು ಸಂಹರಿಸುವವನು ಋಕ್‌ಗಳಿಂದ ತೀಕ್ಷ್ಣನೂ ಸಾಮಗಾನದಿಂದ ತೇಜಸ್ವಿಯೂ ಆಗಿರುತ್ತಾನೆ. ಪ್ರಥಮವಾಗಿ ಜನ್ಮವೆತ್ತಿದ ಋಷಿಯೂ ಋಕ್ ಯಜುಸ್ಸಾಮಗಳೂ ಪೃಥ್ವಿಗೆ ಆಶ್ರಯವಾಗಿವೆ. ಸಾಮದಿಂದ ಸಾಮವನ್ನು ಚೆನ್ನಾಗಿ ತಿಳಿದವನು ತಾನೇ ಅಜನ್ಮನಾಗುವುದರಿಂದ ಜನ್ಮರಹಿತನನ್ನು ನೋಡುವುದಾದರೂ ಎಲ್ಲಿ? ಋಕ್ ಮತ್ತು ಸಾಮಗಳನ್ನು ಧರಿಸಿದ ಗೋ ಭವಸಮುದ್ರ ದಲ್ಲಿ ನೃತ್ಯ ಮಾಡಲು ತೊಡಗಿತು. ಬ್ರಹ್ಮನು ಅದನ್ನು ಸುತ್ತಲೂ ಆವರಿಸಿ ಹಿಡಿದುಕೊಳ್ಳಲು ಸಾಮವು ಅವನನ್ನು ಮುತ್ತಿ ಸೆರೆ ಹಿಡಿಯಿತು.

**ಋಕ್ಸಾಮ ಯಜುರುಚ್ಛಿಷ್ಟ ಉದ್ಗೀಥ ಪ್ರಸ್ತುತಂ ಸ್ತುತಮ್ । ಉಚ್ಛಿಷ್ಟೇ ಸ್ವರಸಾಮ್ನೋ ಮೇಡಿಶ್ಚ ತನ್ಮಯೀ** - *ಅಥ. ೧೧.೭.೫* ॥ **ಉಚ್ಛಿಷ್ಟ - ಯಜ್ಞಶೇಷ,** ದೇವರ ನೈವೇದ್ಯವಾದುದು, ಪ್ರಳಯಾನಂತರ ಶೇಷವಾಗಿರುವ ನೇತಿನೇತಿನಂತರ ಎಲ್ಲಕ್ಕೂ

ಅತಿರಿಕ್ತವಾದ ಸತ್ ಉಚ್ಛಿಷ್ಟಬ್ರಹ್ಮ । ಋಚಃ ಸಾಮಾನಿ ಛನ್ದಾಂಸಿ ಪುರಾಣಂ ಯಜುಷಾ ಸಹ - *ಅಥ. ೧೧.೭.೨೪* // ಶರೀರಂ ಬ್ರಹ್ಮ ಪ್ರಾವಿಶತ್ ಋಚಃ ಸಾಮಥೋ ಯಜುಃ - *ಅಥ. ೧೧.೮.೨೩* // ಬ್ರಹ್ಮಾಣೋ ಯಸ್ಯಾಮರ್ಚನ್ತಿ ಋಗ್ಭಿಃ ಸಾಮ್ನಾ ಯಜುರ್ವಿದಃ - *೧೨.೧.೩೮* // ತಮ್ಯಚಶ್ಚ ಸಾಮಾನಿ ಚ ಯಜೂಂಷಿ ಚ ಬ್ರಹ್ಮಚಾನು ವ್ಯಚಲನ್ - *ಅಥ. ೧೫.೬.೮* // ಋಚಾಂ ಚ ವೈಸಸಾಮ್ನಾಂ ಚ ಯಜುಷಾಂ ಚ ಬ್ರಹ್ಮಣಶ್ಚ ಪ್ರಿಯಂ ಧಾಮ ಭವತಿ - *ಅಥ. ೧೫.೬.೯* // ಋಕ್ ಸಾಮ ಯಜುಸ್ಸು, ಉದ್ಗೀಥ ಪ್ರಸ್ತಾವ ಸ್ತೋತ್ರ, ಸ್ವರ, ಗಾನ, ಛನ್ದಸ್ಸು ಪುರಾಣಾದಿಗಳೆಲ್ಲವೂ ಬ್ರಹ್ಮಜ್ಞಾನವಾಗಿದ್ದು, ನನ್ನಲ್ಲಿ ಸಮಾವೇಶ ಹೊಂದಲಿ. ಇವೆಲ್ಲವುಗಳನ್ನೂ ತಿಳಿದು ಯಜ್ಞಕರ್ಮ ಮಾಡುವ ಬ್ರಾಹ್ಮಣನನ್ನು ಚತುರ್ವೇದಗಳೂ ಬ್ರಹ್ಮನೂ ಹಿಂಬಾಲಿಸುತ್ತಾರೆ. ಇಂತಹ ಬ್ರಾಹ್ಮಣನು ಚತುರ್ವೇದಗಳಿಗೂ ಬ್ರಹ್ಮನಿಗೂ ಪ್ರಿಯವಾದ ಆಶ್ರಯ ನೀಡುವ ವಾಸಸ್ಥಾನವಾಗಿದ್ದಾನೆ.

**ರಥನ್ತರಂ** - *ಯಜು. ೧೦.೧೦,* **ಬೃಹತ್** - *ಯಜು. ೧೦.೧೧,* **ವೈರೂಪಂ** - *ಯಜು. ೧೦.೧೨,* **ವೈರಾಜಂ** - *ಯಜು. ೧೦.೧೩,* **ವೈಖಾನಸಂ - ವಾಮದೇವ್ಯಂ, ಯಜ್ಞಾಯಜ್ಞೀಯಂ** - *ಯಜು. ೧೨.೪.,* **ಶಾಕ್ವರಂ ರೈವತಂ** - *ಯಜು. ೧೦.೪,* **ಗಾಯತ್ರಂ ಗೌರೀವಿತಂ ಅಭೀವರ್ತಂ ಕ್ರೋಶಂ, ಸತ್ರಸ್ಯರ್ಧಿ, ಪ್ರಜಾಪತೇ ಹೃದಯಂ, ಶ್ಲೋಕಂ, ಅನುಶ್ಲೋಕಂ, ಭದ್ರಂ, ರಾಜನ್, ಅರ್ಕ್ಯಂ, ಇಲಾನ್ದಂ,** ಹೀಗೆ ಸಾಮವೇದದ ಒಂದಲ್ಲ ಇನ್ನೊಂದು ಗಾನದ ಹೆಸರು, ವಿಷಯಗಳು, ಶ್ರುತಿಸ್ಮೃತಿ ಪುರಾಣೇತಿಹಾಸಗಳಲ್ಲೂ ಕಾಳಿದಾಸಾದಿಗಳ ಮಹಾಕಾವ್ಯಗಳಲ್ಲೂ ಕನ್ನಡದ ಕಾವ್ಯಗಳಲ್ಲೂ ಹೊಗಳಿಕೆಗೆ ಹೆಗ್ಗಳಿಕೆಗೆ ಗೌರವಕ್ಕೆ ಪಾತ್ರವಾಗಿ ಅಭಿವ್ಯಕ್ತವಾಗಿರುವುದೆಂಬುದೇ ಸಾಮವೇದದ ಮಹತ್ವವನ್ನು ಸಾರುತ್ತಿದೆ. ಇಂತಹ ಮಹಾಮಹಿಮೋಪೇತವಾದ ಸಾಮವೇದ ಸಂಹಿತೆಯು ಕುತೂಹಲಿಗಳ ಅವಲೋಕನಕ್ಕೂ, ಆಸಕ್ತರ ಓದಿಗೂ ಜಿಜ್ಞಾಸುಗಳ ಸಂಶೋಧನೆಗೂ, ಸ್ವಧರ್ಮನಿಷ್ಠರ ಅಧ್ಯಯನ ಅಧ್ಯಾಪನಕ್ಕೂ ಸಾಧಕರ ಮುಮುಕ್ಷುಗಳ ಉಪಾಸನೆಗೂ ಪಾರಾಯಣಕ್ಕೂ ಅನುಕೂಲವಾಗುವಂತೆ ಪ್ರಥಮ ಬಾರಿಗೆ ಕನ್ನಡದಲ್ಲಿ ಪ್ರಕಟವಾಗುತ್ತಿದೆ.

**ವೇದಾರ್ಥ ಚಿಂತನೆ :** ಅಜ್ಞಾತವಾದ ಅತಿಪ್ರಾಚೀನಕಾಲದಿಂದಲೂ ಲಿಪಿಯ ಬರವಣಿಗೆಯ ಸಹಾಯವಿಲ್ಲದೆಯೂ ಗುರುಶಿಷ್ಯ ಪರಂಪರೆಯಲ್ಲಿ ಕಿವಿಯಿಂದ ಕಿವಿಗೆ ಇಂದಿನವರೆಗೆ ಅಕ್ಷುಣ್ಣವಾಗಿ ಹರಿದು ಬಂದಿರುವುದರ ದ್ಯೋತಕವಾಗಿ ವೇದ ಗಳಿಗೆ **'ಶ್ರುತಿ'** ಎಂಬ ಅಭಿಧಾನವಿದೆ. ಆನುಪೂರ್ವಿಯು ನಿತ್ಯವಾಗಿರುವ, ನಿಯತ ವಾಚೋಯುಕ್ತವಾಗಿರುವ - **ಅಗ್ನಿಮೀಳೇ** ಬದಲು **ವಹ್ನಿಮೀಳೇ** ಎಂಬೀ ವ್ಯತ್ಯಾಸಗಳಿಗೆ ಅವಕಾಶ

ಪಲ್ಲದಿರುವಂತೆ, ವೇದಗಳಿಗೆ ವಿಶಿಷ್ಟವಾದ ಛಂದೋವಿಲಾಸದ ಮುದ್ರೆಯನ್ನೊಳಗೊಂಡಿರುವ ವೇದ ಮನ್ತ್ರಗಳ ಮೂಲ ಪಾಠಕ್ಕೆ ಒಂದೇ ಒಂದು ಮಾತ್ರೆ ಸ್ವರ ಅಕ್ಷರ ಒತ್ತುಗಳನ್ನಾಗಲೀ ಸೇರಿಸದಂತೆ ಲೋಪವಾಗದಂತೆ ಕಟ್ಟುನಿಟ್ಟಾಗಿ ಆಯಾ ಪ್ರಾತಿಶಾಖ್ಯಾದಿ ಶಾಸ್ತ್ರಗಳು ರೂಪಿಸಿರುವ ಕ್ರಮದಲ್ಲೇ ಸ್ವಧರ್ಮನಿಷ್ಠೆ ಶ್ರದ್ಧಾಭಕ್ತಿಗಳಿಂದ ಅಧ್ಯಯನ ಅಧ್ಯಾಪನದಲ್ಲೇ ನಿರತರಾಗಿ ಬಹುಪ್ರಯಾಸದಿಂದ ಕಂಠಪಾಠಮಾಡಿ ಮನ್ತ್ರಗಳನ್ನು ವಾಚೋವಿಧೇಯವಾಗಿ ಮಾಡಿಕೊಂಡು ವೇದದ ಮೂಲಸ್ವರೂಪವನ್ನು ಅಕ್ಷುಣ್ಣವಾಗಿ ಇಂದಿನವರೆಗೂ ಕಾಪಾಡಿಕೊಂಡು ಬಂದಿರುವ ವೇದ ವಿದ್ವಾಂಸರ ಸೇವೆಯು ಬಹು ಪ್ರಶಂಸನೀಯವೂ ಅಭೂತಪೂರ್ವವೂ ಆಗಿದೆಯೆಂದು ಪ್ರಪಂಚವೇ ಕೊಂಡಾಡುತ್ತಿದೆ. ಇಂದು ವೇದವು ಪ್ರಪಂಚವನ್ನೆಲ್ಲಾ ವ್ಯಾಪಿಸಿ ಭಾರತಕ್ಕೆ ಗೌರವವನ್ನು ತರುತ್ತಿರುವುದೂ ನಿತ್ಯ ನೂತನ ಪ್ರೇರಣೆಯನ್ನು ನೀಡುತ್ತಿರುವುದೂ ಈ ಪೂರ್ವಸೂರಿಗಳ ನಿಃಸ್ವಾರ್ಥಸೇವೆಯಿಂದ ಮಾತ್ರ ಸಾಧ್ಯವಾಗಿದೆ ಎಂದು ಕೃತಜ್ಞತೆಯನ್ನರ್ಪಿಸುವುದು ಎಲ್ಲರ ಕರ್ತವ್ಯವಾಗಿದೆ.

ಸರ್ವಾನುಕ್ರಮಣಿಕೆ ಮುಂತಾದ ಗ್ರನ್ಥಗಳು ಪ್ರತಿ ಮನ್ತ್ರದ ಋಷಿ, ಛನ್ದಸ್ಸು, ದೇವತಾದಿಗಳನ್ನು ತಿಳಿಸುತ್ತವೆ. ಪ್ರಾತಿಶಾಖ್ಯಾದಿ ಲಕ್ಷಣ ಗ್ರನ್ಥಗಳು ಮಾತ್ರಾ ಸ್ವರ ಅಕ್ಷರ ಪದ ಸಂಧಿ ಸಮಾಸ ವಾಕ್ಯ ಋಕ್ ಮತ್ತು ಗಾನಗಳ ಖಚಿತವಾದ ಸ್ವರೂಪ ಲಕ್ಷಣಗಳನ್ನು ಎಳೆ ಎಳೆಯಾಗಿ ತಿಳಿಸಿ ಯಾವುದೇ ಹಂತದಲ್ಲಿ ವೇದಪಾಠದ ಮೂಲಸ್ವರೂಪಕ್ಕೆ ಕುಂದುಂಟಾಗದಂತೆ ಅಧ್ಯಯನ-ಅಧ್ಯಾಪನಕ್ರಮಗಳನ್ನೂ ವೇದಾಧ್ಯಯನದಲ್ಲಿ ನಿರತರಾಗಿರುವವರು ಆಚರಣೆಯಲ್ಲಿಟ್ಟುಕೊಳ್ಳಬೇಕಾದ ವಿಧಿನಿಯಮಗಳನ್ನೂ ಪಾಲಿಸಬೇಕಾದ ಅನುಷ್ಠಾನಗಳನ್ನೂ ಕ್ರಮಬದ್ಧವಾಗಿ ನಿರೂಪಿಸಿ ಯಾವ ದೋಷವೂ ಯಾವ ಹಂತದಲ್ಲೂ ಇಣುಕದಂತೆ ಗುರುವಿನಿಂದ ಶಿಷ್ಯನಿಗೆ ಪರಂಪರೆಯಿಂದ ಅಕ್ಷುಣ್ಣವಾಗಿ ಹರಿದುಬರುವಂತೆ ಸಹಾಯ ಮಾಡಿವೆ.

ಸಾಂಗವಾಗಿ ವೇದಾಧ್ಯಯನ ಮಾಡಿ ವಿಚಾರಪೂರ್ವಕವಾಗಿ ವೇದಾರ್ಥಗಳನ್ನು ತಿಳಿದು ಅನುಷ್ಠಾನ ಮಾಡಿ ಸಕಲ ಶ್ರೇಯಸ್ಸು ಪ್ರೇಯಸ್ಸುಗಳಿಗೆ ಭಾಗಿಯಾಗಬೇಕೆಂಬುದು ಸರ್ವಸಮ್ಮತವಾದುದು. ಅನುಷ್ಠಾನವಿಲ್ಲದ ವೇದದ ಅಧ್ಯಯನ ಜ್ಞಾನಸಂಪಾದನೆಗೆ ಪ್ರಯೋಜನ ಕಾರಿಯಲ್ಲವೆಂಬುದು ಶಬರ ಮತ್ತು ಕುಮಾರಿಲರ ಅಭಿಪ್ರಾಯವಾಗಿದೆ. ಜೈಮಿನಿಗಳೂ ಯಾಸ್ಕರೂ ಯಥೋಚಿತವೆನ್ನುತ್ತಾರೆ. ದ್ವೈತ ವಿಶಿಷ್ಟಾದ್ವೈತದ ಅನುಯಾಯಿಗಳಲ್ಲಿ ಶಕ್ತರಿಗೆ ಅನುಷ್ಠಾನದಿಂದ ಬರುವ ಫಲವೇ ಅಶಕ್ತರಿಗೆ ಅಧ್ಯಯನ ಮಾತ್ರದಿಂದಲೇ ಬರುತ್ತದೆಂಬ ಅಭಿಪ್ರಾಯವಿದೆ. ಮನ್ತ್ರಾರ್ಥ ಜ್ಞಾನವು ಹೇಳುವವನಿಗೆ ತಿಳಿಯದಿದ್ದರೂ

ಕೇಳುವ ದೇವತೆಗಳಿಗೆ ತಿಳಿಯುವುದರಿಂದ ಅಶಕ್ತರಿಗೆ ಪಾರಾಯಣ ಮಾತ್ರದಿಂದಲೇ ಚರಿತಾರ್ಥವು, ವೇದಕ್ಕೆ ಅರ್ಥವೇ ಇಲ್ಲ, ಅದರ ಉಚ್ಚಾರಣೆಯಿಂದಲೇ ಫಲ ಎಂಬಿತ್ಯಾದಿ ಆಲಸಿಗಳ ಅಭಿಪ್ರಾಯಗಳನ್ನು ಜೈಮಿನಿಗಳು ವಿವರವಾಗಿ ತರ್ಕಬದ್ಧವಾಗಿ ಚರ್ಚಿಸಿ ನಿರಾಕರಿಸಿ ವೇದಾರ್ಥಗಳನ್ನು ತಿಳಿದೇ ಕರ್ಮಗಳಿಗಿರುವ ಇಷ್ಟ ಸಾಧನವೆಂಬ ಫಲವನ್ನು ಪಡೆಯಲು ಸಾಧ್ಯವೆಂದು ಸಿದ್ಧಾಂತ ಮಾಡಿದ್ದಾರೆ.

ವೇದಗಳ ಅರ್ಥಗಳನ್ನು ತಿಳಿಸುವ ಪ್ರಯತ್ನದಲ್ಲಿ ತೊಡಗಿರುವ ಪ್ರಥಮ ಗ್ರಂಥಗಳೇ ಬ್ರಾಹ್ಮಣಗಳು. ಸಾಮವೇದದಲ್ಲಿ ಎಂಟು ಬ್ರಾಹ್ಮಣಗಳಿವೆ. ಈ ಗ್ರಂಥಗಳು ತಮ್ಮ ಮುಖ್ಯೋದ್ದೇಶವಾದ ಯಜ್ಞಯಾಗಾದಿ ಕರ್ಮಗಳ ಮಹತ್ವವನ್ನೂ ಮನ್ತ್ರಗಳಿಗೂ ತನ್ತ್ರಗಳಿಗೂ ಇರುವ ವಿಶೇಷ ಸಂಬಂಧಗಳನ್ನೂ ನಿರೂಪಿಸುವಾಗ ಪ್ರಾಸಂಗಿಕವಾಗಿ ಅಲ್ಲಲ್ಲೇ ಕೆಲವು ವೇದಮನ್ತ್ರಗಳಿಗೆ ಅರ್ಥವನ್ನೋ, ಆ ಮನ್ತ್ರಗಳಲ್ಲಿರುವ ಕ್ಲಿಷ್ಟಪದಗಳ ರೂಪನಿಷ್ಪತ್ತಿಯನ್ನೋ ಅಷ್ಟಿಷ್ಟು ತಿಳಿಸುತ್ತಿವೆ. ಈ ಕೆಲವೇ ಪ್ರಾಸಂಗಿಕ ವಿವರಣೆಗಳು ಒಟ್ಟಾಗಿ ಬೃಹತ್ಪ್ರಮಾಣದಲ್ಲಿದ್ದು, ವೇದಾರ್ಥಗಳನ್ನು ತಿಳಿಯಲು ತೊಡಗಿರುವ ಮುಂದಿನ ಪೀಳಿಗೆಯ ಜಿಜ್ಞಾಸುಗಳಿಗೆ ಭದ್ರವಾದ ವಿಸ್ತಾರವಾದ ನೆಲಗಟ್ಟನ್ನು ಒದಗಿಸಿವೆ. ಬ್ರಾಹ್ಮಣಗಳ ಸಹಾಯವಿಲ್ಲದೆ ವೇದದ ಅನೇಕ ಪದಗಳ ವಾಕ್ಯಗಳ ಅರ್ಥವೇ ಆಗುವುದಿಲ್ಲವೆಂಬುದನ್ನು ಗಮನಿಸಿದರೆ ಬ್ರಾಹ್ಮಣಗಳ ಪ್ರಾಮುಖ್ಯ ಎದ್ದುಕಾಣುತ್ತದೆ. **ಬ್ರಹ್ಮಣಾಂ ವೇದಾನಾಮಿಮಾನಿ ವ್ಯಾಖ್ಯಾನಿನಾನಿ ಬ್ರಾಹ್ಮಣಾನಿ ॥** ಎಂಬುದು ಬ್ರಾಹ್ಮಣ ಗ್ರಂಥಗಳಿಗಿರುವ ಪ್ರಸಿದ್ಧ ಪರಿಭಾಷೆ. **ಮನ್ತ್ರೋ ಮನನಾತ್ । ಬ್ರಾಹ್ಮಣಮಭಿಧಾನಾತ್ ॥** *ಕಪರ್ದಿಸ್ವಾಮಿ //* **ಮನ್ತ್ರಸ್ಯ ಅವಿವಿಕ್ಷಿತಾರ್ಥತ್ವೇತು ವಿನಿಯೋಗ ಬೋಧನಾಯ ಬ್ರಾಹ್ಮಣವಾಕ್ಯಮುಪಯುಕ್ತಂ ॥** *ಸಾಯಣ //* ವೇದಮನ್ತ್ರಗಳ ಅರ್ಥವನ್ನು ತಿಳಿಸುವ ಹಾಗೂ ಮನ್ತ್ರಗಳ ವಿನಿಯೋಗವನ್ನು ವಿವರಿಸುವ ಆರ್ಷವಾಕ್ಯಗಳೇ ಬ್ರಾಹ್ಮಣಗ್ರನ್ಥಗಳು. ಇತಿಹಾಸ ಪುರಾಣ, ವಿದ್ಯಾ ಉಪನಿಷತ್, ಶ್ಲೋಕ, ಸೂತ್ರ, ಅನುವ್ಯಾಖ್ಯಾನ, ವ್ಯಾಖ್ಯಾನ ಎಂಬ ಎಂಟು ಬಗೆಯಲ್ಲಿ ಬ್ರಾಹ್ಮಣಗಳ ವ್ಯಾಪ್ತಿ ಇರುವುದೆಂದು ಶ್ರೀ ಶಂಕರರು ಬೃಹದಾರಣ್ಯಕ ಉಪನಿಷತ್ ವ್ಯಾಖ್ಯಾನದಲ್ಲಿ ಸ್ವೀಕರಿಸಿರುವುದನ್ನು ಶ್ರೀ ಸಾಯಣರು ಸಮರ್ಥಿಸಿ ವೇದಮನ್ತ್ರಾರ್ಥಗಳನ್ನು ಸ್ಪಷ್ಟಪಡಿಸಲು ವೇದಭಾಷ್ಯಗಳಲ್ಲಿ ಈ ಬ್ರಾಹ್ಮಣವಾಕ್ಯಗಳನ್ನು ಎತ್ತಿತೋರಿಸುತ್ತಾರೆ.

**ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬ್ರಂಹಯೇತ್ ।**
**ಬಿಭ್ಯೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಹರೇದಿತಿ ॥**

ಮಹಾಭಾರತ ೧.೧.೨೬೭ ಹಾಗೂ ಶಿವಪುರಾಣ ವಾಯವೀಯ ಸಂಹಿತೆ ೧.೪೦ ತಿಳಿಸುವಂತೆ ನಾಲ್ಕು ವೇದಗಳು, ಆರು ವೇದಾಂಗಗಳು, ಪುರಾಣ, ನ್ಯಾಯ ಮೀಮಾಂಸಾ, ಧರ್ಮಶಾಸ್ತ್ರ ಎಂಬ ಹದಿನಾಲ್ಕು ವಿದ್ಯಾಸ್ಥಾನಗಳನ್ನು ಸೇವಿಸಿ ಗೌರವಿಸಿ ಇವುಗಳ ಬೆಳಕಿನಿಂದ ವೇದದ ಅರ್ಥಗಳನ್ನು ವಿವರಿಸುವುದೇ ಸಾರ್ವದೇಶಿಕವೂ ಸಾರ್ವಕಾಲಿಕವೂ ಆದ ನಿಲುವಾಗಿರುತ್ತದೆ.

ವೇದದ ಅರ್ಥವಿವರಣೆಯನ್ನೇ ಮುಖ್ಯಗುರಿಯಾಗಿಟ್ಟುಕೊಂಡು ರಚಿಸಿರುವ ಪ್ರಥಮಗ್ರಂಥವೇ ಯಾಸ್ಕರ ನಿರುಕ್ತ. ಇದರಲ್ಲಿ ವೇದದ ಪದಗಳಿಗೆ ವೈದಿಕ ಅರ್ಥವನ್ನೂ ಮತ್ತು ಸಾಧಾರಣವಾಗಿ ಈಗ ಬಳಕೆಯಲ್ಲಿರುವ ಸಂಸ್ಕೃತಭಾಷೆಯಲ್ಲಿನ ಬೇರೆಬೇರೆ ಅರ್ಥವನ್ನೂ ಅಲ್ಲಲ್ಲಿ ಕೊಟ್ಟಿರುವುದೊಂದು ವಿಶೇಷ. ಈಗಿನ ಸಂಸ್ಕೃತದಲ್ಲಿ 'ನ' ನಿಷೇಧಾರ್ಥದಲ್ಲಿ ಬಳಕೆಯಲ್ಲಿದೆ. ವೇದದಲ್ಲಿ ನಿಷೇಧ ಮತ್ತು ಹೋಲಿಕೆ ಎಂಬೆರಡೂ ಅರ್ಥದಲ್ಲಿ ಬಳಸಿದೆ. **'ನ ವಿಂಧೇ ಅಸ್ಯ ಸುಷ್ಟುತಂ'** ಎಂಬಲ್ಲಿ, 'ನ' ನಿಷೇಧಾರ್ಥ ಸೂಚಕ **'ದ್ಯೌರ್ನ ಪ್ರತಿನಾಶವಃ'** ಎಂಬಲ್ಲಿ **'ದ್ಯೌರ್ನ'** - ಆಕಾಶದಂತೆ ಎಂದು ಹೋಲಿಕೆಯ ಅರ್ಥವಿದೆ. **'ಹಂಸಶ್ಶುಚಿಷತ್'** ಮನ್ತ್ರದ **'ಹಂಸಃ'** ಪದಕ್ಕೆ **'ರಥ'** ಎಂಬ ಅಧಿಯಜ್ಞಾರ್ಥವನ್ನೂ **'ಆದಿತ್ಯ'** ಎಂಬ ಅಧಿದೈವತಾರ್ಥವನ್ನೂ, **'ಆತ್ಮ'** ಎಂಬ ಆಧ್ಯಾತ್ಮಿಕಾರ್ಥವನ್ನು ತಿಳಿಸಲಾಗಿದೆ. **ವೃತ್ರೋ ಮೇಘ ಇತಿ ನೈರುಕ್ತಾಃ । ತ್ವಾಷ್ಟ್ರೋऽಸುರ ಇತ್ಯೈತಿಹಾಸಿಕಾಃ । ಅಪಾಂ ಚ ಜ್ಯೋತಿಷಶ್ಚ ॥** ವೇದದಲ್ಲಿ ಆಗಾಗ ಬರುತ್ತಿರುವ **ವೃತ್ರ** ಶಬ್ದಕ್ಕೆ ನಿರುಕ್ತಕಾರರು **ಮೇಘ**ವೆಂದೂ, ಪೌರಾಣಿಕರು ತ್ವಷ್ಟ್ರುವಿನ ಮಗನಾದ **ರಾಕ್ಷಸನೆಂದೂ** ಬ್ರಾಹ್ಮಣಗಳು **ಸರ್ಪ**ವೆಂದೂ ತಿಳಿಸಿವೆ. ಈ ಹಿನ್ನೆಲೆಯಲ್ಲಿ ಸಾಯಣರು, ಕೇವಲ ವ್ಯಾಕರಣದ ದೃಷ್ಟಿಯಿಂದಲೇ ಅರ್ಥಗಳನ್ನು ನಿರ್ಣಯ ಮಾಡದೆ ನಾಲ್ಕೂ ವೇದಗಳ, ಬ್ರಾಹ್ಮಣಗಳ, ಉಪನಿಷತ್ತುಗಳ, ಇತಿಹಾಸ ಪುರಾಣಗಳ, ಮೀಮಾಂಸಾ ನ್ಯಾಯ ಧರ್ಮಶಾಸ್ತ್ರಗಳ ಬೆಳಕಿನಲ್ಲಿ ಅಧಿಯಜ್ಞ ಅಧಿದೈವ, ಆಧ್ಯಾತ್ಮಿಕ ದೃಷ್ಟಿಗಳನ್ನಿಟ್ಟುಕೊಂಡು ಶಬ್ದಗಳ ನಿರ್ವಚನ ಮಾಡಿ ತಾವು ಪ್ರತಿಪಾದಿಸಿರುವ ವೇದಾರ್ಥಗಳಿಗೆ ಆರ್ಷೇಯಗ್ರಂಥಗಳ ಅನುಮೋದನಾ ವಾಕ್ಯಗಳ ಸಹಾಯ ಪಡೆದು ಸಮರ್ಥಿಸಿಕೊಂಡಿದ್ದಾರೆ.

ಪೂರ್ವಮೀಮಾಂಸಾ ಶಾಸ್ತ್ರದ ಉದ್ದೇಶವು ವೇದಾರ್ಥವನ್ನು ನಿರೂಪಿಸುವುದೇ ಆಗಿದ್ದರೂ, ಅದರಲ್ಲಿ ಸಮಗ್ರವಾದ ವೇದಾರ್ಥವೇನೂ ಕಂಡುಬರುವುದಿಲ್ಲ. **ಶ್ರುತಿಲಿಂಗ**

ವಾಕ್ಯಪ್ರಕರಣ ಸ್ಥಾನ ಸಮಾಖ್ಯಾನಾಂ ಸಮವಾಯೇ ಪಾರ ದೌರ್ಬಲ್ಯಮರ್ಥ ವಿಪ್ರಕರ್ಷಾದಿತಿ ॥ ಒಂದೇ ಮನ್ತ್ರಕ್ಕೆ ಸಂಬಂಧಿಸಿದ್ದು ಒಂದಕ್ಕೊಂದು ವಿರುದ್ಧವಾಗಿರುವ, ಶ್ರುತಿಯೇ ನೇರವಾಗಿ ಹೇಳಿರುವ - ಲಿಂಗ ಚಿಹ್ನೆ ವಾಕ್ಯ ಪ್ರಕರಣ ಸಂದರ್ಭ ಸ್ಥಾನ ಕ್ರಮ ಮತ್ತು ಸಮಾಖ್ಯಾ ಹಾಗೂ ನಿರ್ವಚನ ಮುಂತಾದ ಸಂದರ್ಭಗಳಲ್ಲಿ ಮೊದಲಿನದಕ್ಕೆ ನಂತರದ್ದಕ್ಕಿಂತ ಪ್ರಾಧಾನ್ಯವಿದ್ದು ಪೂರ್ವವಾಕ್ಯಕ್ಕೆ ಪ್ರಾಮಾಣ್ಯ ಹೆಚ್ಚು ಇತ್ಯಾದಿಯಾಗಿ ಚರ್ಚಿಸಿ ವೇದಕ್ಕೆ ಯಾವರೀತಿ ಅರ್ಥಮಾಡಬೇಕೆಂಬ ನಿಯಮಗಳನ್ನು ವಿಧಿಸಿ, ಮನ್ತ್ರಗಳನ್ನು ಯಾವ ಸಂದರ್ಭದಲ್ಲಿ ಉಪಯೋಗಿಸಿದೆ, ಪರಸ್ಪರ ವಿರುದ್ಧ ವಾಕ್ಯಗಳಿರುವಾಗ ಯಾವುದಕ್ಕೆ ಎಷ್ಟು ಪ್ರಾಮುಖ್ಯತೆ ನೀಡಬೇಕು, ಇತ್ಯಾದಿ ವಿವರಣೆಗಳೊಂದಿಗೆ ವೇದದ ಅರ್ಥ ನಿರೂಪಣೆಯ ರೀತಿನೀತಿಗಳನ್ನು ತಿಳಿಸುತ್ತಿರುವ ಮೀಮಾಂಸಾ ಶಾಸ್ತ್ರದ ಈ ನಿರ್ದೇಶನಗಳನ್ನು ಸಾಯಣರು ಬಹುಯಶಸ್ವಿಯಾಗಿ ಅನುಸರಿಸಿದ್ದಾರೆ. ಈ ಚೌಕಟ್ಟಿನಲ್ಲಿ ಸಮಗ್ರವಾದ ಭಾಷ್ಯವನ್ನು ಸಾಮವೇದಕ್ಕೆ ನೀಡಿರುವವರು ಸಾಯಣಾಚಾರ್ಯರೊಬ್ಬರೇ. ಇವರಿಗಿಂತ ಮುಂಚೆ ಏಳನೆಯ ಶತಮಾನಕ್ಕೆ ಸೇರಿದ **'ಮಾಧವ'** ರೆಂಬುವರು ಸಾಮವೇದಕ್ಕೆ **'ವಿವರಣವೆಂಬ'** ಭಾಷ್ಯವು ೫೮೫ನೆಯ ಋಕ್‌ವರೆಗೆ ಮುದ್ರಿತವಾಗಿದ್ದರೂ ಅದರ ಪೂರ್ಣಪಾಠ ದೊರೆತಿಲ್ಲ. ಉಪಲಬ್ಧವಾಗಿರುವ ಭಾಗಗಳಲ್ಲಿ ಕಂಡುಬಂದಿರುವ ಉತ್ತಮಾಂಶಗಳನ್ನು ಟಿಪ್ಪಣಿ ರೂಪದಲ್ಲಿ ಸಾಯಣಭಾಷ್ಯದೊಂದಿಗೆ ಅಳವಡಿಸಿ ಸಾಮವೇದದ ಋಕ್ ಮತ್ತು ಗಾನ ಹಾಗೂ ಸಾಯಣಭಾಷ್ಯವನ್ನು ಸನ್ಮಾನ್ಯರಾದ ಸತ್ಯವ್ರತ ಸಾಮಶ್ರಮಿ ಭಟ್ಟಾಚಾರ್ಯರು ಸಂಪಾದಿಸಿ ಐದು ಭಾಗಗಳಲ್ಲಿ ಏಷಿಯಾಟಿಕ್ ಸೊಸೈಟಿಯ ಮುಖಾಂತರ ೧೮೭೧-೭೮ರಲ್ಲಿ ಮುದ್ರಿಸಿ ಪ್ರಕಟಿಸಿದ್ದಾರೆ. ಪ್ರಪಂಚದಾದ್ಯಂತ ಪ್ರಸಿದ್ಧವಾಗಿ ಪ್ರಚಲಿತವಾಗಿರುವ ಇದನ್ನೇ ೧೯೮೩ರಲ್ಲಿ ಮುನ್ಶೀರಾಂ ಮನೋಹರಲಾಲ್ ರವರು ಪುನರ್ಮುದ್ರಣಮಾಡಿ ವಿತರಿಸುತ್ತಿದ್ದಾರೆ. ಈ ಪಾಠವೇ ಪ್ರಕೃತ ಪ್ರಕಟವಾಗುತ್ತಿರುವ ದ್ರಾಹ್ಯಾಯಣ ಪ್ರತಿಷ್ಠಾನದ ಗ್ರಂಥಕ್ಕೆ ಆಶ್ರಯವಾಗಿದೆ.

**ಸಾಯಣಾಚಾರ್ಯರು :** ಮಹಾನುಭಾವರೂ ಮಹಾಮನರೂ ವಿಶ್ವವಂದ್ಯರೂ ಆದ ಸಾಯಣರು ಕ್ರಿ.ಶ. ೧೨೮೮-೧೩೮೮ರ ಆಸುಪಾಸಿನಲ್ಲಿದ್ದವರು. ಭಾರದ್ವಾಜಗೋತ್ರದ ತೈತ್ತರೀಯ ಕೃಷ್ಣ ಯಜುಶ್ಶಾಖೆಯ ಬೋಧಾಯನಸೂತ್ರದ ಅದ್ವೈತ ತತ್ವಾನುಯಾಯಿಗಳಾದ ಶ್ರೋತ್ರಿಯ ಸ್ಮಾರ್ತ ಬ್ರಾಹ್ಮಣ ವಂಶದ ಹವ್ಯಕ ಪಂಗಡದವರು. ಇವರ ಅಣ್ಣಂದಿರು ಮಾಧವಾಚಾರ್ಯರು - ವಿದ್ಯಾರಣ್ಯರು. ತಮ್ಮಂದಿರು ಭೋಗನಾಥರು. ಇವರ ತಂದೆ ಮಾಯಣಭಟ್ಟರು, ಪಿತೃಪಿತಾಮಹ

ಪರಂಪರೆಯಿಂದ ಹರಿಹರ, ಬುಕ್ಕ ಕಂಪಣ ಇಮ್ಮಡಿ ಸಂಗಮರಿಗೆ ಗುರುಗಳೂ ಮಂತ್ರಿಗಳೂ ಆಗಿದ್ದರು. ಇವರ ಕೌಟುಂಬಿಕ ಪರಿವೇಷವು ಸಾಂಸ್ಕೃತಿಕವಾಗಿ ಉಜ್ಜ್ವಲವೆನಿಸಿತ್ತು. ಧನಾಢ್ಯತೆ ಇವರ ಮನೆತನದ ಲಕ್ಷಣವಲ್ಲವಾದರೂ ಮಹಾ ಸಾಮ್ರಾಜ್ಯದ ಅಧಿಕಾರಾನುಸಾರವಾದ ಗೌರವ ಆದರಗಳೂ ಸುಭಿಕ್ಷ ಸಮೃದ್ಧಿಗಳೂ ಲಾಂಛನಮಾತ್ರವಾಗಿ ಸ್ವೀಕೃತವಾಗಿದ್ದು ನಿಷ್ಕಾಮ ಚಿತ್ತದ ಜ್ಞಾನಿಯ ಸರ್ವಸ್ಥಿತಿ ಸಮತೆ ಯನ್ನೂ ತ್ಯಾಗಭೋಗ ವಿರಾಗಯೋಗವನ್ನೂ ಧ್ವನಿಸುವಂತಹದುದಾಗಿತ್ತು.

ಇವರ ಆರಂಭಿಕ ಶಿಕ್ಷಣ ತಂದೆ ಮಾಯಣ್ಣ ಭಟ್ಟರಿಂದಲೂ ಅನಂತರ ವಿಶೇಷವೂ ವ್ಯಾಪಕವೂ ಆದ ಶಾಸ್ತ್ರಾಧ್ಯಯನ ಶೃಂಗೇರಿಯ ಆಸುಪಾಸಿನವರೇ ಆಗಿದ್ದ ಶ್ರೀಕಂಠನಾಥರಿಂದಲೂ ನೆರವೇರಿತು. ೧೩೫೭-೧೩೭೭ ಕಾಲಖಂಡದಲ್ಲಿ ಶೃಂಗೇರಿ ಯ ದಕ್ಷಿಣಾಮ್ನಾಯ ಪೀಠಾಧಿಪತಿಗಳಾಗಿದ್ದ ಪಾಂಡಿತ್ಯ ಪ್ರವಚನಪಟುತ್ವ ಮತ್ತು ತಪೋ ಬಲಗಳು ವಿಸ್ಮಯವಾಗಿದ್ದ ಭಾರತೀ ಕೃಷ್ಣತೀರ್ಥರು ತತ್ಪೂರ್ವದಲ್ಲೇ ಮಹಾಪ್ರತಿಭಾ ಶಾಲಿಗಳಾದ ಮಾಧವ ಮತ್ತು ಸಾಯಣಸೋದರರಿಗೆ ಪ್ರೀತಿ ವಾತ್ಸಲ್ಯದಿಂದ ಹಲವು ಶಾಸ್ತ್ರ ಪಾಠಗಳನ್ನು ಮಾಡಿದರು. ಹೀಗೆ ಉಪಕೃತರಾದ ಮಾಧವ ಸಾಯಣರು ಅಪಾರ ಭಕ್ತಿ ಗೌರವಗಳಿಂದ ಭಾರತೀ ಕೃಷ್ಣತೀರ್ಥರನ್ನು ತಮ್ಮ ಗ್ರಂಥಗಳ ಪ್ರಸ್ತಾಪನಾ ಶ್ಲೋಕಗಳಲ್ಲಿ ನೆನೆದು ಕೃತಜ್ಞತೆ ಯನ್ನರ್ಪಿಸಿರುತ್ತಾರೆ.

ಇವರೆಲ್ಲರಿಗಿಂತಲೂ ಮಾಧವ ಸಾಯಣರಿಗೆ ಮಿಗಿಲಾದ ಮಾರ್ಗದರ್ಶನ ಮತ್ತು ತತ್ತ್ವಸಂಪನ್ನತೆಗಳನ್ನು ತುಂಬಿಕೊಟ್ಟವರು. ಮಹಾಯೋಗಿಗಳೂ ವೇದಾಂತವಿದ್ಯಾಧುರೀ ಣರೂ ವಿಶ್ರುತ ಶಾಸ್ತ್ರವೇತ್ತರೂ ಅಂತರ್ಮುಖಿಗಳೂ ಬ್ರಹ್ಮಾನುಭವಿಗಳೂ ಎನಿಸಿದ್ದ ಶೃಂಗೇರಿ ಪೀಠಾಧಿಪತಿಗಳಾದ **'ವಿದ್ಯಾತೀರ್ಥಸ್ವಾಮಿಗಳು'**. ಇವರು ಮಾಧವ ಸಾಯಣ ರಿಗೆ ಶ್ರೀವಿದ್ಯಾದಿ ಮಹಾಮಂತ್ರೋಪದೇಶ ಮಾಡಿ ಯೋ[illegible]ಲ್ಲಿ ಮಾರ್ಗದರ್ಶನ ಮಾಡಿ ಕೇವಲ ಜ್ಞಾನನಿಷ್ಠೆಯಿಂದ ಬ್ರಹ್ಮಾನುಭವಕ್ಕೆ ಅನುವುಮಾಡಿಕೊಟ್ಟಿದ್ದಲ್ಲದೆ ಅನೇಕ ಶ್ರೌತ ಯಾಗಗಳನ್ನು ಮಾಡಲೂ ಪ್ರೇರಕರಾಗಿ ಭವ್ಯಜೀವನಾದರ್ಶವನ್ನು ಕರುಣಿಸಿ ಸ್ವಯಂ ತಾವೇ ಸಾಕ್ಷಾತ್ಕಾರದ ಜೀವನ್ನಿದರ್ಶನ ವಾಗಿದ್ದುದರಿಂದ ವಿದ್ಯಾತೀರ್ಥ ಸ್ವಾಮಿಗಳೇ ಮಾಧವ ಸಾಯಣರಿಗೆ **'ಗುರುಸ್ಸಾಕ್ಷಾತ್ ಪರಬ್ರಹ್ಮ'** ಆಗಿದ್ದರು ಎಂಬುದು ಅನೇಕ ಶಾಸನಗಳಿಂದಲೂ ವಿವಿಧ ಗ್ರಂಥಗಳಿಂದಲೂ ವಿಶೇಷವಾಗಿ **'ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ । ನಿರ್ಮಮೇ ತಮಹಂ ವಂದೇ**

**ವಿದ್ಯಾತೀರ್ಥ ಮಹೇಶ್ವರಮ್ ॥** ಎಂದು ತಮ್ಮ ಪ್ರತಿಯೊಂದು ವೇದ ಭಾಷ್ಯಗ್ರಂಥಗಳ ಉಪಕ್ರಮದಲ್ಲಿ ಭಕ್ತಿಗೌರವಗಳನ್ನರ್ಪಿಸಿರುವುದರಿಂದಲೂ ತಿಳಿಯುತ್ತದೆ. ಈ ಗುರು ಭಕ್ತಿಯು ಸರ್ವಕಾಲಕ್ಕೆ ಶ್ರೇಷ್ಠ ನಿದರ್ಶನವಾಗಿದ್ದು ಸಕಲಶಿಷ್ಯರಿಗೂ ಆದರ್ಶವೆನಿಸಿದೆ.

ಮಾಧವ ಸಾಯಣರು ಅನೇಕ ಗುರುಗಳ ಸನ್ನಿಧಿಯಲ್ಲಿ ಹಾಗೂ ಸ್ವಯಂ ಪರಿಶ್ರಮ ಮತ್ತು ಲೋಕಾನುಭವಗಳಿಂದ ಅರಿತು ನುರಿತ ಶಾಸ್ತ್ರ ಕಲಾ ವಿಜ್ಞಾನ ಶಿಲ್ಪ ವಿದ್ಯೆಗಳು ಅನೇಕ. ಪ್ರಾಯಶಃ ಈ ಸೋದರರ ಸರ್ವಂಕಷಪಾಂಡಿತ್ಯಕ್ಕೆ ಯಾವುದೇ ಕಾಲದ ಬಹುಮುಖ ಪಾಂಡಿತ್ಯದ ಅಳತೆಗೋಲುಗಳೂ ಸೋಲುತ್ತವೆ. ಮಾನವ ಮಾತ್ರರಿಗೆ ಊಹಾತೀತವೆನಿಸುವಂತಹ ಪಾಂಡಿತ್ಯ ಪ್ರತಿಭೆಗಳೂ ತತ್ಸಮುಚಿತವಾದ ಅನುಷ್ಠಾನ ಅಭ್ಯಾಸ ಅನ್ವಯಗಳೂ ಇವರ ಸೊತ್ತಾಗಿದ್ದವು. ಭಾರತೀಯ ವಿದ್ಯಾ ಪ್ರಪಂಚದಲ್ಲಿ ಅತ್ಯುಚ್ಚವರ್ಗದ **ಬಹುಶಾಸ್ತ್ರ - ಕಲಾಕೋವಿದ**ರೆನಿಸಿದ ಕೆಲವೇ ಮಂದಿ ಮೇಧಾವಿಗಳಿಗೆ ಮಾಧವ ಸಾಯಣರು ಹೊಯ್‌ಕಯ್ಯಾಗಿದ್ದಾರೆಂದರೆ ಅತಿಶಯೋಕ್ತಿ ಯಾಗಲಾರದು. ಮಾಧವರೂ ಸಾಯಣರೂ ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿರುವ ಪ್ರಮಾಣದ ಹಾಗೂ ವಿಷಯವೈವಿಧ್ಯದ ಗ್ರಂಥಗಳನ್ನು ಮತ್ತಾವುದೇ ಸಂಸ್ಕೃತ ಲೇಖಕರ ಕೃತಿಗಳಲ್ಲಿ ಕಾಣಲಾಗುವುದಿಲ್ಲ. ಅವರ ಗ್ರಂಥಗಳ ಪ್ರಾಮಾಣ್ಯವೂ ಅವರ ಪ್ರಶ್ನಾತೀತ ಪಾಂಡಿತ್ಯಕ್ಕೆ ಸಮರ್ಥ ನಿದರ್ಶನವಾಗಿದೆ.

ಸಮಸ್ತ ವೇದವಾಙ್ಮಯದ, ಆರು ವೇದಾಂಗಗಳ ವೇದಾಂತಗಳೆಂಬ ಷಡ್ದರ್ಶನ ಗಳ, ವೇದಾಂತದ ಸಕಲ ಪ್ರಸ್ಥಾನ ಭೇದಗಳ, ನಾಸ್ತಿಕದರ್ಶನಗಳ ಮತ ಪ್ರಕ್ರಿಯೆಗಳ ಸಮಗ್ರ ಧರ್ಮಶಾಸ್ತ್ರಗಳ ಆಗಮಗಳ, ಗೃಹ್ಯಶ್ರೌತ ಸ್ಮಾರ್ತ ಕರ್ಮಕಲಾಪಗಳ ಸಮಸ್ತ ಇತಿಹಾಸ ಪುರಾಣಗಳ ಚತುಃಷಷ್ಟಿ ಕಲೆಗಳ; ತಂತ್ರ ಯೋಗಾದಿ ರಹಸ್ಯ ವಿದ್ಯೆಗಳ ಸಾಹಿತ್ಯಾದಿ ಶಾಸ್ತ್ರಗಳ, ದಂಡ ನೀತಿ ಅರ್ಥಶಾಸ್ತ್ರಗಳ ಆಯುರ್ವೇದ ಸಂಗೀತ ನಾಟ್ಯ ಶಾಸ್ತ್ರಗಳ ಗಣಿತ ಖಗೋಲಾದಿಶಾಸ್ತ್ರಗಳ, ಕೃಷಿ, ಪಶುಪಾಲನೆ ವಾಸ್ತು ಲೋಹತಂತ್ರಾದಿ ನಾನಾ ಜೀವಿಕಾ ವಿದ್ಯೆಗಳ, ದೇಶಾಚಾರ ಲೋಕಾಚಾರ ಶಿಷ್ಟಾಚಾರಾದಿಗಳ ಇನ್ನೂ ಅನೇಕ ವಿಷಯಗಳ ವಿಸ್ಮಯಾವಹವಾದ ವ್ಯಾಪಕವಾದ ಅನ್ವಯಿಕವಾದ ತಲಸ್ಪರ್ಶೀ ಜ್ಞಾನವನ್ನು ಬಾಳಿನ ಆರಂಭದಲ್ಲೇ ಗಳಿಸಿದ್ದರು. ಈ ಸೋದರರು ಅರಿಯದ ವಿದ್ಯೆ ಯಾಗಲೀ ತಿಳಿಯದ ಶಾಸ್ತ್ರವಾಗಲೀ ಇಲ್ಲವೆಂಬಂತಹ ಪಾಂಡಿತ್ಯವನ್ನೂ ಪಾಂಡಿತ್ಯಕ್ಕೆ ಸಾಫಲ್ಯವನ್ನು ನೀಡುವ ಅನುಭವ ಪರಿಪಾಕವನ್ನೂ ಹೊಂದಿದ್ದರು.

ಅತ್ಯಂತ ವ್ಯಾಪಕವೂ ಸರ್ವಸಮಾಜಪರಿಣಾಮಕಾರಿಯೂ ಆದ ವಿಶ್ವತೋ ಮುಖಿಯಾದ ಸಂಸ್ಕೃತಿಯನ್ನು ಸಮುದ್ಧರಿಸಲು ಸಕಲರಂಗಗಳನ್ನೂ ಸ್ಪಂದಿಸಿ ಪ್ರಬೋಧಿಸಿದುದು ಮಾಧವರ ಪ್ರೇರಕ ಮಾರ್ಗದರ್ಶನ ಶಕ್ತಿಯಾಗಿದ್ದರೆ ಸಾಯಣರದು ಕಾರಕ ವ್ಯವಸ್ಥಾಪಕ ಕ್ಲೃಪ್ತಿಯಾದ ಹಲವು ಪರಿಯ ದುಡುಮೆಯಾಗಿದ್ದಿತು. ಈ ಸಾಂಸ್ಕೃತಿಕ ಮತ್ತು **'ಸಾರಸ್ವತ ಪ್ರಪಂಚಕ್ಕೆ'** ಮಾಧವ ಸಾಯಣರು **'ಸೂರ್ಯಚಂದ್ರ'**ರಾಗಿದ್ದರು. ವೇದವಾಙ್ಮಯದ ಜನಪರತೆ ಜಾತ್ಯತೀತತೆ ವಿಶ್ವೋದಾರತೆ ಪರಮವೈಜ್ಞಾನಿಕ ವಸ್ತುನಿಷ್ಠತೆ ಸತ್ಯಶೋಧನೆ ಜೀವನಪ್ರೀತಿ ಅಕೃತಕ ಸರಳತೆ ಅನುಭಾವಿಕ ಗಂಭೀರತೆ ವ್ಯಾಪಕ ದೇಶೀಯ ಸಂಸ್ಕೃತಿ ಸುಭಗತೆ ಸಮ್ಯಗ್ಜೀವನ ದರ್ಶನ ಮತ್ತು ಆಧ್ಯಾತ್ಮಿಕಭೂಮತೆಗಳನ್ನು ಜನತೆಗೆ ಸಮರ್ಥವಾಗಿ ಮನಗಾಣಿಸಲು ಆರುನೂರು ವರ್ಷಗಳಿಗೂ ಮುನ್ನ ನಾಡಿನ ಮೂಲೆಮೂಲೆಗಳ ನಾನಾ ತೆರನಾದ ವಿದ್ವಾಂಸರನ್ನೆಲ್ಲ ಕಲೆಹಾಕಿ ಅವರುಗಳ ಸಮಷ್ಟಿ ಸಹಕಾರಾಯಾಮವನ್ನು ಪಡೆದು ವ್ಯಕ್ತಿವೈಭವೀಕರಣದ ಪ್ರಥೆ ಬಾರದಂತೆ ಅವರೊಂದಿಗೆ ಚರ್ಚಿಸಿ ಆಲೋಚಿಸಿ ಮತ್ತೆಮತ್ತೆ ಸಂವಾದ ಸಂಗ್ರಥನ ಪರಿಷ್ಕರಣಗಳಿಂದ ಅಮೂಲ್ಯವಾದ ಕೃತಿಶ್ರೇಣಿಯನ್ನೇ ಸಾಯಣರು ನಿರ್ಮಿಸಿರುವ ಪರಿಯನ್ನು ನೆನೆದಾಗ ರೋಮಾಂಚನವಾಗದಿರದು. ಮಹಾನುಭಾವರಾದ ಸಾಯಣ ಮತ್ತು ಮಾಧವರ ಬ್ರಾಹ್ಮಣ್ಯವು - **ದೀನವೃತ್ತಿಯಾಗಿರದೆ ಧೀರವೃತ್ತಿಯಾಗಿ ವೇದಶಾಸ್ತ್ರಾಭ್ಯುದಯವಾಯಿತು, ವೈರಾಗ್ಯ ವು ಕ್ಲೀಬ ಸಹಿಷ್ಣುತೆ ಯಲ್ಲಿ ತಾಟಸ್ಥ್ಯದಲ್ಲಿ ಪರ್ಯವಸಾನವಾಗದೆ ಪೌರುಷಪ್ರಕಾಶ ದಲ್ಲಿ ಪ್ರತಿಫಲಿಸಿತು, ವೇದಾಂತವು ಶುಷ್ಕಾಲಾಪವೆನಿಸದೆ ದೇಶೋನ್ನತಿ ತಾರಕ ವಾಯಿತು** - ಎಂಬುದು ಅವರುಗಳು ನಿರ್ಮಿಸಿರುವ ಗ್ರಂಥರಾಶಿಯಿಂದಲೂ ಆ ಕಾಲದ ಶಾಸನಗಳಿಂದಲೂ ಪ್ರವಾಸಿಗಳ ದಾಖಲೆಗಳಿಂದಲೂ ಅನ್ಯ ಕಡತಗಳಿಂದಲೂ ವೇದ್ಯವಾಗುತ್ತದೆ.

ಸಾಯಣರು ಸಕಾಲದಲ್ಲಿ ಗೃಹಸ್ಥರಾಗಿ ತ್ರಿಕಾಂಡ ಮಂಡನರೂ ವಸಂತ ಸೋಮಯಾಜಿಗಳೂ ಆಗಿದ್ದರು. ಕಂಪಣ ಮಾಯಣ ಶಿಂಗಣ ಎಂಬ ಮಕ್ಕಳನ್ನು ಪಡೆದು, ಅವರನ್ನು ಸುಸಂಸ್ಕೃತರನ್ನಾಗಿ ಬೆಳೆಸಿದರು. ಅನುದಿನವೂ ದೇವರನ್ನೂ ಹಿರಿಯರನ್ನೂ ಗೋಮಾತೆಯನ್ನೂ ಆರಾಧಿಸುತ್ತಿದ್ದರು. **'ಕಂಪಣ'** ಸಂಗೀತಶಾಸ್ತ್ರಕ್ಕೆ ಮನಸೋತ ನೀನು ನಿನ್ನ ಗಾನ ಪ್ರೌಢಿಮೆಯನ್ನು ಪ್ರಕಟಿಸು. **'ಮಾಯಣ'** ನೀನೀಗ ನಿನ್ನ ಗದ್ಯಪದ್ಯ ಕವಿತಾ

ಚಾತುರ್ಯವನ್ನು ಹೊಮ್ಮಿಸು **'ಶಿಂಗಣ'** ಪದ ಕ್ರಮ ಜಟಾದಿ ವೇದಗಾನದ ಮೂಲಕ ನಿನ್ನ ತಿಳಿವನ್ನು ತೋರಿಸು ಎಂದು ಪ್ರೋತ್ಸಾಹಿಸುತ್ತಾ ಆನಂದಿಸುತ್ತಿರುತ್ತಿದ್ದರು.

ಒಂದೆಡೆ ವ್ಯಾಕರಣ ಮೀಮಾಂಸಾದಿ ಶಾಸ್ತ್ರಾರ್ಥವ್ಯಾಖ್ಯಾತೃಗಳ ಪರಿ. ಮತ್ತೊಂದೆಡೆ ಸರಸ ಕವಿತಾರಚನೆಯ ವಿಮರ್ಶನ - ಆಸ್ವಾದನ ಇನ್ನೊಂದೆಡೆ ವೀಣಾಭ್ಯಾಸ ಮಗ್ನರಾದ ಮಕ್ಕಳ ಮಧುರಾಲಾಪ. ಅನುದಿನವೂ ಶ್ರೇಯಸ್ಸಿಗಾಗಿಯೂ ಯಶಸ್ಸಿಗಾಗಿಯೂ ವಿದ್ವಾಂಸರಿಗೂ ಧನಕನಕ ರೂಪದಾನ ವೈರಿಗಳಿಗೆ **'ರಣರೂಪ'** ದಾನ ನಡೆಯುತ್ತಿದ್ದ ಸಾಯಣರ ವ್ಯಕ್ತಿತ್ವವನ್ನೂ ಮನೆಯ ಸಂಸ್ಕೃತಿಯನ್ನೂ ಹೀಗೆ ಕೊಂಡಾಡಲಾಗಿದೆ.

**ತ್ಯಾಗೇ ಭೋಗೇ ತಥಾಚಾರೇಷ್ವಾಹವೇಷು ಹವೇಷು ಚ ।**
**ಸಾಯಣಾರ್ಯಸಮೋ ಲೋಕೇ ಸಾಯಣಾರ್ಯೋ ನ ಸಂಶಯಃ ॥**

ತ್ಯಾಗದಲ್ಲಿಯೂ ಭೋಗದಲ್ಲಿಯೂ ಆಚಾರದಲ್ಲಿಯೂ ಯುದ್ಧದಲ್ಲಿಯೂ ಯಜ್ಞಯಾಗಗಳಲ್ಲಿಯೂ ಸಹ ಸಾಯಣಾಚಾರ್ಯರಿಗೆ ಸಮನಾದವರು ಇಡೀ ಜಗತ್ತಿನಲ್ಲಿ ಸಾಯಣಾಚಾರ್ಯರು ಒಬ್ಬರೇ ಎಂಬುವುದರಲ್ಲಿ ಸಂದೇಹವಿಲ್ಲ. ಸಾಯಣರು ಬರಿಯ ವಿದ್ವಾಂಸರಷ್ಟೇ ಅಲ್ಲದೆ ರಾಜನೀತಿ ಸಂಪನ್ನರಾದ ಅಮಾತ್ಯರೂ ರಣನೀತಿ ಕೋವಿದರಾದ ಕಲಿಗಳೂ ಕಲಾವೇತ್ತರಾದ ಸಂಸ್ಕೃತಿ ನೇತಾರರೂ, ಪ್ರಜ್ಞೆ ಪ್ರತಿಷ್ಠೆ ತಪಸ್ಸುಗಳ ಒಡೆಯರೂ ಸಮಗ್ರ ದರ್ಶನವುಳ್ಳ ತತ್ತ್ವಾನುಭವಿಗಳೂ ಅಗ್ರ ಪಙ್ಕ್ತಿಯ ರಾಷ್ಟ್ರ ನಿರ್ಮಾಪಕರೂ ಆಗಿದ್ದರು.

ವಿದ್ಯಾರಣ್ಯರು ರಾಜ್ಯದ ಪೂರ್ವದ ಗಡಿಯನ್ನು ಕಾಪಾಡಲು ಉದಯಗಿರಿಯಲ್ಲಿ ಹರಿಹರನ ಮೊದಲ ತಮ್ಮ ಕಂಪಣನನ್ನು ಪ್ರಭುವಾಗಿ ನಿಯಮಿಸಿ ಸಾಯಣಾಚಾರ್ಯರನ್ನು ಕಂಪಣನಿಗೆ ಮಹಾಮಂತ್ರಿಯಾಗಿ ಸೇನಾನಿಯಾಗಿ, ಗುರುವಾಗಿ ಸಹಕರಿಸಲು ಕಳುಹಿಸಿಕೊಟ್ಟರು. ಇವರು ಕೆಲವೇ ವರ್ಷಗಳಲ್ಲಿ ನೆಲ್ಲೂರು ಕಡಪ ಆದಿ ಪ್ರಾಂತಗಳನ್ನು ವಶಪಡಿಸಿಕೊಂಡು ಈ ಪೂರ್ವದ ಗಡಿಯಲ್ಲಿ ಸುಸ್ಥಿತಿಯನ್ನು ನೆಲೆಗೊಳಿಸಿದರು. ನಂತರ ಕಂಪಣನ ಉತ್ತರಾಧಿಕಾರಿಯೂ ಬಾಲಕನೂ ಆಗಿದ್ದ ಇಮ್ಮಡಿ ಸಂಗಮನಿಗೆ ವಿದ್ಯಾಗುರು ಹಾಗೂ ರಕ್ಷಕರಾಗಿದ್ದುದಲ್ಲದೆ ಪೂರ್ವಪ್ರಾಂತದ ರಾಜಪ್ರತಿ

ನಿಧಿಯೂ ಆಗಿದ್ದರು. ಈ ಸಂದರ್ಭದಲ್ಲಿ ತುಂಡೀರ ಮಂಡಲದ ಚಂಪರಾಯನು ಉದಯಗಿರಿಪ್ರಾಂತವನ್ನು ಸಂತ್ರಾಸಗೊಳಿಸುವ ಸನ್ನಾಹದಲ್ಲಿದ್ದಾಗ **'ತಾವೇ ಖಡ್ಗ ಧಾರಿಯಾಗಿ'** ರಣರಂಗಕ್ಕೆ ತೆರಳಿ ಚಂಪರಾಯನ ರಾಜಧಾನಿ ಗರುಡನಗರವನ್ನು ಮುತ್ತಿ ಆತನನ್ನು ಸೋಲಿಸಿ ಸಾಮಂತನನ್ನಾಗಿ ಮಾಡಿಕೊಂಡು ದಕ್ಷತೆಯಿಂದ ಕ್ರಿ.ಶ. ೧೩೩೬ ರಿಂದ ೧೩೫೬ ರವರೆಗೆ ದೇಶವನ್ನು ರಕ್ಷಿಸಿದರು.

ಮುಸಲ್ಮಾನರ ಧಾಳಿಯಿಂದ ತತ್ತರಿಸಿ, ಅವರ ದೌರ್ಜನ್ಯ ಅತ್ಯಾಚಾರಗಳಿಂದ ದೈಹಿಕವಾಗಿಯೂ ಮಾನಸಿಕವಾಗಿಯೂ ನೊಂದು ಬೆಂದು ಧೃತಿಗೆಟ್ಟ ಜನತೆಗೆ ಪುನಃ ಸ್ವಧರ್ಮ ಸ್ವೀಯ ಸಂಸ್ಕೃತಿಯಲ್ಲಿ ನೆಲೆಗೊಂಡು ಶಾಂತಿಪಡೆಯಲೂ ಬಲಾತ್ಕಾರದ ಮತಾಂತರಾದಿ ವಿಶ್ವಾಸಕ್ಷೋಭೆಯನ್ನು ದಾಟಿ ನೆಮ್ಮದಿಗೊಳ್ಳಲೂ ಸಹಕರಿಸುವ **'ಪ್ರಾಯಶ್ಚಿತ್ತ ಸುಧಾನಿಧಿ'** ಯಂತಹ ವಿಶ್ವಕೋಶವನ್ನು ಬರೆದು ಜನರ ಶ್ರದ್ಧಾವರ್ಧನ ವಿಶ್ವಾಸೋಜ್ಜೀವನಗಳಿಗೆ ನೆರವು ನೀಡಿ ಸಂತ್ರಸ್ತರ ಅಪರಾಧಪ್ರಜ್ಞೆ ಕೀಳರಿಮೆ ಹತಾಶೆ ಗಳನ್ನು ನೀಗಲು ಕಾರಣರಾದರು.

ಪ್ರಕೃತಿ ವಿಕೋಪದಿಂದಲೂ ದೈಹಿಕಮಾನಸಿಕ ನೋವು ದುಃಖಗಳಿಂದಲೂ ತಮ್ಮ ಸ್ವಾಸ್ಥ್ಯವನ್ನು ಕಳೆದುಕೊಂಡ ಜನ ಸಮೂಹವು ಆರೋಗ್ಯಭಾಗ್ಯವನ್ನು ಪಡೆಯಲನು ಕೂಲವಾಗುವಂತೆ **'ಆಯುರ್ವೇದಸುಧಾನಿಧಿ'** ಯಂತಹ ವಿಶ್ವ ವೈದ್ಯಕೀಯ ಕೋಶ ವನ್ನು ಮಾಧವರ ಪ್ರೇರಣೆಯಿಂದ ಸಾಯಣಾಚಾರ್ಯರು ರೂಪಿಸಿ ಇದರ ಆದರ್ಶದಲ್ಲಿ ರಾಷ್ಟ್ರದ ವೈದ್ಯವರ್ಗವು ದುಡಿಯಲೂ ಜಾನಪದೀಯ ಮನೆಮದ್ದುಗಳ ವ್ಯಾಪ್ತಿಯು ಉತ್ಸಾಹದಿಂದ ಕೊನರಲೂ ಪ್ರೋತ್ಸಾಹಿಸಿದರು.

ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳ ಅನಿವಾರ್ಯತೆಯನ್ನೂ ಅನ್ವಯವನ್ನೂ ಸಮಸ್ತ ಪ್ರಜೆಗಳಿಗೂ ಸಾರಿ ಹೇಳುವ ಮಾರ್ಗದರ್ಶಕ ದೀಪವೆನಿಸಿರುವ **'ಪುರುಷಾರ್ಥ ಸುಧಾನಿಧಿ'** ಎಂಬ ವಿಶ್ವಕೋಶವನ್ನು ಸಾಯಣಾಚಾರ್ಯರು ಸಿದ್ಧಪಡಿಸಿ ಸಮಾಜದ ಹಾಗೂ ಪ್ರತಿ ವ್ಯಕ್ತಿಯ ಮೌಲ್ಯಪ್ರಜ್ಞಾ ನಿರ್ಮಾಣಕ್ಕೆ ನೆರವಾದರು.

ಇತಿಹಾಸ ಪುರಾಣಗಳ ಸಾರಸರ್ವಸ್ವವನ್ನೊಳಗೊಂಡು ಭಾರತದ ಆತ್ಮವನ್ನು ಅಭಿವ್ಯಕ್ತಿಗೊಳಿಸಿ ಸಾಕಾರಗೊಳಿಸುವ ಬಾಳಿಗೆ ಬುತ್ತಿಯಾಗುವ ನಲ್ನುಡಿಗಳನ್ನೂ ಸೂಕ್ತಿ ಸುಧಾಬಿಂದುಗಳನ್ನೂ ಸಂಗ್ರಹಿಸಿ ಪ್ರಥಮಬಾರಿಗೆ ಧರ್ಮಾರ್ಥಕಾಮ ಮೋಕ್ಷಗಳೆಂಬ ನಾಲ್ಕು ಪರ್ವಗಳ ಚೌಕಟ್ಟಿನೊಳಗಳವಡಿಸಿ ಸಂಸ್ಕೃತ ಭಾಷೆಯಲ್ಲೇ ಮತ್ತೊಂದಿಲ್ಲದ ಅಪರೂಪವೂ ಅತಿಶಯವೂ ಆದ, ಪುರುಷಾರ್ಥ ಪ್ರತಿಪಾದನಾರೂಪವಾದ **'ಸುಭಾಷಿತ ಸುಧಾನಿಧಿ'** ಗ್ರಂಥವನ್ನು ಸಾಯಣರು ಸಾಕಾರಗೊಳಿಸಿದ್ದಾರೆ.

ಭರತ ಮಮ್ಮಟಾದ್ಯರು ಎತ್ತಿಹಿಡಿದ ಭಾರತೀಯ ಕಾವ್ಯಮೀಮಾಂಸೆಯ ಚಿರಂತನ ಚಿಂತನಾಮೃತದ ಪ್ರಾಮಾಣಿಕ ಸಂಗ್ರಹವಾದ ಸರ್ವವಿದ್ಯಾಸಮಾಹಾರ ಎಂಬ ಹೆಗ್ಗಳಿಕೆಯ ಅಲಂಕಾರ ಶಾಸ್ತ್ರದ **'ಅಲಂಕಾರ ಸುಧಾನಿಧಿ'** ಗ್ರಂಥವು ಅನುಜ ಭೋಗನಾಥನ ನೆರವಿನಿಂದ, ಸಕಲಶಾಸ್ತ್ರ ತವನಿಧಿಯಾದ ಸಾಯಣಾಚಾರ್ಯರ ಪ್ರಜ್ಞಾಪಟಲಕ್ಕೆ ಕಲಶವಿಟ್ಟಂತೆ ಹೊರಹೊಮ್ಮಿದೆ.

ಅಪೌರುಷೇಯವೂ ಪರಿಪೂರ್ಣವೂ ಧಾತುವಿಶಿಷ್ಟವೂ ಕ್ರಿಯಾಪದ ಪ್ರಧಾನವೂ ಯೌಗಿಕಾರ್ಥಪ್ರಚುರವೂ ಆಗಿರುವ ಸಂಸ್ಕೃತಭಾಷೆಯನ್ನು ರಕ್ಷಿಸುವ ಮುಖ್ಯ ವಿಧಾನವು ಧಾತುವ್ಯವಸ್ಥಾಪನದಿಂದ ಮಾತ್ರ ಸಾಧ್ಯವೆಂದರಿತ ಸಾಯಣರಲ್ಲಿ - ಯಜ್ಞನಾರಾಯಣ ಮತ್ತು ಕುಂಡಿನಾರ್ಯರ ನೆರವಿನಿಂದ ಎರಡು ಸಾವಿರಕ್ಕೂ ಹೆಚ್ಚು ಧಾತುಗಳು ತಮ್ಮ ಸಮಸ್ತ ರೂಪ ವಿಶೇಷಗಳೊಂದಿಗೆ ಪ್ರಮಾಣ ಪುರಸ್ಸರವಾದ ಲಕ್ಷಣೋದಾಹರಣ ಸಾಮಂಜಸ್ಯದಿಂದ ಬಹುಸಮರ್ಪಕವಾಗಿ ಸುಕರವಾಗಿ ಕ್ರೋಢೀಕೃತವಾಗಿ ಮೈದಳೆದಿರುವ **'ಮಾಧವೀಯ ಧಾತುವೃತ್ತಿ'** ಗ್ರಂಥವು ಸಕಲ ವೈಯಾಕರಣರಿಗೂ ಘನ ಪ್ರಮಾಣವೆನಿಸಿ ಸಾಯಣರ ಅಪ್ರತಿಮ ವ್ಯಾಕರಣ ವೈದುಷ್ಯಕ್ಕೆತ್ತಿದ ಮುತ್ತಿನಾರತಿಯಂತೆ ಬೆಳಗುತ್ತಿದೆ.

ಸಹಜೀವನ ಹಾಗೂ ಗೌರವ ಸತ್ಕಾರಗಳ ಸಂಕೇತವೆನಿಸಿ ಸಮಗ್ರ ಸಮಾಜದ ಅಭ್ಯುದಯವನ್ನೇ ಲಕ್ಷಿಸಿ ಪ್ರವರ್ತಿತವಾದ ಯಜ್ಞ ಸಂಸ್ಥೆಯ ಸಮರ್ಥನೆ ಹಾಗೂ ಅನುಷ್ಠಾನಗಳು ರಾಷ್ಟ್ರದ ಹಿತಕ್ಕೆ ಅತ್ಯುಪಯೋಗಿ ಎಂಬುದನ್ನು ಬಲ್ಲ ಮಾಧವರು, ಅಧಿದೈವ ಅಧ್ಯಾತ್ಮಸ್ತರಗಳೆರಡಕ್ಕೂ ಅನ್ವಯಿಸುವ ಅಭ್ಯುದಯ ನಿಃಶ್ರೇಯಸ್ಸುಗಳೆರಡಕ್ಕೂ ತಾರಕವಾಗಿರುವ ಪುರುಷಾರ್ಥ ಚತುಷ್ಟಯ ಪ್ರಾಪಕವೆನಿಸುವ ಹಂಚಿ ಕೊಂಡು

ಹರ್ಷಿಸುವ ಆದರಿಸಿ ಆನಂದಿಸುವ ವಿಶ್ವಸುಕ್ಷೇಮ ವ್ಯವಸ್ಥೆಯಾದ ಜಾನಪದ ಜೀವನ ನಿಧಿಯಾದ ಕಲಾಸಂವೇದನೆಯ ಸನ್ನಿಧಿಯಾದ ಸಂಸ್ಕೃತಿಯ ಜೀವನಾಡಿಯಾದ ಋಷಿಗಳು ಅನುಷ್ಠಾನಗೊಳಿಸಿರುವ ಗೀತಾಚಾರ್ಯನು ಬೋಧಿಸಿರುವ ವಿಶ್ವವ್ಯೂಹ ಕೇಂದ್ರವೆನಿಸಿದ ಯಜ್ಞಚಕ್ರವನ್ನು ಪುನರುಜ್ಜೀವಗೊಳಿಸಲು **'ಯಜ್ಞತಂತ್ರ ಸುಧಾನಿಧಿ'** ಎಂಬ ಗ್ರಂಥವನ್ನು ಸಾಯಣರಿಂದ ಬರೆಯಿಸಿದರು.

ಇದೇ ಉದ್ದೇಶದ ಅತಿವೈಭವಯುತ ಭವ್ಯವಿಸ್ತರಣವೇ ಸಮಗ್ರ ವೇದವಾಙ್ಮಯದ ಭಾಷ್ಯರಾಶಿ **'ವೇದಾರ್ಥ ಪ್ರಕಾಶ'**. ವಿಜಯನಗರ ಸಾಮ್ರಾಜ್ಯದ ಅತಿಶ್ರೇಷ್ಠ ಸಾಧನೆಗಳಲ್ಲೊಂದಾದ ಮಧ್ಯಕಾಲೀನ ಭಾರತದ ಅತ್ಯುನ್ನತ ಶಾಸ್ತ್ರ ಸಾಧನೆ ಗಳಲ್ಲಿಯೇ ಶಿಖರಪ್ರಾಯವಾದುದೆಂದು ತೀರ್ಮಾನವಾಗಿರುವ ನಾಲ್ಕೂ ವೇದಗಳ ಸಕಲ ಮಂತ್ರಗಳ ಪ್ರತಿಪದಕ್ಕೂ ಷಡಂಗಾದಿ ಸಮಸ್ತ ವಿದ್ಯಾಸ್ಥಾನಗಳ ಬೆಳಕಿನಲ್ಲಿ ಅಧಿಯಜ್ಞಪ್ರಾಧಾನ್ಯವಿದ್ದೂ ಅಧಿಭೂತ ಅಧಿದೈವ ಅಧ್ಯಾತ್ಮ ಸ್ತರಗಳ ಅರ್ಥಸ್ವಾರಸ್ಯವನ್ನು ವೇದಾರ್ಥಪ್ರಕಾಶದಲ್ಲಿ ದಿಗ್ದರ್ಶಿಸಲಾಗಿದೆ.

**'ನ ಭೂತೋ ನ ಭವಿಷ್ಯತಿ'** ಎಂಬ ಮನ್ನಣೆಗೆ ಪಾತ್ರವಾದ ಈ ಗ್ರಂಥದ ಮಹೋದ್ಯಮಕ್ಕೆ ಮಾಧವ ವಿದ್ಯಾರಣ್ಯರೂ ತಮ್ಮ ಲೇಖನಿಯನ್ನು ಮೀಸಲಿಟ್ಟಿದ್ದ ರೆಂಬುದಕ್ಕೆ **'ಕೃಪಾಲುರ್ಮಾಧವಾಚಾರ್ಯೋ ವೇದಾರ್ಥಂ ವಕ್ತುಮುದ್ಯತಃ'** ಎಂಬ ಒಕ್ಕಣೆಯು ಉಪೋದ್ಘಾತದಲ್ಲೇ ಇರುವುದು ಸಾಕ್ಷಿಯಾಗಿದೆ. ಈ ಬೃಹದ್ಗ್ರಂಥಗಳ ರಚನೆಯಲ್ಲಿ ಪಂಚಾಗ್ನಿ ಮಾಧವ, ನರಹರಿಭಟ್ಟ, ನಾರಾಯಣ ವಾಜಪೇಯಿ, ಪಂಡರಿ ದೀಕ್ಷಿತ ನಾಗಾಭರಣ ಪಂಡಿತ ಮುಂತಾದ ಅನೇಕ ಘನವಿದ್ವಾಂಸರ ಸಾಮೂಹಿಕ ಸ್ಫೂರ್ತಿ ಯೂ ಸಹೃದಯ ಸಹಕಾರವೂ ಇದ್ದಿತು. ಎಲ್ಲಾ ವೇದಗಳಿಗೂ ಅವುಗಳ ಸಮಸ್ತ ಬ್ರಾಹ್ಮಣಾದಿ ಭಾಗಗಳಿಗೂ ಸಮಗ್ರವಾದ ಸುವ್ಯವಸ್ಥಿತವಾದ ಭಾಷ್ಯವನ್ನು **'ಸಾಯಣ ರಲ್ಲದೆ ಅನ್ಯರಾರೂ'** ಇಂದಿನವರೆಗೂ ಬರೆದಿಲ್ಲವೆಂಬುದನ್ನು ಗಮನಿಸಿದಾಗ **'ವೇದಾರ್ಥ ಪ್ರಕಾಶ'** ಅಪಾರ ಮೌಲ್ಯದ್ದೆಂಬ ಅರಿವಾಗುತ್ತದೆ. ಈ ಅಮೂಲ್ಯ ಗ್ರಂಥಗಳ ವ್ಯಾಸಂಗವು ಸಮಸ್ತ ವಿದ್ಯಾಸ್ಥಾನಗಳ ತನ್ಮೂಲಕ ಸಮಸ್ತ ಲೌಕಿಕ ಧಾರ್ಮಿಕ ಸಾಮಾಜಿಕ ಶಾಸ್ತ್ರಕಲಾದಿ ಗಳ ಪ್ರತ್ಯಭಿಜ್ಞಾನಕ್ಕೂ ಪ್ರಜ್ಞಾಪೂರ್ವಕ ಶ್ರದ್ಧಾವಿಶ್ವಾಸಗಳಿಂದ ಅನುಷ್ಠಾನವಾಗುವ ಕರ್ಮಕೌಶಲ ಕಲಾಪಗಳಿಗೂ ಭಾರತೀಯರ ಅಸ್ಮಿತಾಭಾವಕ್ಕೂ ಜೀವಾತುವಾಗಿರುತ್ತದೆ.

– ಶತಾವಧಾನಿ ಡಾ|| ಆರ್. ಗಣೇಶ್ ರಚಿತ ವಿಭೂತಿ ಪುರುಷ ವಿದ್ಯಾರಣ್ಯ

**ವೇದಭಾಷ್ಯ :** ಸಾಯಣರು ನಾಲ್ಕೂ ವೇದಗಳ ಭಾಷ್ಯಭೂಮಿಕೆಗಳಲ್ಲಿ ವೈದಿಕ ಜ್ಞಾನಕ್ಕೆ ಸಂಬಂಧಿಸಿದ ಮಹತ್ವದ ಪ್ರಶ್ನೆಗಳನ್ನು ಮುಂದುಮಾಡಿ ಚತುರ್ದಶ ವಿದ್ಯಾ ಸ್ಥಾನಗಳ ನೆಲೆಯಲ್ಲಿ ವಿಸ್ತಾರವಾಗಿ ಚರ್ಚಿಸಿ ಸಮರ್ಪಕವಾದ ಉತ್ತರಗಳನ್ನು ನೀಡಿದ್ದಾರೆ. ಉದಾಹರಣೆಯಾಗಿ - ಪೂರ್ವಮೀಮಾಂಸಾ ಶಾಸ್ತ್ರದ ಸಹಾಯದಿಂದ ಸಾಮಗಾನದ ೬೨ ಗಹನವಾದ ವಿಷಯಗಳ ಬಗೆಗೆ ವಿಚಾರಮಾಡಿ ವಿಮರ್ಶಿಸಿ ಪ್ರಮಾಣ ಪುರಸ್ಸರವಾಗಿ ಯುಕ್ತಿಯುಕ್ತವಾಗಿ ಪ್ರತಿಪಾದಿಸಿ, **ಇದಮಿತ್ಥಂ** ಎಂದು ನಿರ್ಣಯಿಸಿರುವುದನ್ನು ಪ್ರಕೃತ ಗ್ರಂಥದಲ್ಲಿರುವ ಸಾಮವೇದ ಸಂಹಿತಾ ಭಾಷ್ಯಾವತರಣಿಕೆಯಲ್ಲಿ ಕಾಣಬಹುದು. ವೇದಗಳು ಬಹುಪವಿತ್ರ ಗ್ರಂಥರಾಶಿಯಾಗಿದ್ದು ಇದರಲ್ಲಿನ ಪ್ರತಿ ಮಾತ್ರಾ, ಸ್ವರ, ಅಕ್ಷರ, ಪದ, ವಾಕ್ಯಗಳೂ ಪ್ರಮಾಣಭೂತವಾದವು ಎಂಬ ಅಚಲಶ್ರದ್ಧೆಯಿಂದ ಅರ್ಥಮಾಡು ವಾಗ ಪ್ರತಿಪದವನ್ನೂ ಲೋಕಸಂಗ್ರಹನಿಷ್ಠವಾಗಿ, ವಸ್ತುನಿಷ್ಠವಾಗಿ, ಅರ್ಥಸಹಿತವಾಗಿ, ಸಮಗ್ರವಾಗಿ ವಿವರಿಸಿ ಪದಗಳ ರೂಪನಿಷ್ಪತ್ತಿಯನ್ನು ಕೊಟ್ಟು ಆಧಾರ ಗ್ರಂಥಗಳ ವಾಕ್ಯಗಳನ್ನೂ ವ್ಯಾಕರಣ ಮೀಮಾಂಸಾಶಾಸ್ತ್ರಗಳ ಸೂತ್ರಗಳನ್ನೂ ಪ್ರಮಾಣ ವಾಗಿ ಉದಾಹರಿಸಿದ್ದಾರೆ. ಬಹು ಕ್ಲಿಷ್ಟವಲ್ಲದ ಸಂಸ್ಕೃತ ಭಾಷಾಶೈಲಿಯಲ್ಲಿ ಸಮಸ್ತ ವೇದರಾಶಿಗೆ ಭಾಷ್ಯಗಳನ್ನು ರಚಿಸಿ ವೇದಾರ್ಥವೆಂಬ ದುರ್ಗಮವಾದ ಕೋಟೆಗೆ ಪ್ರವೇಶವನ್ನು ವೇದ ಪ್ರೇಮಿಗಳಿಗೆ ದೊರಕಿಸಿಕೊಟ್ಟು ಮಹೋಪಕಾರವೆನ್ನಸಗಿದ್ದಾರೆ.

ವೇದದ ಭಾಷಾಶೈಲಿ ಅತ್ಯಂತ ಕ್ಲಿಷ್ಟವಾಗೇನೂ ಇಲ್ಲ. ಬಹುಶಬ್ದಗಳನ್ನೊಳಗೊಂಡ ಅತ್ಯಂತಕಠಿಣವಾದ ಸಮಾಸಪದಗಳ ಬಳಕೆಯೂ ಹೆಚ್ಚಾಗಿಲ್ಲ. ವೇದದ ಬಗೆಗೆ ಸಾಮಾನ್ಯ ಜ್ಞಾನವಿರುವ ಶ್ರದ್ಧಾಳುವಿಗೆ ಉದ್ದಿಷ್ಟವಾದ ಅರ್ಥ ನೇರವಾಗಿಯೇ ಮನದಟ್ಟಾಗುತ್ತದೆ. ಸಹಜವಾಗಿ ಹೊರಹೊಮ್ಮುವ ಅರ್ಥಗಳನ್ನು ಕಡೆಗಣಿಸಿ, ವೇದಕ್ಕಿಂತ ಈಚಿನ ವ್ಯಾಕರಣಾದಿ ಶಾಸ್ತ್ರಗಳ ಸಹಾಯದಿಂದ ಕಷ್ಟಪಟ್ಟು ಸಿದ್ಧಮಾಡುವ ರೂಪನಿಷ್ಪತ್ತಿಗಳೂ ಅರ್ಥಗಳೂ ಗ್ರಾಹ್ಯವಲ್ಲವೆಂಬುದು ಬಲ್ಲವರ ಅಭಿಪ್ರಾಯ. **ಶ್ರುತಾರ್ಥಸ್ಯ ಪರಿತ್ಯಾಗಾತ್ ಅಶ್ರುತಾರ್ಥ ಪ್ರಕಲ್ಪನಾತ್ ಪ್ರಾಪ್ತಸ್ಯ ಬೋಧಾದಿತ್ಯೇವ ಪರಿಸಂಖ್ಯಾ ತ್ರಿದೋಷಃ ॥** ಪೂ. ಮೀ. ೧.೨.೪೨ ॥ ಶ್ರುತಿಯಲ್ಲಿರುವುದನ್ನು ಕೈಬಿಟ್ಟು ಪರಂಪರೆಯನ್ನೂ ಗಮನಿಸದೆ ಸ್ವಚ್ಛಂದತೆಯಿಂದ ಶ್ರುತಿ ಯಲ್ಲಿಲ್ಲದುದನ್ನು ಕಲ್ಪಿಸಿಕೊಂಡು ಬೇರೆ ಬೇರೆ ಅರ್ಥ ಹೇಳುತ್ತಾ ಹೊರಟರೆ ದೋಷಭಾಗಿ ಯಾಗುವುದಲ್ಲದೆ ದಾರಿತಪ್ಪಿ ಗುರಿಯನ್ನು ಎಂದೆಂದಿಗೂ ಮುಟ್ಟಲಾರದವರಾಗುತ್ತೇವೆ. **ಅರ್ಥಗತ್ಯರ್ಥಃ ಶಬ್ದ ಪ್ರಯೋಗಃ** - ಪಾ. ಪ. ಭಾ. ೧.೧.೪೪. ಶಬ್ದ ಪ್ರಯೋಗವಾಗಿರುವುದು ಅರ್ಥವನ್ನು ತಿಳಿಸುವುದಕ್ಕಾಗಿಯೇ ಎಂಬುದರಲ್ಲಿ ಭಿನ್ನಾಭಿಪ್ರಾಯಕ್ಕೇನೂ ಕಾರಣವಿಲ್ಲ.

**ಪ್ರಾತಿಪದಿಕ ನಿರ್ದೇಶಾಶ್ಚಾರ್ಥ ತನ್ತ್ರಾ ಭವನ್ತಿ । ನ ಕಾಂಚಿತ್ ಪ್ರಾಧಾನ್ಯೇನ ವಿಭಕ್ತಿಮಾಶ್ರಯನ್ತಿ ॥** ಪಾ.ಪ.ಭಾ. ೧.೧.೫೬. ॥ ಪ್ರಾತಿಪದಕದ ನಿರ್ದೇಶನಗಳು ಶಾಸ್ತ್ರಕ್ಕೆ ಅಧೀನವಾಗಿರುವುದರಿಂದ ವೇದಾದಿಶಾಸ್ತ್ರಗಳಲ್ಲಿ ಉಕ್ತವಾಗಿರುವ ಶಬ್ದಗಳಿಗೆ ಆ ಶಬ್ದಗಳು ಪ್ರಯೋಗವಾಗಿರುವ ವಿಭಕ್ತಿಗಳಲ್ಲೇ ಅರ್ಥಮಾಡಬೇಕೆಂಬ ನಿಯಮವಿಲ್ಲ, ಆಯಾ ಶಾಸ್ತ್ರ ಪ್ರಮಾಣವನ್ನನುಸರಿಸಿಯೇ ಅರ್ಥಮಾಡಬೇಕು. **ಚತುರ್ಥ್ಯರ್ಥೇ ಬಹುಲಂ ಛಂದಸಿ ॥ ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯಾ ॥** ಪಾ.ಪ.ಭಾ. ೨.೩.೬೨ ॥ ವೇದದಲ್ಲಿ ಚತುರ್ಥೀ ವಿಭಕ್ತಿಯ ಅರ್ಥದಲ್ಲಿ ಷಷ್ಠೀ ವಿಭಕ್ತಿಯು ವಿಕಲ್ಪವಾಗಿ ಬರುತ್ತದೆ. ಷಷ್ಠೀ ವಿಭಕ್ತಿಯ ಅರ್ಥದಲ್ಲಿ ಚತುರ್ಥೀ ವಿಭಕ್ತಿಯನ್ನು ಹೇಳಬೇಕು.

ವರ್ಣಭೇದದಿಂದಲೂ ಸ್ವರಭೇದದಿಂದಲೂ ಅರ್ಥವ್ಯತ್ಯಾಸವಾಗುತ್ತದೆಂಬುದನ್ನು ವೇದಾಧ್ಯಯನ ಅಧ್ಯಾಪನದಲ್ಲಿ ತೊಡಗಿರುವವರು ವಿಶೇಷವಾಗಿ ಗಮನಿಸಿ ಜಾಗರೂಕರಾಗಿರಬೇಕಾಗಿದೆ. ಉದಾ : **ಸಕಲಂ – ಸಂಪೂರ್ಣಂ, ಶಕಲಂ** – ತುಂಡು, **ಸ್ಥೂಲ ಪೃಷತೀ - ಸ್ಥೂಲಾನಿ ಪೃಷಂತಿ ಯಸ್ಯಾ ಸಾ ಬಹುವ್ರೀಹಿಯಾಗಿ** - ಆ ಪಶುವಿನ ದೇಹದಲ್ಲಿರುವ ಚುಕ್ಕೆಗಳು ಸ್ಥೂಲವಾಗಿವೆ ಎಂದಾಗುತ್ತದೆ. **ಸ್ಥೂಲ ಪೃಷತೀ – ಸ್ಥೂಲಾ ಚ ಸಾ ಪೃಷತೀ ಚ** - ಕರ್ಮಧಾರಯ ಸಮಾಸವಾಗಿ ಆ ಪಶುಸ್ಥೂಲವಾದದ್ದೂ ಚುಕ್ಕೆ ಉಳ್ಳದ್ದೂ ಆಗಿದೆ ಎಂದಾಗುತ್ತದೆ. **ಇನ್ದ್ರಶತ್ರುಃ** - ಅನ್ತೋದಾತ್ತವಾದಾಗ ಇನ್ದ್ರಸ್ಯ+**ಶತ್ರುಃ** ವೃತ್ರನು/ ಮೇಘವು ಇನ್ದ್ರನನ್ನು ಸೂರ್ಯನನ್ನು ಕತ್ತರಿಸುತ್ತದೆ ಎಂಬುದು ಅನುಭವಕ್ಕೆ ವಿರುದ್ಧವಾಗಿರುತ್ತದೆ. ಮೇಘವು ಸೂರ್ಯನನ್ನೆದುರಿಸಿ ತಾನೇ ತುಂಡಾಗಿ ಮಳೆಯನ್ನು ಸುರಿಸುತ್ತದೆಂಬುದೇ ಪ್ರಪಂಚದ ಅನುಭವವಾಗಿದೆ. ಈ ಅನುಭವಕ್ಕೆ ತಕ್ಕಂತೆ ಅರ್ಥವಾಗಲು 'ಇನ್ದ್ರ ಶತ್ರು' ಪದವು ಆದ್ಯುದಾತ್ತವಾದರೆ ಇನ್ದ್ರಃ **ಶತ್ರುಃ - ಯಸ್ಯ ಸಃ** ಎಂದು ಬಹುವ್ರೀಹಿಯಾಗಿ ಇನ್ದ್ರ - ಸೂರ್ಯನು **ವೃತ್ರ** - ಮೇಘವನ್ನು ಕರಗಿಸುವನೆಂಬ ವೃತ್ರ/ ಮೇಘ ಇನ್ದ್ರಶತ್ರು ಪದದ ವಾಚ್ಯವಾಗಿ ಅರ್ಥ ಸರಿಹೊಂದುತ್ತದೆ.

**ಧಾತೂನಾಂ ಅನೇಕಾರ್ಥತ್ವಾತ್** - ಅನುಸಾರ. ವೇದ ಶಬ್ದಗಳು ಸರ್ವತೋಮುಖವಾದ ಅರ್ಥಗಳಿಂದ ಧ್ವನಿಸುತ್ತವೆ - **ಕೃ** ಧಾತುವಿಗೆ ಮೂರುನೂರು ಮೂವತ್ತಾರು ರೂಪ ನಿಷ್ಪತ್ತಿಗಳಿವೆ ಎಂಬುದನ್ನು ಗಮನಿಸಿದರೆ ಲೌಕಿಕಶಬ್ದಗಳಂತೆ ವೇದಶಬ್ದಗಳ ಅರ್ಥ ಪರಿಮಿತವಾಗಿರದೆ ವರ್ಣಗಳೂ ಶಬ್ದಗಳೂ ಸಾರ್ಥಕವಾಗಿದ್ದು ಯೌಗಿಕಾರ್ಥಗಳು ಧಾತ್ವರ್ಥಗಳನ್ನು ಹೊಂದಿಕೊಂಡಿವೆ. ಇನ್ದ್ರ ಶಬ್ದಕ್ಕೆ ಪ್ರಕರಣಾನುಸಾರವಾಗಿ ಪರಮಾತ್ಮ

ಜೀವಾತ್ಮ ಯಜ್ಞ ಮನಸ್ಸು ಸೂರ್ಯ ವಿದ್ಯುತ್ತು ಇತ್ಯಾದಿ ಅರ್ಥಗಳಿವೆ. ನಿರು. ೭.೧೪,೧೫ರಲ್ಲಿ ಅಗ್ನಿಯ ನಿರ್ವಚನವನ್ನು ಅನೇಕ ಬಗೆಯಾಗಿ ಮಾಡಿದ್ದಾರೆ ಭಾಷ್ಯಕಾರರು. ಅಗ್ನಿಯ ಗುಣಗಳಿಗನುಸಾರವಾಗಿ ವ್ಯಾಕರಣ ಸೂತ್ರದಂತೆ ಅನೇಕ ರೂಪನಿಷ್ಪತ್ತಿಗಳನ್ನು ರೂಪಿಸಿ ಅವಯವಾರ್ಥಗಳನ್ನು ಮಾಡಿದ್ದಾರೆ. **'ಚತ್ವಾರಿ ಶೃಂಗಾ.... ಆವಿವೇಶ'** ಮನ್ತ್ರಕ್ಕೆ ಪತಂಜಲಿಗಳು ವ್ಯಾಕರಣ ಪರವಾಗಿಯೂ ಭಾಷ್ಯಕಾರರು ಅಗ್ನಿಪರವಾಗಿಯೂ ಅರ್ಥಮಾಡಿದ್ದಾರೆ. ಇಷ್ಟಾದರೂ **'ಅಗ್ನಿ'** ಶಬ್ದಕ್ಕೆ ಇದೇ ವೇದಮನ್ತ್ರದ ಆಶಯವೆಂದೇನೂ ಹೇಳಿದಂತಾಗಲಿಲ್ಲ.

**ಯಂ ಭಾವಂ ದರ್ಶಯೇದ್ಯಸ್ಯ ತಂ ಭಾವಂ ಸ ತು ಪಶ್ಯತಿ ।**
**ತಂ ಚಾವತಿ ಸ ಭೂತ್ವಾಽಸೌ ತದ್ಗ್ರಹಃ ಸಮುಪೈತಿ ತಮ್ ॥**

**ಏತೈರೇಷೋಽಪೃಥಗ್ಭಾವೈಃ ಪೃಥಗೇವೇತಿ ಲಕ್ಷಿತಃ ।**
**ಏವಂ ಯೋ ವೇದ ತತ್ತ್ವೇನ ಕಲ್ಪಯೇತ್ಸೋಽವಿಶಂಕಿತಃ ॥**

**ವೇದ ಇತಿ ವೇದವಿದೋ ಯಜ್ಞಾ ಇತಿ ಚ ತದ್ವಿದಃ ....** ವೇದಜ್ಞರು. ಋಗಾದಿ ನಾಲ್ಕು ವೇದಗಳೇ ಪರಮಾರ್ಥವೆಂದೂ ಯಾಜ್ಞಿಕರು ಯಜ್ಞವೇ ಪ್ರಪಂಚಕ್ಕೆ ಆದಿಕಾರಣ ವೆಂದೂ ಮೀಮಾಂಸಕರು, ಧರ್ಮಶಾಸ್ತ್ರವೇತ್ತರು, ತಮ್ಮ ತಮ್ಮ ಭಾವನೆಗೆ ತಕ್ಕಂತೆ ವೇದದ ತತ್ತ್ವವನ್ನು ಪ್ರತಿಪಾದಿಸುತ್ತಾರೆಂದು ಮೂವತ್ತೈದು ವಿವಿಧ ಸಿದ್ಧಾಂತಗಳನ್ನು ಸಂಕ್ಷೇಪವಾಗಿ ಹೆಸರಿಸಿ ಇವು ಬುದ್ಧಿ ವೈಭವದ ವಿಜೃಂಭಣೆ ಮಾತ್ರವಾಗಿದ್ದು, ಸತ್ಯವನ್ನು ಅನುಭವದಿಂದ ಸಾಕ್ಷಾತ್ಕರಿಸಿಕೊಂಡಿರುವ ಅರ್ಹರು ಮಾತ್ರ ಅಧಿಕಾರಯುತವಾಗಿ ಸಂಶಯಕ್ಕೆಡೆಯಿಲ್ಲದಂತೆ ನಿರ್ಭಯವಾಗಿ ವೇದತತ್ವವನ್ನು ಸ್ಪಷ್ಟವಾಗಿ ವ್ಯಕ್ತಪಡಿಸಬಲ್ಲರೆಂದು ಶ್ರೀ ಗೌಡಪಾದಾ ಚಾರ್ಯರು ಘೋಷಿಸಿದ್ದಾರೆ - *ಮಾಂ. ಉ., ಕಾರಿಕಾ ವೈತಥ್ಯಪ್ರಕರಣ ೨೦-೩೦.*

ವೇದಮೂಲವಾಗಿರುವ ಚತುರ್ವಿಧ ಪುರುಷಾರ್ಥಗಳೂ ಚತುರಾಶ್ರಮಗಳೂ ಚಾತುರ್ವರ್ಣ್ಯ ವ್ಯವಸ್ಥೆಗಳೂ ಪರಸ್ಪರ ಪೂರಕವಾಗಿ ಪುರಾಣೇತಿಹಾಸಗಳಿಂದ ಪುಷ್ಟಿ ಪಡೆದು ಸಮನ್ವಯವಾದ ಸಾಧನಾಪಥದಲ್ಲಿ ಕ್ರಮಿಸುತ್ತಾ ಪೂರ್ಣತೆಯನ್ನು ಪಡೆಯುವೆಡೆಗೆ ಜನಜೀವನವನ್ನು ರೂಪಿಸುತ್ತಾ ಸಮಾಜವನ್ನು ಹಸನುಗೊಳಿಸುತ್ತಾ ಚಿರಂಜೀವಿ ಯಾಗಿರುವುದನ್ನು ತಿಳಿದೇ ವೇದದ ಅರ್ಥವನ್ನು ಮಾಡಬೇಕಾಗಿದೆ. ಶಾಸ್ತ್ರಗಳು ತಿಳಿಸುವ ಉಪಕ್ರಮ. ಉಪಸಂಹಾರ ಅಭ್ಯಾಸ ಅಪೂರ್ವ ಅರ್ಥವಾದ ಉಪಪತ್ತಿ ಮುಂತಾದವು

ಗಳಿಂದಲೂ 'ನ ಹಿ ನಿಂದಾನ್ಯಾಯ' ಮತ್ತು 'ಸಮನ್ವಯ ದೃಷ್ಟಿ' ಯಿಂದಲೂ ವೇದ ಮನ್ತ್ರಗಳಿಗೆ ಅರ್ಥ ಮಾಡುವುದು ಶ್ರೇಯಸ್ಕರವಾದುದು. ಕೆಲವೆಡೆ ಶಬ್ದಕ್ಕೆ ನೇರವಾದ ಅರ್ಥವೇ ಸಾಧುವಾಗಿದ್ದರೆ ಕೆಲವೆಡೆ ಅಂತರಾರ್ಥವೇ ಪ್ರಾಧಾನ್ಯವಾಗಿರುತ್ತದೆ. ಕೆಲವು ಸಂದರ್ಭದಲ್ಲಿ ವಾಕ್ಯವೃಂದಕ್ಕೇ ತಾತ್ಪರ್ಯವು ನಿಹಿತವಾಗಿರುತ್ತದೆ. ವೇದದಲ್ಲಿ ವಿವಿಧ ಜ್ಞಾನ ಮತ್ತು ಕ್ರಿಯೆಗಳ ದೀರ್ಘಚಿಂತನೆಯಿಂದ ಫಲದೊರಕುವವರೆಗಿನ ಅನೇಕ ವಿದ್ಯೆಗಳ ವಿಚಾರ ಮಾಡಲಾಗಿದೆ.

ವೇದವು ನಾಲ್ಕು ಬಗೆಯ ವಾಕ್ಯಗಳಿಂದ ಕರ್ಮ ಮತ್ತು ಧರ್ಮಗಳನ್ನು ಬೋಧಿಸುತ್ತದೆ. 'ರಾಜಾಜ್ಞೆ'ಯಂತೆ ಧರ್ಮವೇ ಯೋಗ್ಯವಾದುದು. ಇದನ್ನೇ ಆಚರಿಸ ತಕ್ಕದ್ದು ಎಂದು ವಿಧಿಸುವುದೇ '**ವಿಧಿವಾದ**' ವಂದಿಗಳಂತೆ - ವಿಧ್ಯರ್ಥಗಳನ್ನು ಕೊಂಡಾಡು ವುದೇ '**ಅರ್ಥವಾದ**'. ಆಚಾರ್ಯನಂತೆ - ಮಾಡಬೇಕಾದುದನ್ನೆಲ್ಲಾ ಮಾಡಿ ತೋರಿಸುವು ದೇ '**ಮನ್ತ್ರವಾದ**'. **ತಂದೆತಾಯಿಗಳಂತೆ** - ಯಾಗಾದಿಕರ್ಮಗಳ ಹೆಸರನ್ನು ಹೇಳುವುದೇ '**ನಾಮ ಧೇಯ**' - ಎಂದು ನಿಜಗುಣ ಶಿವಯೋಗಿಗಳು ತಿಳಿಸುತ್ತಾರೆ. ಸರ್ವಾಭಿರ್ನಾಮ ವಿಭಕ್ತಿಭಿ ರ್ಯುಜ್ಯಂತೇ ಪ್ರಥಮ ಪುರುಷೈಶ್ಚಾಖ್ಯಾತಶ್ಚ ಎಂದು ನಿರು. ೭.೧. ತಿಳಿಸುತ್ತದೆ. ವೇದ ಮನ್ತ್ರಗಳು **ಪರೋಕ್ಷಕೃತಾಃ, ಪ್ರತ್ಯಕ್ಷಕೃತಾಃ, ಆಧ್ಯಾತ್ಮಿಕಶ್ಚ** ಎಂದು ಅರ್ಥಾನುಸಾರವಾಗಿ ಮೂರು ಬಗೆಯಾಗಿ ಪ್ರಯೋಗವಾಗಿದ್ದು **ಆಶೀರ್ವಾದ ಶಪಥ ಅಭಿಶಾಪ ಕಸ್ಯಚಿದ್ಭಾವ ಪರಿದೇವನಾ ನಿಂದಾ** ಇತ್ಯಾದಿ ವಿಷಯಗಳ ನಾನಾ ಪ್ರಭೇದಗಳಿಂದ ವಿಜೃಂಭಿಸುತ್ತಿವೆ. **ಪರೋಕ್ಷಕೃತಾ** - ದೇವತೆಯು ತಮಗೆ ಕಾಣಿಸದಂತೆ ಪರೋಕ್ಷದಲ್ಲಿರುವುದೆಂದು ಭಾವಿಸಿ ಸ್ತುತಿಸುವ ಮನ್ತ್ರಗಳಲ್ಲಿ ಕ್ರಿಯಾಪದವು ಮಾತ್ರ ಪ್ರಥಮಪುರುಷದಲ್ಲಿದ್ದು ಯಾವುದೇ ವಿಭಕ್ತಿಯಲ್ಲಿಯೂ ಉಪಯೋಗಿಸಲ್ಪಟ್ಟಿರುತ್ತದೆ. **ಸಃ ಅಸ್ತಿ ಕರೋತಿ ಭವತಿ** ಇತ್ಯಾದಿ. **ಪ್ರತ್ಯಕ್ಷಕೃತಾ** - **ಅಥ ಪ್ರತ್ಯಕ್ಷಕೃತಾ ಮಧ್ಯಮಪುರುಷ ಯೋಗಸ್ತ್ವಮಿತಿಚೈತೇನ ಸರ್ವನಾಮ್ನಾ** - ನಿರು. ೭.೨. ಸ್ತುತಿಸುತ್ತಿರುವ ದೇವತೆ ಸಾಕ್ಷಾತ್ತಾಗಿ ಎದುರಿಗೇ ಇರುವುದೆಂದು ಭಾವಿಸಿ ಸ್ತುತಿಸುವುದು, ಇದರಲ್ಲಿ ಈ ರೀತಿ ಮಧ್ಯಮ ಪುರುಷದ ಕ್ರಿಯಾಪದಗಳಿರುತ್ತವೆ - **ತ್ವಮ್ ಅಸಿ, ಕರೋತಿ, ಭವಸಿ** ಇತ್ಯಾದಿ **ಆಧ್ಯಾತ್ಮಿಕಾ** - **ಅಥಾಧ್ಯಾತ್ಮಿಕ್ಯ ಉತ್ತಮಪುರುಷಯೋಗಾ ಅಹಮಿತಿಚೈತೇನ ಸರ್ವ ನಾಮ್ನಾ** - ನಿರು. ೭.೨. ಸ್ತುತಿಸಲ್ಪಡುವ ದೇವತೆಗಳೇ ತಾವೇ ಮಾತನಾಡಿದಂತೆ ಸರ್ವನಾಮಪ್ರದವಾಗಿ ಉತ್ತಮಪುರುಷ ಪ್ರಯೋಗದಿಂದ ಹೇಳುವ ಮನ್ತ್ರಗಳು - **ಅಹಮ್ ಅಸ್ಮಿ ಕರೋಮಿ** ಇತ್ಯಾದಿಯಾಗಿರುತ್ತವೆ.

'**ಮನ್ತ್ರಾ ಅಧಿಯಜ್ಞಿಕ್ಯಾ** ತಏವ **ದೇವತಾಪದತ್ವೇನಾಧಿದೈವಿಕಾಃ** ತ ಏವಾತ್ಮಾನ **ಮಧಿಕೃತಾ ಆಧ್ಯಾತ್ಮಿಕಾಃ**' ಎಂದು ಶತಪಥ ಬ್ರಾಹ್ಮಣ ತಿಳಿಸಿರುವಂತೆ ವೇದಮನ್ತ್ರಗಳಿಗೆ

ಅಧ್ಯಾತ್ಮ ಅಧಿದೈವ ಮತ್ತು ಅಧಿಯಜ್ಞ ಪರವಾಗಿಯೂ ಅರ್ಥಗಳಿವೆ. ಜೀವಾತ್ಮ ಪರಮಾತ್ಮ ಇವೆರಡರ ಸಂಬಂಧ ಗುಣಧರ್ಮ ಸ್ವಭಾವ ಜೀವಗಳ ವಿವಿಧಗತಿ, ಉಪಾಸನಾ ಪರವಾಗಿರುವ ಬ್ರಹ್ಮವಿದ್ಯೆಗೆ ಸಂಬಂಧಿಸಿದ ಅರ್ಥಗಳು **'ಅಧ್ಯಾತ್ಮಿಕ'** ಪ್ರಕ್ರಿಯೆಗಳೆನಿಸುತ್ತವೆ. ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ, ಅನ್ತರಿಕ್ಷ, ಸೂರ್ಯ, ಚಂದ್ರ, ದ್ವಾದಶಾದಿತ್ಯರೆನಿಸುವ ಹನ್ನೆರಡು ಮಾಸಗಳು ಅಂದರೆ ಕಾಲ ರುದ್ರರೆನಿಸುವ ಪಂಚಪ್ರಾಣಗಳು, ಪಂಚ ಉಪ ಪ್ರಾಣಗಳು ಹಾಗೂ ಜೀವ ಇಂದ್ರ/ ವಿದ್ಯುತ್, ಆದಿ ಬ್ರಹ್ಮಾಂಡದಲ್ಲಿ ಸಮಷ್ಟಿಯಾಗಿರುವಂತೆ ಪಿಂಡಾಂಡದಲ್ಲೂ, ಪುರುಷಶರೀರದಲ್ಲೂ ವ್ಯಷ್ಟಿರೂಪವಾಗಿರುವುದೆಂಬ ಅರ್ಥಗಳು **'ಅಧಿದೈವಿಕ'** ಪ್ರಕ್ರಿಯೆ ಎನಿಸುತ್ತವೆ. ಪ್ರಕೃತಿಯ ಸೃಷ್ಟಿಯಲ್ಲಿ ಸಮಸ್ತ ಪದಾರ್ಥಗಳ ಹೆಸರು, ಗುಣ, ಧರ್ಮಗಳ ವರ್ಣನೆಗಳನ್ನೂ ಉತ್ಪತ್ತಿ ಪ್ರಲಯಾದಿಗಳ ವಿವರಣೆಗಳನ್ನೂ, ಚತುರ್ವಿಧ ಪುರುಷಾರ್ಥಗಳು ಸಿದ್ಧಿಯಾಗುವಂತೆ ಉಪಯೋಗಿಸುವ ವಿಧಿವಿಧಾನಗಳನ್ನೂ ರೂಪಿಸುವ ಅರ್ಥಗಳು **'ಅಧಿಯಜ್ಞ'** ಪ್ರಕ್ರಿಯೆ ಎನಿಸುತ್ತವೆ. ಆತ್ಮವಿಷಯದಲ್ಲೇ ಬ್ರಹ್ಮವಿದ್ಯೆಯಲ್ಲೇ ಸರ್ವವೇದಗಳಿಗೂ ವಿನಿಯೋಗ ಎಂದು - ಬೃ. ಉ. ೪. ೪. ೨೨. ತಿಳಿಸುತ್ತದೆ. **ಸಾಯಣರು ವೇದಾಃ ಯಜ್ಞಾರ್ಥ ಪ್ರವೃತ್ತಾಃ** - ಎಂಬ ಭಾವನೆಯಿಂದ ಅಧಿಯಜ್ಞಪರವಾಗಿ ವೇದ ಭಾಷ್ಯ ಮಾಡಿ ದ್ದರೂ ಅಧಿದೈವ ಆಧ್ಯಾತ್ಮಿಕ ಪ್ರಕ್ರಿಯೆಗಳೂ ಅಲ್ಲಲ್ಲಿ ಕಂಡುಬರುತ್ತವೆ. **ಸರ್ವ ದರ್ಶನೇಷು ಚ ಸರ್ವಮನ್ತ್ರಾ ಯೋಜನೀಯಾಃ** ಲೋಕದಲ್ಲಿ ಪ್ರಸಿದ್ಧವಾಗಿರುವ ಎಲ್ಲಾ ಪ್ರಕ್ರಿಯೆಗಳಲ್ಲೂ ವೇದಮನ್ತ್ರಗಳ ಅರ್ಥ ಯೋಜಿಸಬೇಕೆಂಬುದು ಸ್ಕಂದ ಸ್ವಾಮಿಗಳ ಅಭಿಪ್ರಾಯ.

**ಸಾಮವೇದವು ಉಪಾಸನಾ ಪ್ರಧಾನವಾದದ್ದು :** ನಾವು ನಮ್ಮ ಬದುಕನ್ನು ಮೌಲಿಕವಾಗಿ ರೂಪಿಸಿಕೊಳ್ಳಲು ಅನುಕೂಲವಾಗುವಂತೆ ಕೈ ಎತ್ತಿ ತೋರಿಸುತ್ತಿರುವ ಶ್ರುತಿ ಸ್ಮೃತಿ ಪುರಾಣೇತಿಹಾಸಗಳು ವರ್ಣಾಶ್ರಮ ಧರ್ಮಗಳು ಷೋಡಶ ಸಂಸ್ಕಾರಗಳು, ನಾವು ನಮಗಾಗಿ ಕಟ್ಟಿಕೊಂಡಿರುವ ಕಟ್ಟಳೆಗಳು, ಉಚ್ಛೃಂಖಲ ವೃತ್ತಿಯ ವನ್ಯಪಶುವಿನಂತಾಗಬಾರದೆಂದು ಆತ್ಮನಿಯಂತ್ರಣಕ್ಕಾಗಿ ತೊಟ್ಟುಕೊಂಡಿರುವ ಸುವರ್ಣ ಸಂಕೋಲೆಗಳು, ಬಾಳಿನ ಅಂದಕ್ಕಾಗಿ ಬಿಗಿದುಕೊಂಡಿರುವ ಬಂಧನಗಳು. **'ಉಪಾಸನಾನುಷ್ಠಾನಗಳು'** ನದಿಗೆ ದಡವಿದ್ದಂತೆ. ದಡಗಳು ಪ್ರವಾಹದ ಹುಚ್ಚು ನಡೆಯನ್ನು ನಿಯಂತ್ರಿಸಿ ನಿಶ್ಚಿತ ದಿಕ್ಕಿನಲ್ಲಿ ಮುನ್ನಡೆಸುತ್ತವೆ. ಗುರಿ ಸೇರಲು ಅನುವಾಗುತ್ತವೆ. ದಡವು ದುರ್ಬಲವಾದೆಡೆಯಲ್ಲಿ ಪ್ರವಾಹವು ಉಕ್ಕಿ, ಸೊಕ್ಕಿ, ನುಗ್ಗಿ ಪಕ್ಕದ ಬದುಕನ್ನು ಬುಡಮೇಲು ಮಾಡುತ್ತದೆ. ಹೀಗೆ ಬದುಕು ಕೊಚ್ಚಿ ಹೋಗದಂತೆ ನಾವು ಕಟ್ಟಿಕೊಂಡ ಮೌಲ್ಯದ ಉಪಾಸನೆಯು ಅನುಷ್ಠಾನದ

ಆವರಣದಲ್ಲಿ ನಡೆದರೆ ಮಾತ್ರ, ಆತ್ಯಂತಿಕವಾದ ಬೌದ್ಧಿಕ ಮಾನಸಿಕ ಶಾಂತಿ, ನೆಮ್ಮದಿ, ಸಂತೋಷ, ಸಮಾಧಾನಗಳು ನಮ್ಮದಾಗುತ್ತವೆ.

ವೇದದ ದೃಷ್ಟಿಯು ಯಾವ ಬಗೆಯಲ್ಲೂ ಸಾಮಾನ್ಯ ದೃಷ್ಟಿಯಂತಲ್ಲ. ಅದು ಉಚಿತವಾದ ವರ್ಣನೆಗಳ ಮೂಲಕ ವಿವಿಧ ಮನೋಭಾವಗಳನ್ನು ನಿರೂಪಿಸುವುದರಲ್ಲಿ ಸದಾ ನಿರತವಾಗಿರುತ್ತದೆ. ಸಹಾನುಭೂತಿಯುಳ್ಳ ಹೃದಯವಂತನಾದ ರಸಾಸ್ವಾದಕನಾದ ಸಾಮಗಾಯಕನ ಚಿತ್ತವೃತ್ತಿಯನ್ನು ರೂಪಿಸುವಲ್ಲಿ ಸಫಲವಾಗುವ ವಾಕ್ಯ ರಚನೆಯಲ್ಲಿ, ಅಂದರೆ, ಸಾಮಗಾನಕ್ಕೇ ವಿಶಿಷ್ಟವಾದ ನಿಧನಭಕ್ತಿಯಲ್ಲಿ - ಕೊನೆಗೊಳ್ಳುವಾಗ ಸಾಮ ಗಾಯಕನ, ಹೃದಯದಲ್ಲಿ ಈ ದರ್ಶನವು ಮಿಂಚುತ್ತದೆ. ಪ್ರತಿಭೆಯ ಕ್ರಿಯೆಯು, ರಸಾವೇಶದ ಸ್ಥಿತಿಯಲ್ಲಿ ಪ್ರಾರಂಭವಾಗಿ ಸಾಮಗಾಯಕನ ಹೃದಯವನ್ನು ರಸಾವೇಶದಿಂದ ತುಂಬುವುದರಲ್ಲಿ ಪೂರ್ಣವಾಗುತ್ತದೆ. ಸಾಮಗಾನದಲ್ಲಿ ಸೃಷ್ಟಿಯಾಗಿ ಕೆಲಸ ಮಾಡುವ ಪ್ರತಿಭೆಯು ಸಾಮಗಾಯಕನಲ್ಲಿ ಆಸ್ವಾದಕ ಅಭಿರುಚಿಯಾಗಿ ಕೆಲಸ ಮಾಡುತ್ತದೆ. ಈ ಎರಡೂ ತುದಿಗಳು ಅಖಂಡವಾದ ಪೂರ್ಣವಸ್ತುವನ್ನು ರಚಿಸಲು ಒಂದುಗೂಡುವ ಪ್ರಜ್ಞಾನವೆಂಬ ನವನವೋನ್ಮೇಷ ಶಾಲಿನೀ ಪ್ರತಿಭಾ ನಿಷ್ಪತ್ತಿಯು ಆಧ್ಯಾತ್ಮಿಕವಾದುದೇ **ಆದಿ ಪರಾವಾಕ್** ಸಾಮಗಾನದ ಮೂಲಕ ತನ್ನನ್ನು ಅಭಿವ್ಯಕ್ತಿಗೊಳಿಸಿ ಕೊಳ್ಳುತ್ತಿರುವುದೆಂಬ ಅರಿವಿರುವ ಸಾಮಗಾಯಕನು ಆತ್ಮದ ಮೇಲೆ ಮನಸ್ಸನ್ನು ಏಕಾಗ್ರ ಗೊಳಿಸಲು ಶಕ್ತನಾದಲ್ಲಿ ಪ್ರಾಣಾಪಾನವು ನಿಷ್ಕ್ರಿಯವಾಗಿ ಉದಾನವು ತಾನಾಗಿಯೇ ಸುಷುಮ್ನೆಯನ್ನು ಪ್ರವೇಶಿಸಿ ಬ್ರಹ್ಮರಂಧ್ರಕ್ಕೇರುವ ಪರಿಣಾಮವಾಗಿ ಉಪಾಧಿಗಳಿಂದ ಮುಕ್ತವಾದ ಆತ್ಮಾನುಭವವು ಉದಯಿಸುತ್ತದೆ.

**ಸಾಮನ್+ವೇದ, ಸಾಮನ್** ಪದಕ್ಕೆ ಇರುವ ತೃಪ್ತಿಗೊಳಿಸುವಿಕೆ, ಸಂತೈಸುವಿಕೆ, ಸಮಾಧಾನ ಪಡಿಸುವಿಕೆ, ಶಾಂತಿಗೊಳಿಸುವಿಕೆ, ಇತ್ಯಾದಿ ಅರ್ಥಗಳು ಸಾರ್ಥಕವಾಗುವುದು. **'ಉಪಾಸನೆ'** ಯಿಂದ ಫಲ ಸಿದ್ಧಿಸಿದಾಗ ಮಾತ್ರ ಎಂಬುದನ್ನು ಗಮನಿಸಬೇಕು. .... **ಸಾಮವೇದ ಆದಿತ್ಯಾತ್** - *ಐತರೇಯ* / .... **ಸಾಮಾನ್ಯಾದಿತ್ಯಾತ್** - *ಛಾಂ.* // **ಸೂರ್ಯಾತ್ - ಸಾಮವೇದಃ** .... *ಶತಪಥ* / ಹೀಗೆ ಆದಿತ್ಯನಿಂದ ಸಾಮವೇದ ಎಂಬಲ್ಲಿ ಆದತ್ತೇ ರಸಾನ್, ಆದತ್ತೇ ಭಾಸಂ, ಆದೀಪ್ತೋ ಭಾಸಂ ಭವತಿ, ಅಂದರೆ ಸಾಮವೇದವು ಆದಿತ್ಯ/ ಸೂರ್ಯನಂತೆ ಬೆಳಗುತ್ತಿದೆ, ಅದರಿಂದ ಪ್ರಕಾಶವನ್ನು ಪಡೆದು ಪ್ರಕಾಶಮಯವಾಗಿ ಆನಂದರಸವನ್ನು ಗ್ರಹಿಸು ಎಂದು ತಿಳಿಯುವುದೇ ಸೂಕ್ತವಾಗಿರುತ್ತದೆ. **'ಸಾ'** ಪರಮಾತ್ಮ ಪರಲೋಕ **'ಅಮ'** ಜೀವಾತ್ಮ ಇಹಲೋಕ. **'ಅಮ'** ಧಾತುವಿಗೆ ಗತಿ, ಚಲನೆ ಎಂಬ

ಕ್ರಿಯಾರ್ಥ ಗ್ರಹಿಸಿದರೆ ಈಶ್ವರನ ಸಮೀಪಕ್ಕೆ ಜೀವಾತ್ಮನ ಸರಿಯುವಿಕೆಯೇ ಪರಮಾತ್ಮ ನೊಡನೆ ಜೀವಾತ್ಮನ ಕನಿಷ್ಠ ಸಂಪರ್ಕವೇ ಉಪ - ಸಮೀಪದಲ್ಲಿ ಆಸನ ಸ್ಥಾನ ಪಡೆಯುವುದೇ 'ಉಪಾಸನೆ'. ಕರ್ಮ ಜ್ಞಾನ ಉಪಾಸನೆಗಳು, ಹಿತಮಿತವಾಗಿ ಸಾಮ ಗಾನದಲ್ಲಿ ಬೆರೆತಿರುವುದರಿಂದ ಈ ಲೋಕ ಆ ಲೋಕಗಳ ಸಕಲ ಭೋಗಭಾಗ್ಯಗಳನ್ನು ಜನಧನಬಲವಿಲ್ಲದ ಅಕಿಂಚನನೂ ಸಹ ಉಪಾಸನಾಪ್ರಧಾನವಾದ ಸಾಮಗಾನದಿಂದ ಪಡೆಯಬಹುದು. ಸಾಮಗಾನದ ಭಕ್ತಿಗಳ ಮತ್ತು ಸಾಮಗಾನಗಳ ವಿವಿಧ ಉಪಾಸನಾ ಕ್ರಮವನ್ನೂ ಅದರ ಫಲಗಳನ್ನು ಛಾಂ.ಉ. ಮೊದಲನೆಯ ಅಧ್ಯಾಯದ ಮೊದಲನೆಯ ಹನ್ನೆರಡು ಖಂಡಗಳಲ್ಲಿ ವಿವರಿಸಿದ್ದಾರೆ. ಉದ್ಗೀಥಪುರುಷನನ್ನರಿತು ಸಾಮಗಾನ ಮಾಡುವವ ನು ಆದಿತ್ಯನಾಗಿ ದೇವಕಾಮನೆಗಳನ್ನೂ ಮೇಲಿನ ಲೋಕಗಳನ್ನೂ ಪಡೆದು ಕೊಳ್ಳುತ್ತಾನೆ. ಚಾಕ್ಷುಷ ಪುರುಷನಾಗಿ ಕೆಳಗಿನ ಲೋಕಗಳನ್ನೂ ಮನುಷ್ಯಲೋಕಗಳನ್ನೂ ಪಡೆದುಕೊಳ್ಳು ತ್ತಾನೆ. ಅಜ್ಞನು ಭೂತಸೂಕ್ಷ್ಮಗಳನ್ನಾಶ್ರಯಿಸಿ ಜನ್ಮಾಂತರವನ್ನು ಹೊಂದುತ್ತಾನೆ. ಉಪಾಸಕ ನು ಜ್ಞಾನಪ್ರಕಾಶಕ ನಾಡೀದ್ವಾರಾ ಬ್ರಹ್ಮನನ್ನು ಸೇರುತ್ತಾನೆ - *ಛಾಂ.ಉ. ೧.೭.೬-೯.* **ಸ ಪಾಪ್ಮನಾ ವಿನಿರ್ಮುಕ್ತಃ ಸ ಸಾಮ ಭಿರುನ್ನೀಯತೇ ಬ್ರಹ್ಮಲೋಕಂ** - *ಪ್ರ.ಉ.೫.೫., ಬ್ರ.ಸೂ.೧.೩.೧೩ ॥*

ಶಾಸ್ತ್ರದಲ್ಲಿ 'ವಿದ್' ಮತ್ತು 'ಉಪಾಸ್' ಧಾತುಗಳನ್ನೂ ಪರ್ಯಾಯವಾಗಿ ಉಪಯೋಗಿಸಿದೆ. ಉಪಾಸನೆಯು **'ಆವೃತ್ತಿ'**ಯೆಂಬ ಗುಣವನ್ನು ಅಡಗಿಸಿಕೊಂಡಿರುವ ಕ್ರಿಯೆ - *ಬ್ರ.ಸೂ. ೪.೧.೧.* ಶಾಸ್ತ್ರವು ತಿಳಿಸಿಕೊಡುವ ಮನೋನುಕೂಲವಾದ ಒಂದು ಆಲಂಬನವನ್ನು ಶ್ರದ್ಧೆಯಿಂದ ಗ್ರಹಿಸಿ ಅದರಲ್ಲಿ ಸಮಾನ ಚಿತ್ತವೃತ್ತಿಯನ್ನು - ಅದಕ್ಕಿಂತ ಭಿನ್ನಪ್ರತ್ಯಯಕ್ಕೆಡೆಕೊಡದಂತೆ - ಬೆಳಸಿಕೊಳ್ಳುವುದೇ ಉಪಾಸನೆ. **'ತ್ವಂ ಹಿ ನಃ ಪಿತಾ ವಸೋ ತ್ವಂ ಮಾತಾ .... '** - *ಸಾ.ಸಂ. ೧೧೭೦ ॥* **ತ್ವಂ ದಾತಾ .... ಪುತ್ರಸ್ಯ .... ॥** *ಸಾ.ಸಂ. ೧೪೯೩ ॥* **ತ್ವಜ್ ಹತ್ಯ .... ರಣಂ ಧಾಃ** - *ಸಾ.ಸಂ. ೩೨೬ ॥* ಇತ್ಯಾದಿ ಋಕ್‌ಗಳಿಂದ ಉದಯವಾದ ಮನಸ್ಸಿಗೆ ನೆಮ್ಮದಿ ಸಂತೋಷ ಶಾಂತಿಯನ್ನುಂಟುಮಾಡುವ ಶಾಸ್ತ್ರ ಸಮರ್ಪಿತವಾದ ಸಾಮ ಗಾನಾದಿಗಳನ್ನು ಶಾಸ್ತ್ರೋಕ್ತ ಕ್ರಮದಲ್ಲಿ ಸಾಕ್ಷಾತ್ಕಾರವಾಗುವವರೆಗೂ ಭಾವಿಸುತ್ತಿರುವುದೇ ಉಪಾಸನೆ. ಪರತತ್ತ್ವದಲ್ಲಿ ತನ್ನನ್ನು ವಿಲೀನಗೊಳಿಸಿಕೊಳ್ಳುವುದರಿಂದ ಸಮಸ್ತ ಭೇದಗಳೂ ಲಯವಾಗಿ ಲಭಿಸುವ ಐಕ್ಯಾನುಭವವೇ ಆಧ್ಯಾತ್ಮಿಕ ಸಾಧನೆಯ ಅಂತಿಮ ಫಲ. **ಸಾಮಃ ಪ್ರಾಣೋ ವೈ ಸಾಮ, ಪ್ರಾಣೇ ಹೀಮಾನಿ ಸರ್ವಾಣಿ, ಭೂತಾನಿ ಸಮ್ಯಞ್ಚಿಸಮ್ಯಞ್ಚಿ ಹಾಸ್ಮೈ ಸರ್ವಾಣಿ ಭೂತಾನಿ ಶ್ರೈಷ್ಠ್ಯಾಯ ಕಲ್ಪನ್ತೇ ಸಾಮ್ನಃ ಸಾಯುಜ್ಯಗ್‌ಂ ಸಲೋಕತಾಂ ಜಯತಿ**

**ಯ ಏವಂ ವೇದ** - *ಬೃ.ಉ. ೫.೧೩.೩.* // ಸಮಸ್ತ ಭೂತಗಳೂ ಸಮನಾಗಿ ಸೇರುವ ಪ್ರಾಣವೇ **'ಸಾಮ'** ವೆಂದರಿತ ಮಹಾನುಭಾವನು ಶ್ರೇಷ್ಠತೆಯನ್ನೂ ಸಾಲೋಕ್ಯವನ್ನೂ ಸಾಯುಜ್ಯವನ್ನೂ ತನ್ನದನ್ನಾಗಿ ಮಾಡಿಕೊಳ್ಳುತ್ತಾನೆ.

ಉಪಾಸನೆಯು ಪುರುಷತಂತ್ರವಾದ ಮಾನಸಕ್ರಿಯೆಯಾಗಿದೆ. ಬ್ರಹ್ಮಪ್ರಾಪ್ತಿಯೇ ಫಲವಾಗುಳ್ಳ, ವಿಧಾಯಕ ಕರ್ಮವಿಶೇಷವೇ ಉಪಾಸನೆ. ಉಪಾಸನೆಯು ಉಪಾಸಕನಿಗೆ ಸತ್ವಶುದ್ಧಿಯನ್ನುಂಟುಮಾಡಿ ವಸ್ತು ತತ್ತ್ವವನ್ನು ಪ್ರಕಾಶಿಸುವುದರಿಂದ ಅದ್ವೈತ ಜ್ಞಾನಕ್ಕೆ ಉಪಕಾರಿಯಾಗಿರುತ್ತದೆ. ಆಂತರಿಕ ಆಲಂಬನವಿರುವುದರಿಂದ ಜ್ಞಾನಕ್ಕಿಂತಲೂ ಸುಗಮ ವಾಗಿರುತ್ತದೆ. **ಋಕ್ಸಾಮೇ ವೈ ದೇವೇಭ್ಯಃ । ಅಯಜ್ಞೋ ವಾ ಏಷ ಯೋ ಸಾಮ ॥** ಇತ್ಯಾದಿ ಗಳು ಸೂಚಿಸುವಂತೆ ಕರ್ಮಗಳಲ್ಲೇ ಆಸಕ್ತನಾದ ವ್ಯಕ್ತಿ ಕರ್ಮವನ್ನು ತ್ಯಾಗಮಾಡಿ ಮನಸ್ಸನ್ನು ಉಪಾಸನೆಯಲ್ಲಿ ತೊಡಗಿಸುವುದು, ಕಷ್ಟಸಾಧ್ಯವೆಂಬುದನ್ನು ಅರಿತ ಶ್ರುತಿ ಸಾಧಕನ ಅನುಗ್ರಹಾರ್ಥವಾಗಿ ಪರಿಚಿತವಾಗಿರುವ ಕರ್ಮಾಂಗವಾದ **ಉದ್ಗೀಥಾದಿ ಭಕ್ತಿಗಳ 'ಹಾಉ' ಕಾರಾದಿ ಸ್ತೋಭಗಳ : ಪಂಚವಿಧ ಸಪ್ತವಿಧ ಸಾಮಗಳ, ಗಾಯತ್ರ ರಥಂತರ ವಾಮದೇವ್ಯ ಬೃಹತ್, ವೈರೂಪ ವೈರಾಜ ಶಕ್ವರೀ ರೇವತೀ ಯಜ್ಞಾಯಜ್ಞೀಯ ರಾಜನ** - *ಛಾಂ. ಉ. ೧,೨.* ಇತ್ಯಾದಿ ಸಾಮಗಳ ವಿಶಿಷ್ಟ ಉಪಾಸನೆಗಳನ್ನು ಸೋಪಾನಕ್ರಮದಲ್ಲಿ ವಿಧಿಸಿದೆ. ಅರ್ಥ ಸಹಿತವಾದ ಜಪಾನುಭವವನ್ನುಂಟುಮಾಡುವುದೇ ಸಾಮಗಾನದ ವಿಶೇಷತೆ. **ದೇವಾಃ ಸೋಮಂ ದಿವಃ ಸಾಮ್ನಾ ಸಮಾನಮ್ ತತ್ಸಾಮ್ನಃ ಸಾಮತ್ವಂ** - *ತೈ.ಸಂ. ೨.೨.೮೭* // ಮುಮುಕ್ಷು ಸಾಧಕನು ಸಾಮಗಾನದ ಉಪಾಸನೆಯಿಂದ ಮೋಕ್ಷಭಾಗಿ ಯಾಗುತ್ತಾನೆ. **ಸಾಮಂ ಮೇನೇ ಸಾಮ** - ನಿರು. *೭.೧೨* // ಸಮ - ಸಮಾನ ಅಂದರೆ ಭಗವಂತನ ಗುಣಕರ್ಮಗಳಿಗೆ ಸಮಾನವಾಗಿ ತನ್ನ ಗುಣಕರ್ಮವನ್ನು ಅನುಭವಿಸುವುದು. ಕಬ್ಬಿಣದ ಗುಂಡು ಅಗ್ನಿಯಲ್ಲಿ ತಾಪಗೊಂಡು ಅಗ್ನಿಯ ಗುಣಧರ್ಮಗಳನ್ನೇ ಪಡೆಯುವಂತೆ ಉಪಾಸ್ಯದ ಗುಣಕರ್ಮಗಳು ಉಪಾಸಕನಲ್ಲೇ ಮೈದಳೆಯುವುದು.

ಇಂತಹ ನಿರಹಂಕಾರಿಯಾದ ಸಾಧಕನು ಸಾಮಗಾನದ ಉಪಾಸನೆ ಮಾಡುತ್ತಾ ಸ್ವಜಾತೀಯ ಸಜಾತೀಯ ವಿಜಾತೀಯ ಭೇದಗಳಿಗೆ ಅತೀತನಾಗಿ **ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ** - *ಕೇನ ೧.೧.೮* । ಶ್ರುತಿಯ ಉಪದೇಶವನ್ನು ಸಾರ್ಥಕ ಗೊಳಿಸುತ್ತಾನೆ. **ಜ್ಞಾನಾಸಿನೋಪಾಸನಯಾ ಶಿತೇನಚ್ಛಿತ್ವಾ ಮುನಿರ್ಗಾಂ ವಿಚರತ್ಯ ತೃಷ್ಣಃ** - *ಭಾಗ. ೧೧.೨೮.೧೭* // ಮನನಶೀಲ ಪುರುಷನು ತಾನು ಪಡೆದ ಜ್ಞಾನದ ಕತ್ತಿಯನ್ನು ಉಪಾಸನೆ ಎಂಬ ಸಾಣೆಯ ಕಲ್ಲಿನ ಮೇಲೆ ಸಾಣೆ ಹಿಡಿದು ಚೂಪುಮಾಡಿ ದೇಹಾಭಿಮಾನಕ್ಕೆ

ಕಾರಣವಾದ ಅಹಂಕಾರವೆಂಬ ಬಹುಗಟ್ಟಿಯಾದ ಬಲವಾದ ಬೇರನ್ನು ಕತ್ತರಿಸಿಕೊಂಡು ನಿರ್ದ್ವನ್ದ್ವನಾಗಿ ಆಶಾತೃಷ್ಣೆ ಇಲ್ಲದೆ ಆನಂದವಾಗಿ ಈ ಪೃಥ್ವಿಯ ಮೇಲೆ ಸಂಚರಿಸುತ್ತಾನೆ.

**ವೇದಾಧ್ಯಯನ :** ಪಂಚೇಂದ್ರಿಯಗಳಿಂದಾಗಲೀ ಊಹೆ ತರ್ಕ ಅನುಮಾನಾದಿ ಸಾಧನಾದಿಗಳಿಂದಾಗಲೀ ತಿಳಿಯಲು ಸಾಧ್ಯವಾಗದಿರುವ ಪುರುಷಾರ್ಥವಾದ ಶ್ರೇಯ - ಪ್ರೇಯಗಳ ಸಾಧನೋಪಾಯಗಳನ್ನು ವೇದವು ತಿಳಿಸಿಕೊಡುವುದರಿಂದ ವೇದತ್ವವು ಸಿದ್ಧ ವಾಗಿದೆ. **ಆಧೀತಮ್ ಉಚ್ಚಾರ್ಯಮಾಣಮ್ ವೇದಾಧ್ಯಯನೇನ ಸರ್ವವಿದ್ಯಾ ಪ್ರಾಪ್ತೇ ರ್ಮನುಷ್ಯಃ ಆಹ್ಲಾದೀ ಭವತಿ ಸರ್ವಾರ್ಥಜ್ಞಾತಾ ಜಾತಶ್ಛಂದೋ ವೇದಃ ॥** ವೇದಾಧ್ಯಯನ ದಿಂದ-ಆತ್ಮೋತ್ಕರ್ಷ ಬಾಧಿತವಾದ ಅಜ್ಞಾನಗಳಿಂದಾಗುವ ಮನೋಬುದ್ಧಿ ಮಾಲಿನ್ಯ ದೂರನಾಗಿ ವಿದ್ವಾಂಸನಾಗಿ ಮಹಾನಂದಕ್ಕೆ ಭಾಗಿಯಾಗುತ್ತಾನೆ. ಈ ಉದ್ದೇಶವನ್ನು ಈಡೇ ರಿಸಿಕೊಳ್ಳುವ ಕ್ರಮವಾಗಿ ಸಾಂಗೋಪಾಂಗವಾದ ಅರ್ಥಸಹಿತವಾದ ವೇದಾಧ್ಯಯನವು ಕರ್ತವ್ಯವೆಂದು ವಿಧಿಸಲ್ಪಟ್ಟಿದೆ - ನಿರು. *೧.೧೯.* **ಬ್ರಾಹ್ಮಣೇನ ನಿಷ್ಕಾರಣೋ ಧರ್ಮಃ ಷಡಂಗೋ ವೇದೋಽಧ್ಯೇಯೋಜ್ಞೇಯಶ್ಚೇತಿ** - ಮಹಾಭಾಷ್ಯ ॥ ಬ್ರಾಹ್ಮಣನು ಯಾವ ಫಲಾಪೇಕ್ಷೆಯೂ ಇಲ್ಲದೆ ಧರ್ಮಬೋಧಕವಾದ ವೇದವನ್ನು ಷಡಂಗ ಸಹಿತ ಅರ್ಥಜ್ಞಾನ ಪೂರ್ವಕವಾಗಿ ಗುರುಮುಖೇನ ಅಧ್ಯಯನ ಮಾಡುವುದರಿಂದ ಮಾತ್ರ ವೇದಮನ್ತ್ರಗಳ ರಹಸ್ಯದ ಅನುಭವವಾಗಿ ಧರ್ಮ ಮತ್ತು ಬ್ರಹ್ಮದ ಅರಿವು ಮೂಡುತ್ತದೆ. ವೇದವೇ ವಿಧಿಸಿ ರುವ ಈ ಪ್ರಕಾರದ ವೇದಾಧ್ಯಯನವನ್ನು ಇಷ್ಟಬಂದರೆ ಮಾಡಬಹುದು. ಇಲ್ಲದಿದ್ದರೆ ಇಲ್ಲ, ಎನ್ನಲು ಅವಕಾಶವಿಲ್ಲ. ವೇದಾಧ್ಯಯನ ನಿತ್ಯವಾಗಿದ್ದು ಸಂಧ್ಯಾದಿ ನಿತ್ಯಾಹ್ನಿಕಗಳಂತೆ ಸ್ವಧರ್ಮ ಸ್ವಕರ್ತವ್ಯ ಪಾಲನಾರೂಪವಾದುದಾಗಿದೆ.

**ಯೋಽನಧೀತ್ಯ ದ್ವಿಜೋ ವೇದಾನನ್ಯತ್ರ ಕುರುತೇ ಶ್ರಮಂ ।**
**ಸ ಜೀವನ್ನೇವ ಶೂದ್ರತ್ವಮಾಶುಗಚ್ಛತಿ ಸಾನ್ವಯಃ ॥** ಮನು. *೨.೧೬೮ ॥*

ಅಕ್ಷರ ಗ್ರಹಣಪೂರ್ವಕವಾದ ಕಂಠಪಾಠ ಮಾತ್ರದಿಂದ ವೇದಾಧ್ಯಯನ ಮಾಡಬೇಕೆಂಬ ವಿಧಿಯು ಪೂರ್ಣವಾಗುವುದಿಲ್ಲ. ವೇದವನ್ನು ಕಂಠಪಾಠ ಮಾಡಿದ್ದರೂ ವೇದಾರ್ಥವನ್ನು ತಿಳಿಯದಿದ್ದರೆ ಭಾರವನ್ನು ಹೊತ್ತ ಕಂಬದಂತೆ ಆಯಾಸ ಮಾತ್ರವೂ ಬೂದಿಯ ಮೇಲೆ ಹಾಕಿದ ಕಟ್ಟಿಗೆಯಂತೆ ವ್ಯರ್ಥವೂ ಆಗುತ್ತದೆ - ನಿರು. *೧.೧೮.೧೯ ॥* ಅರ್ಥಚಿಂತನ ಪೂರ್ವಕ ಅಧ್ಯಯನ ಮಾಡಿದ ಬ್ರಾಹ್ಮಣನಲ್ಲಿ ಸಕಲ ದೇವತೆಗಳೂ ಆಶ್ರಯವನ್ನು ಪಡೆಯುವುದರಿಂದ ಅಂತಹವನು ಸರ್ವರಿಗೂ ನಮಸ್ಕಾರ ಯೋಗ್ಯನೂ

ಪೂಜ್ಯನೂ ಆಗಿರುತ್ತಾನೆ. ಅಂತಹ ವೇದವಿದನು ಬಹಳ ದ್ರವ್ಯದಿಂದಲೂ ಬಹುಪ್ರಯಾಸ ದಿಂದಲೂ ನಿರ್ವಹಿಸಲು ಸಾಧ್ಯವಾದ ಯಜ್ಞಗಳ ಫಲವನ್ನು ವೇದಾಧ್ಯಯನ ಮಾತ್ರ ದಿಂದಲೇ ಅನುಭವಿಸಿ ಸಾಯುಜ್ಯವನ್ನು ಪಡೆಯುತ್ತಾನೆ - *ತೈ. ಆ. ೨.೧೪,೧೫.* **ಯದೃಚೋ ಅಧೀತೇ ಪಯ ಆಹುತಿಭಿರೇವ ತದ್ದೇವಾಂ ಸ್ತರ್ಪಯತಿ । ಯದ್ಯಜುಷಿ ಘೃತಾಹುತಿಭಿ ರ್ಯತ್ಸಾಮಾನಿ ಸೋಮಾಹುತಿಭಿಃ ತದ್ದೇವಾಂಸ್ತರ್ಪಯತಿ ॥** ಸಾಮವೇದಾ ಅಧ್ಯಯನ ಮಾಡುವುದರಿಂದ ಸೋಮಾಹುತಿಯನ್ನು ಕೊಟ್ಟಂತಾಗುತ್ತದೆ ॥ *ತೈ. ಆ. ೨.೧೦ ॥* **ಸ್ವಾಧ್ಯಾಯಾದ್ಯೋಗಮಾಸೀತ ಯೋಗಾತ್ಸ್ವಾಧ್ಯಾಯಮಾಮನೇತ್ । ಸ್ವಾಧ್ಯಾಯ ಯೋಗ ಸಮ್ಪತ್ಯಾ ಪರಮಾತ್ಮಾ ಪ್ರಕಾಶತೇ ॥** *ಯೋಗ. ೧.೨೮ ವ್ಯಾಸ ॥*

ಉಪನಯನದಿಂದ ಸಂಸ್ಕಾರಗೊಂಡ ದ್ವಿಜನು ತನ್ನ ಬುದ್ಧಿಶಕ್ತಿಯನ್ನನುಸರಿಸಿ ವೇದಗಳನ್ನಾಗಲಿ ಅಥವಾ ಪಿತೃಪಿತಾಮಹರ ಪರಂಪರೆಯಿಂದ ಬಂದಿರುವ ಸ್ವಶಾಖೆ ಎಂಬ ಒಂದು ವೇದವನ್ನಾಗಲೀ ಅರ್ಥಸಹಿತ ಅಧ್ಯಯನ ಮಾಡಬೇಕು. ಸ್ವಾಧ್ಯಾಯವೆಂದರೆ ಸ್ವಶಾಖಾಧ್ಯಯನವೆಂದೇ ಅರ್ಥ - *ತೈ. ಆ. ೧. ೩.*

**ಯಸ್ತಿತ್ಯಾಜಜ್ ಸಖಿವಿದಜ್ ಸಖಾಯಮ್ । ನ ತಸ್ಯ ವಾಚ್ಯಪಿ ಭಾಗೋ ಅಸ್ತಿ ।**
**ಯದೀಜ್ ಶೃಣೋತ್ಯಲಕಜ್ ಶೃಣೋತಿ । ನ ಹಿ ಪ್ರವೇದಜ್ ಸುಕೃತಸ್ಯ ಪನ್ಥಾಂ ॥**

ತನ್ನ ಆಪ್ತಮಿತ್ರನಂತಿರುವ ವೇದವನ್ನು ಅಧ್ಯಯನ ಮಾಡದೆ ಬಿಟ್ಟವನು ವಾಗ್ಭಾಗ್ಯವಿಲ್ಲ ದವನೂ ಅಲ್ಲೂ ಇಲ್ಲೂ ಸಲ್ಲದವನಾಗುತ್ತಾನೆ. ಪುರುಷಾರ್ಥಾನುಶಾಸನವು **ವೇದ ಸ್ವಾಧ್ಯಯನಂ ನಿತ್ಯಮನಧ್ಯಯನೇ ಪಾತಾದಿತಿ** ಎಂದು ಅಪ್ಪಣೆ ಮಾಡುತ್ತಿದೆ. ನಿತ್ಯವಾದ ಕರ್ತವ್ಯರೂಪವಾದ ಸ್ವಶಾಖಾಧ್ಯಯನ ಮಾಡದವನು ಸ್ವಧರ್ಮಭ್ರಷ್ಟನಾಗಿ ಪತಿತ ನಾಗುತ್ತಾನೆ. ಅಧ್ಯಯನ ಮಾಡಿದವನು ತನ್ನ ಪಾಪಗಳನ್ನು ಕಳೆದುಕೊಂಡು ದೇವತೆಗಳನ್ನೂ ಪವಿತ್ರಗೊಳಿಸುವನು - *ಬೃ. ಉ. ೪. ೪. ೨೨* ಮತ್ತು *ತೈ. ಉ. ಶಿಕ್ಷಾವಲ್ಲಿ.* ವೇದಾಧ್ಯಯನದ, ಐದು ಹಂತಗಳನ್ನು ಹೀಗೆ ಗುರುತಿಸಲಾಗಿದೆ.

**ವೇದಸ್ವೀಕರಣಂ ಪೂರ್ವಂ ವಿಚಾರೋಽಭ್ಯಸನಂ ಜಪಃ ।**
**ತದ್ದಾನಂ ಚೈವ ಶಿಷ್ಯೇಭ್ಯಃ ವೇದಾಭ್ಯಾಸೋ ಹಿ ಪಂಚಧಾ ॥** *ದಕ್ಷಸ್ಮೃತಿ ೨.೩.೪ ॥*

ಮೊದಲು ವೇದವನ್ನು ಅಕ್ಷರಗ್ರಹಣ ಮೂಲಕ ಕಂಠಪಾಠ ಮಾಡುವುದು. ನಂತರ ಅರ್ಥ ತಿಳಿದುಕೊಂಡು ಅದರ ಬಗೆಗೆ ವಿಚಾರ ಮಾಡುವುದು, ಪುನಃ ಪುನಃ ಪಾರಾಯಣ

ಮಾಡುವುದು, ನಂತರ ಅದರ ಜಪ ಧ್ಯಾನಮಾಡುತ್ತಾ ಅದರ ಇಂಗಿತವನ್ನು ಮನದಟ್ಟು ಮಾಡಿಕೊಂಡು ಕಡೆಯದಾಗಿ ಶಿಷ್ಯರಿಗೆ ಪಾಠವನ್ನು ಹೇಳಿಕೊಡುವುದು. ಇದೇ ಆರ್ಷೇಯ ವಾದ ಅಧ್ಯಯನಕ್ರಮ **ಯುಕ್ತಿಹೀನ ವಿಚಾರೇತು ಧರ್ಮಹಾನಿಃ ಪ್ರಜಾಯತೇ** ಎಂಬ ಸ್ಮೃತಿ ವಾಕ್ಯವನ್ನು ಕಲಿಯುವವರೂ ಕಲಿಸುವವರೂ ಅರಿತಿರಬೇಕು.

**ಮಾಧುರ್ಯಮಕ್ಷರವ್ಯಕ್ತಿಃ ಪದಚ್ಛೇದಸ್ತು ಸುಸ್ವರಃ ।**
**ಧೈರ್ಯಂ ಲಯಸಮರ್ಥಂ ಚ ಷಡೇತೇ ಪಾಠಕಾಗುಣಾಃ ॥**

ಅಕ್ಷರಗಳನ್ನು ಸ್ಫುಟವಾಗಿಯೂ ಮಧುರವಾಗಿಯೂ ಪದಗಳನ್ನು ವಿಧಿಪೂರ್ವಕ ವಾಗಿ ಬಿಡಿಸಿ ಸ್ವರಲಯಗಳನ್ನು ತಪ್ಪದೆ ಧೈರ್ಯವಾಗಿ ಸಂಶಯಕ್ಕೆಡೆಯಿಲ್ಲದೆ ಸ್ಪಷ್ಟವಾಗಿ ಮಧುರವಾಗಿ ಪಠಿಸುವುದು ವೇದಾಧ್ಯಯನದಲ್ಲಿ ತೊಡಗಿರುವವರ ಗುಣವಾಗಿರ ಬೇಕೆಂದು ಪಾಣಿನೀಯಾದಿ ಶಿಕ್ಷಾಗ್ರಂಥಗಳು ಬಹುವಿವರವಾಗಿ ತಿಳಿಸುತ್ತಿವೆ.

**ರಕ್ತಂ ಪೂರ್ಣಂ ಅಲಂಕೃತಂ ಪ್ರಸನ್ನಂ ವ್ಯಕ್ತಂ ವಿಕೃಷ್ಟಂ ಶ್ಲಕ್ಷ್ಣಂ ಸಮಂ ಸುಕುಮಾರಂ ಮಧುರಮಿತಿ** - *ನಾ.ಶಿ. ೧.೩.೧. ॥* ಸಾಮಗಾನದಲ್ಲಿ ಅಳವಡಿಸಿಕೊಳ್ಳಬೇಕಾದ ಗುಣಗಳು ಹೀಗಿವೆ. 'ರಕ್ತಂ' - ವೇಣು ವೀಣಾ ಮನುಷ್ಯ ಸ್ವರಗಳು ಮಿಳಿತವಾಗಿರುವಾಗ ಆಗುವ ರಂಜನೆ 'ಪೂರ್ಣಂ' - ಸ್ವರಶ್ರುತಿ ಛನ್ದ ಪಾದಾಕ್ಷರಗಳ ಸಂಯೋಗದಿಂದ ಉತ್ಪನ್ನವಾಗುವ ಗುಣಪ್ರಕಟಣೆ. 'ಅಲಂಕೃತಂ' - ಕಂಠ ಅಂದರೆ ಪ್ರಥಮಸ್ಥಾನದಲ್ಲಿರುವ ಸ್ವರವನ್ನು ಕೆಳಗೆ ಹೃದಯದಲ್ಲಿ ಸ್ಥಾಪಿಸಿ ಎತ್ತರಿಸಿ ಶಿರಸ್ಥಾನಕ್ಕೆ ಒಯ್ಯುವ ಪರಿ. 'ಪ್ರಸನ್ನಂ' - ಕಂಠದಲ್ಲಿ ಗದ್ಗದ ಭಾವಹೋಗಿ ಶಂಕಾರಹಿತವಾಗುವ ಪರಿ. 'ವ್ಯಕ್ತಂ' - ಪದ ಪದಾರ್ಥ ಪ್ರಕೃತಿ ವಿಕಾರ ಆಗಮ ಲೋಪ ಕೃದನ್ತ ತದ್ಧಿತ ಸಮಾಸ ಧಾತು ನಿಪಾತ, ಉಪಸರ್ಗ ಸ್ವರ ಲಿಂಗ ವೃತ್ತಿ ವಾರ್ತಿಕ ವಿಭಕ್ತ್ಯರ್ಥ ಏಕವಚನ ಬಹುವಚನ ಮುಂತಾದವುಗಳು. ಬಹುಸ್ಪಷ್ಟವಾಗಿ ಪ್ರತಿಪಾದಿತ ವಾಗುವ ಪರಿ. 'ವಿಕೃಷ್ಟಂ' - ಪದ ಅಕ್ಷರಗಳನ್ನು ಸ್ಪಷ್ಟವಾಗಿ ಎತ್ತರಸ್ವರದಲ್ಲಿ ಉಚ್ಚರಿಸುವ ಪರಿ. 'ಶ್ಲಕ್ಷ್ಣಂ' ದ್ರುತ ವಿಲಂಬಿತ ದೋಷಗಳಿಲ್ಲದ ಉಚ್ಚನೀಚ ಪ್ಲುತ ಸಮಾಹಾರ ಕಾಲ ಮತ್ತು ಉಪಪತ್ತಿಗಳಿಂದ ಕೂಡಿದ ಧ್ವನಿ. 'ಸಮ' - ಸ್ವರಗಳ ಆವಾಪ ನಿರ್ವಾಪ ಏರಿಳಿತಗಳು, ವ್ಯವಸ್ಥಿತವಾದಸ್ಥಾನಗಳಲ್ಲೇ ಸಮಾವೇಶವಾಗುವ ಕ್ರಮ. 'ಸುಕು ಮಾರಂ' - ಪದ ವರ್ಣ ಸ್ವರ. ಆವೃತ್ತ ಅಕ್ಷರಗಳನ್ನು ಕಂಠ ಒತ್ತಿ ಉಚ್ಚರಿಸುವುದರಿಂದ ಉಂಟಾಗುವ ಮೃದುವಾದ ಕೋಮಲವಾದ ಗಾನ. 'ಮಧುರಂ' - ಸ್ವಾಭಾವಿಕವಾಗಿಯೇ ಹೊರಡುವ ಲಲಿತ ಪದಾಕ್ಷರಗಳು - ಇವುಗಳನ್ನೆಲ್ಲಾ ಸಾಧನೆಯಿಂದ ಸಂಪಾದಿಸಿಕೊಳ್ಳಬೇಕು.

ನಿವಾರಿಸಿಕೊಳ್ಳಬೇಕಾದ ದೋಷಗಳು ಹೀಗಿವೆ - **ಶಂಕಿತ ಭೀಷಣ, ಭೀತ ಉದ್ಘುಷ್ಟ ಅನುನಾಸಿಕ ಕಾಕಸ್ವರ ಮೂರ್ಧಗತ** - ಉಚ್ಚಸ್ವರದಿಂದ ನೆತ್ತಿಯವರೆಗೇರಿ ಸುವ **ಅಪೂರ್ಣಗಾನ; ಸ್ಥಾನವಿವರ್ಜಿತ ವಿಸ್ವರ ವಿರತ ವಿಶ್ಲಿಷ್ಟ, ವಿಷಮಾಹತ ವ್ಯಾಕುಲ ತಾಲಹೀನ** ಎಂಬ ಹದಿನಾಲ್ಕು ದೋಷಗಳನ್ನು ಸತತಪ್ರಯತ್ನದಿಂದ ದೂರಮಾಡಿ ಕೊಳ್ಳಬೇಕು - *ನಾ.ಶಿ.೧.೩.೧೨.*, ಆಚಾರಹೀನರೂ ದುಷ್ಟರೂ ಕಣ್ಣು ಮೂಗು ಕಿವಿ ಹಲ್ಲು ತುಟಿ ವಿಕೃತವಾಗಿರುವವರೂ ಮೂಗಿನಲ್ಲೇ ಮಾತನಾಡುವವರೂ ಗದ್ಗದ ಕಂಠ ದವರೂ ನಿಲ್ಲಿಸಿ ನಿಲ್ಲಿಸಿ ಮಾತನಾಡುವವರೂ ವೇದಾಧ್ಯಯನ ಅಧ್ಯಾಪನಕ್ಕೆ ಅರ್ಹರಲ್ಲ. ಅತಿಕೋಪಿಷ್ಠರೂ ಆಲಸಿಗಳೂ ರೋಗಿಗಳೂ ಚಂಚಲ ಚಿತ್ತರೂ ಸಹಸ್ರಸಂದೇಹಗ್ರಸ್ತರೂ ಕೇವಲ ಪುಸ್ತಕದ ಮೇಲೇ ಭರವಸೆ ಇಟ್ಟಿರುವವರೂ ಗುರುವಿನಿಂದ ಅಧ್ಯಯನ ಪರಂಪರೆ ಸಂಪ್ರದಾಯ ಪ್ರಕಾರ ಅಧ್ಯಯನ ಮಾಡದವರೂ ಶಿಷ್ಯರ ಒಲವನ್ನು ಗಳಿಸಲಾರರು, ಸಭಾ ಸಮ್ಮಾನಿತರಾಗಲಾರರು, ಶಠರೂ ಹೇಡಿಗಳೂ ಅಹಂಕಾರಿಗಳೂ ನಾಳೆ ಎಂದು ಮುಂದೂ ಡುವ ಆಲಸಿಗಳೂ ವೇದ ವಿದ್ಯೆಯನ್ನಾರ್ಜಿಸಲಾರರು.

ಬಾಹ್ಯಾಭ್ಯಂತರ ಶೌಚದಿಂದ ಶುದ್ಧರಾದವರೂ, ಹಲ್ಲು ತುಟಿ ಆದಿ ಉಚ್ಚಾರಣಾ ಸ್ಥಾನಗಳು ಶುದ್ಧವೂ ಸುಂದರವೂ ಆಗಿರುವವರೂ ಗೆದ್ದಲು, ಹುಳು, ಸತತವಾಗಿ ಉದ್ಯೋಗ ಶೀಲವಾಗಿದ್ದು ಮಣ್ಣಿನ ಕಣಗಳಿಂದ ಹುತ್ತವನ್ನು ಕಟ್ಟುವಂತಹ ಪರಿಶ್ರಮಿಗಳೂ ಅಭ್ಯಾಸ ಶೀಲರೂ ಆಗಿರುವವರು ವೇದಾಧ್ಯಯನ ಸಂಪನ್ನರಾಗಲು ಸಾಧ್ಯ.

**ಅನಧ್ಯಯನ :** ವೇದಾಧ್ಯಯನದಿಂದ ವಿರಮಿಸಲು ಕೆಲವು ವಿಶೇಷ ದಿನಗಳನ್ನು ಅನಧ್ಯಯನವೆಂದು ಪರಂಪರೆಯಿಂದ ಹೀಗೆ ಗೊತ್ತು ಮಾಡಲಾಗಿದೆ.

**ಅಮಾವಾಸ್ಯಾ ಗುರುಂ ಹನ್ತಿ ಶಿಷ್ಯಂ ಹನ್ತಿ ಚತುರ್ದಶೀ ।**
**ಉಭಾವಾವಷ್ಟಮೀ ಹನ್ತಿ ಪ್ರತಿಪತ್ ಪಾಠನಾಶಿನೀಂ ॥**

**ತಸ್ಯ ವಾ ಏತಸ್ಯ ಯಜ್ಞಸ್ಯ ದ್ವಾವನಧ್ಯಾಯೌ ಯದಾತ್ಮಾ ಅಶುಚಿರ್ಯದ್ದೇಶಃ । ಇತಿ ॥ ಗ್ರಹಣ ಸ್ವಾಧ್ಯಾಯೇ .... ದ್ವಾವನಧ್ಯಾಯೌ ವಿದ್ಯೇತೇ । ಆತ್ಮಾ ಬ್ರಹ್ಮಯಜ್ಞಸ್ಯ ಕರ್ತಾಸ್ವಯಮ ಶುಚಿರ್ಯದಾ ಭವತಿ ತದಾನೀಮೇಕೋ ಅನಧ್ಯಾಯಃ । ದೇಶೋ ವಾ ಮೂತ್ರಪುರೀಷಾದ ಭಿರಶುಚಿರ್ಭವತಿ ಸ ದ್ವಿತೀಯೋಽನಧ್ಯಾಯಃ । ನ ತು ಕಶ್ಚಿತ್ ತೃತೀಯೋ ಅನಧ್ಯಾಯ ಹೇತುರಸ್ತಿ ॥** *ತೈ.ಆ.೨.೧೫ ॥* .... **ಪ್ರತಿಪತ್ಪಾಠಶೀಲಸ್ಯ ವಿದ್ಯೇವ ತನುತಾಂ ಗತಾ ॥** *ಸುಂದರಕಾಂಡ.೫೯.೩೧ ॥*

**ದ್ವಾವೇವ ವರ್ಜಯೇನ್ನಿತ್ಯಂ ಅನಧ್ಯಾಯೌ ಪ್ರಯತ್ನತಃ ।**
**ಸ್ವಾಧ್ಯಾಯ ಭೂಮಿಂ ಚಾಶುದ್ಧಮಾತ್ಮಾನಂ ಚಾಶುಚಿಂ ದ್ವಿಜಃ ॥** ಮನು. *೪.೧೨೭ ॥*

ಪಾಡ್ಯ ಅಷ್ಟಮಿ ಪ್ರದೋಷ ಚತುರ್ದಶಿ ಹುಣ್ಣಿಮೆ, ಅಮಾವಾಸ್ಯೆ, ಸಂಕ್ರಾಂತಿ ಮನ್ವಾದಿ ಯುಗಾದಿ ಆಶೌಚಗಳು ಇತ್ಯಾದಿ ಬಗೆಬಗೆಯ ಅನಧ್ಯಯನಕಾಲಗಳು ನಿಗದಿತ ವಾಗಿವೆಯಾದರೂ ಬಹಳ ಅನಧ್ಯಯನ ದಿನಗಳಿಂದ ಪಾಠಕ್ಕೆ ಸಮಯಾಭಾವ ವಾಗುವುದರಿಂದ ತಾನು ಮತ್ತು ಪಾಠಭೂಮಿ ಅಶುದ್ಧವಾದರೆ ಮಾತ್ರ **'ಅನಧ್ಯಾಯ'** ಮಾಡಬೇಕು. ಅನ್ಯಥಾ ಪೂರ್ವನಿಮಿತ್ತಗಳಿದ್ದರೂ ಅಧ್ಯಯನ ಮಾಡಬಹುದು. ನಿತ್ಯಜಪ, ಕಾಮ್ಯಕರ್ಮ, ಪಾರಾಯಣಗಳಿಗೆ ಅನಧ್ಯಯನ ನಿಯಮ ಅನ್ವಯಿಸುವುದಿಲ್ಲವೆಂದು ಧರ್ಮಸಿಂಧು ತಿಳಿಸುತ್ತಿದೆ.

ಅಧ್ಯಯನ ಕ್ರಮ :- **ಅಕ್ಷರಜ್ಞೋ ವಿರಾಮಜ್ಞಃ ಪ್ರತ್ಯಾರಂಭೀ ತಥೈವ ಚ ।**
**ಸ್ವರಮಾತ್ರಾ ವಿಭಾಗಜ್ಞಸ್ಸವಿಪ್ರೋ ಗಾನಮರ್ಹತಿ ॥**

**ನಾಭ್ಯಾಹನ್ಯಾತ್ ನನಿರ್ಹನ್ಯಾನ್ನನ್ಯಾನ್ನಸ್ಯ ಪ್ರಗಾಯೇನ್ನ ಕಂಪಯೇತ್ ।**
**ಸಮಂ ಸಾಮಾನಿ ಗಾಯೇತ ವ್ಯೋಽಮ್ನೀ ಶ್ಯೇನ ಗತಿರ್ಯಥಾ ॥**

ಸ್ವರಾಕ್ಷರಗಳನ್ನು ನುಂಗದೆ ಬಿಡದೆ ಅರಚದೆ ಕಂಪಿಸದೆ ಆಕಾಶದಲ್ಲಿ ಗಿಡುಗ ಹಾರುವಂತೆ ಗಡಿಬಿಡಿಯಿಲ್ಲದೆ ಶಾಂತವಾಗಿ ಒಂದೇ ಗತಿಯಲ್ಲಿ ಗಾನ ಮಾಡಬೇಕು. ಅಕ್ಷರ, ಸ್ವರ, ವಿರಾಮ, ಮಾತ್ರಾದಿಗಳ ತಿಳುವಳಿಕೆ ಇಲ್ಲದವರೂ ಶ್ರುತಿಜ್ಞಾನವಿಲ್ಲದವರೂ ಅಲ್ಪ ಕಂಠದವರೂ ಸಾಮಗಾನ ಮಾಡಲರ್ಹರಲ್ಲ. **'ಸುಸ್ವರೇಣ ಸುವಕ್ತ್ರೇಣ ಪ್ರಯುಕ್ತಂ ಬ್ರಹ್ಮ ರಾಜತೇ'** - ಎಂಬ ವಿಶೇಷ ಸ್ವರಸಂಪತ್ತಿಯನ್ನು ಸಾಮಗಾಯಕರಿಗೆ ಶಿಕ್ಷಾಗ್ರಂಥಗಳು ತಿಳಿಸುತ್ತಿವೆ. **'ಯಥಾವಧಾನೇನ ಪಠನ್ ಸಾಮಗಾಯತ್ಯವಿಸ್ತರಮ್ ಸಾವಧಾನ ಸ್ತಥಾಭ್ಯಾಸಾತ್ ಪರಂಬ್ರಹ್ಮಾಧಿ ಗಚ್ಛತಿ'** ಎಂಬ ಯಾಜ್ಞವಲ್ಕ್ಯರ ಉಕ್ತಿ ಸಾಮಗಾಯಕರಿಗೆ ಬಹುಪಥ್ಯ ವಾದುದು. **ಯೋಜಾಗರತಮೃಚಃ ಕಾಮಯಂತೇ ಯೋಜಾಗಾವತಮುಪ ಸಾಮಾನಿಯನ್ತಿ** - *ಋ.ಸಂ. ೫.೪೪.೧೪, ಛಾಂ.ಉ. ೨.೨೨.೨-೫ ॥* ಅತಿನಿದ್ರೆ ಇಲ್ಲದ ಜಾಗರೂಕನಾದ ವೇದ ಪಂಡಿತನಿಗೆ ಮಾತ್ರ ಸಾಮವೇದ ವಶವಾಗುವುದು.

ಗಾನಕ್ಕಾಗಿ ಕಾಷ್ಠವೀಣೆ ಮತ್ತು ಗಾತ್ರವೀಣೆ ಎಂಬೆರಡು ಸಲಕರಣೆಗಳುಂಟು. ಕಾಷ್ಠವೀಣೆಯು ಸಂಗೀತ ಶಾಸ್ತ್ರದಲ್ಲಿ ಪ್ರಸಿದ್ಧಿಯಾಗಿರುವುದು. ಸಾಮಗಾನಕ್ಕೆ ದೈವದತ್ತವಾದ

ಸ್ವಶರೀರವೆಂಬ ಗಾತ್ರವೀಣೆಯೇ ಬಹು ಅನುಕೂಲವಾದ ವಾದ್ಯ. ವೀಣೆ ಎನಿಸಿಕೊಳ್ಳುವ ಶರೀರದ ಯಾವ ಭಾಗವೂ ಸ್ವಲ್ಪವೂ ಅಲುಗದಂತೆ ಕಂಪಿಸದಂತೆ ಶರೀರ ಬೆನ್ನೆಲುಬು, ಕತ್ತು, ಶಿರಸ್ಸು ನೇರವಾಗಿರುವಂತೆ ಸ್ಥಿರ ಸುಖಾಸನದಲ್ಲಿ ಕುಳಿತುಕೊಳ್ಳುವುದು - ಶ್ವೇ.ಉ. ೨.೮., ಭ.ಗೀ. ೬.೧೧,೧೩. ಎರಡೂ ಕೈಗಳ ಅಂಗೈಗಳನ್ನು ಮೇಲ್ಮುಖವಾಗಿರುವಂತೆ ಎಡ ಬಲ ತೊಡೆಗಳ ಮೇಲೆ ಇಟ್ಟುಕೊಳ್ಳುವುದು. ಅಂಗೈಯನ್ನು ಗೋಕರ್ಣಾಕೃತಿಯಲ್ಲಿಟ್ಟು ಕೊಂಡು ಬೆರಳುಗಳನ್ನು ಅಗಲಿಸದೆ. ಪರಸ್ಪರ ಕೂಡಿರುವಂತೆ ನೋಡಿಕೊಂಡು ಬೆರಳುಗಳ ಮೇಲೆ ಸ್ವರಗಳನ್ನು ಆರೋಪಿಸಿಕೊಳ್ಳುತ್ತಾ ಬಲಗೈ ಅಂಗುಷ್ಠದ ತುದಿಯಿಂದ ಮಾತ್ರ ಉಳಿದ ಬೆರಳು ಗಳ ಮಧ್ಯಭಾಗವನ್ನು ಅಂದರೆ **'ಪರ್ವ'** ಗಳನ್ನು ಮುಟ್ಟುತ್ತಾ.... ಎಡಗೈ ಬೆರಳುಗಳಿಂದ 'ಮಾತ್ರಾ' 'ದ್ವಿಮಾತ್ರಾ' 'ವೃದ್ಧಿ' ಗಳನ್ನೂ ತ್ರಿರೇಖಾಸ್ಥಾನಗಳಲ್ಲಿ ಸಂಧಿ ಗಳನ್ನೂ ಪ್ರದರ್ಶಿಸುತ್ತಿರಬೇಕು. ಸಾಮಗಾನ ಮಾಡುವಾಗ ಪ್ರಥಮ ದ್ವಿತೀಯ ಸ್ವರಗಳ ಮಧ್ಯೆ ಗೋಧಿಕಾಳಿನಷ್ಟೂ ಋಕ್ ಪಠನ ಮಾಡುವಾಗ ಎಳ್ಳುಕಾಳಿನಷ್ಟೂ ಅಂತರವಿರಬೇಕು. ಬೆರಳುಗಳ **'ಮಧ್ಯಪರ್ವ'** ಗಳಲ್ಲಿ ನಿಗದಿತವಾಗಿರುವ ನಿರ್ದಿಷ್ಟ ಸ್ವರವನ್ನೇ ಭಾವಿಸುತ್ತಿರ ಬೇಕು. **'ವಿವೃತ್ತಿ'** ಗಳೆನಿಸಿಕೊಂಡಿರುವ ಪದ ವಿಭಾಗದ ಭೇದವೂ ಕೂಡುವಿಕೆಯೂ ಮೋಡ ದಲ್ಲಿರುವ ಮಿಂಚಿನ ಸೂತ್ರದಂತೆ ಸ್ಪಷ್ಟವಾಗಿ ಗೋಚರಿಸುತ್ತಿರಬೇಕು. ತಲೆಯ ಕೂದಲಿನಲ್ಲಿ ಕತ್ತರಿಯು ಚಲಿಸುತ್ತಾ ಕೂದಲನ್ನು ಬೇರೆ ಮಾಡುವ ಪರಿಯಲ್ಲಿ ಪದಗಳೂ ಸ್ವರಗಳೂ ಪ್ರತ್ಯೇಕವಾಗಿ ಬೋಧವಾಗುತ್ತಿರಬೇಕು. ಆಮೆಯು ತನ್ನೆಲ್ಲಾ ಅಂಗಗಳನ್ನೂ ಒಳಗೆ ಸೆಳೆದುಕೊಂಡಿರುವಂತೆ ಶರೀರದ ಅನ್ಯ ಚೇಷ್ಟೆಗಳೆಲ್ಲಾ ವಿಲೀನವಾಗಿ ಮನಸ್ಸನ್ನೂ ದೃಷ್ಟಿಯನ್ನೂ ಸ್ವರಗಳ ಮೇಲಿಟ್ಟು ಸ್ವಸ್ಥವಾಗಿಯೂ ನಿರ್ಭಯವಾಗಿಯೂ ಶಾಂತವಾಗಿಯೂ ವರ್ಣಗಳನ್ನುಚ್ಚರಿಸುತ್ತಿರಬೇಕು.

**ಸಮ್ಯಗ್ವರ್ಣ ಪ್ರಯೋಗೇಣ ಬ್ರಹ್ಮಲೋಕೇ ಮಹೀಯತೇ** - ವರ್ಣಗಳು ಹುಟ್ಟುವ ಸ್ಥಾನ ಮತ್ತು ಒಟ್ಟಾಗುವ ರೀತಿ, ವರ್ಣಗಳು ಉದಯವಾಗಲು ಮಾಡಬೇಕಾದ ಪ್ರಯತ್ನ ದೀರ್ಘಾಕ್ಷರ ಹ್ರಸ್ವಾಕ್ಷರ ಒತ್ತಕ್ಷರಗಳನ್ನು ಉದಾತ್ತಾನುದಾತ್ತ ಕೃಷ್ಟಾದಿ ಸಪ್ತಸ್ವರ ಸ್ಥಾನಗಳಲ್ಲಿ ಉಚ್ಚರಿಸಬೇಕಾದ ಮಾತ್ರಾಕಾಲಗಳನ್ನು ಶಿಕ್ಷಾಶಾಸ್ತ್ರ ತಿಳಿಸಿರುವಂತೆ ವೇದಮಂತ್ರಗಳನ್ನು ಉಚ್ಚರಿಸುವವನು ಬ್ರಹ್ಮಲೋಕದಲ್ಲೂ ಪೂಜ್ಯನೆನಿಸುತ್ತಾನೆ. ಸಾಮಗಾನೋಚ್ಚಾರಣೆ ಯಾಗುವಾಗ ಮೂಗಿನ ನೇರಕ್ಕೆ ಪೂರ್ವದಲ್ಲಿ ಗೋಕರ್ಣಾ ಕೃತಿಯಲ್ಲಿರುವ ಅಂಗೈನ

ಬೆರಳುಗಳ ತುದಿಯನ್ನು ದೃಷ್ಟಿಸುತ್ತಾ ಮನ್ತ್ರಾರ್ಥವನ್ನು ಚಿಂತಿ ಸುತ್ತಿರಬೇಕು. ಮನ್ತ್ರ ವಾಕ್ಯ ಗಳು ಕೈ ಮತ್ತು ಬಾಯಿ ಎರಡರಿಂದಲೂ ಜೊತೆಜೊತೆಯಾಗಿ ಸಂಚರಿಸುತ್ತಿರಬೇಕು. ವರ್ಣಗಳ ದ್ರುತಾದಿ ವೃತ್ತಿಗಳನ್ನು ಪ್ರಾರಂಭಿಸಿದ ರೀತಿಯಲ್ಲೇ ಸಮಾಪ್ತಿಗೊಳಿಸಬೇಕು. ಅಂದರೆ ಪ್ರಾರಂಭದಿಂದ ಅಂತ್ಯದವರೆಗೂ ದ್ರುತಾದಿ ವೃತ್ತಿಗಳು ವ್ಯತ್ಯಾಸಗೊಳ್ಳದೆ ಒಂದೇ ಬಗೆಯಾಗಿರಬೇಕು. ಒಂದೇ ಗಾನದಲ್ಲಿ ಬಗೆಬಗೆಯ ದ್ರುತಾದಿ ವೃತ್ತಿಯನ್ನು ಯೋಜಿಸಬಾರದು.

**ಅಭ್ಯಾಸಾರ್ಥೇ ದ್ರುತಾಂ ವೃತ್ತಿಂ ಪ್ರಯೋಗಾರ್ಥೇತು ಮಧ್ಯಮಾಮ್ ।**
**ಶಿಷ್ಯೇಣೋಪದೇಶಾರ್ಥೇ ಕುರ್ಯಾದ್ವೃತ್ತಿಂ ವಿಲಮ್ಬಿತಮ್ ॥**

ಪಂಚಕಲಾಮಾತ್ರದ ವಿಲಂಬಿತ ವೃತ್ತಿಯಲ್ಲಿ ನಿಧಾನವಾಗಿ ಉಪದೇಶ ಮಾಡುವುದರಿಂದ ಪಾಠಹೇಳುವುದರಿಂದ ಶಿಷ್ಯ ಸುಲಭವಾಗಿ ಗ್ರಹಿಸುತ್ತಾನೆ. ಪ್ರಯೋಗ ಕಾಲದಲ್ಲಿ ಕರ್ಮ ಮಾಡುವಾಗ ಚತುಷ್ಕಲಾಮಾತ್ರದ ಮಧ್ಯಮ ವೃತ್ತಿಯಲ್ಲಿ ಮನ್ತ್ರಗಳನ್ನು ಪಠಿಸಬೇಕು. ಪಾರಾಯಣ, ಅಧ್ಯಯನ ಕಾಲಗಳಲ್ಲಿ ತ್ರಿಕಾಲಾಮಾತ್ರ ವೃತ್ತಿಯಲ್ಲಿ ಬೇಗಬೇಗ ಮನ್ತ್ರೋಚ್ಚಾರವಾಗಬೇಕು - *ನಾ. ಶಿ. ೧.೬.೨೧,೨೨ ॥*

**ಗೀತೀ ಶೀಘ್ರೀ ಶಿರಃಕಂಪೀ ತಥಾ ಲಿಖಿತಪಾಠಕಃ ।**
**ಅನರ್ಥಜ್ಞೋ ಅಲ್ಪಕಂಠಶ್ಚ ಷಡೇತೇ ಪಾಠಕಾಧಮಾಃ ॥**

ವೇದವನ್ನು ಹಾಡಿನಂತೆ ಹೇಳುವವನೂ ಅತಿವೇಗವಾಗಿ ಪಠಿಸುವವನೂ ಶಿರಸ್ಸನ್ನು ಕಂಪಿಸುತ್ತಾ ಚಲಿಸುತ್ತಾ ವೇದವನ್ನು ಹೇಳುವವನೂ ಪುಸ್ತಕಗಳನ್ನು ಓದುವಂತೆ ವೇದವನ್ನು ಓದುವವನೂ ಅರ್ಥವನ್ನರಿಯದವನೂ ಕೀರಲು ಸ್ವರದವನೂ ಉತ್ತಮ ವೇದಾಧ್ಯಯನ ಸಂಪನ್ನನೆನಿಸುವುದಿಲ್ಲ.

**'ಅಭ್ಯಾಘಾತ'** ಅಬ್ಬರಿಸುವಂತೆ, **'ನಿರ್ಘಾತ'** ಸಿಡಿಲಿನಂತೆ, **'ಪ್ರಗಾನ'** ಹಾಡಿನಂತೆ, **'ಕಂಪನ'** ನಡುಗುವಂತೆ ಇತ್ಯಾದಿ ದೋಷಗಳಿಗೆಡೆಕೊಡದಂತೆ ಸಮಭಾವದಿಂದ ಸಾಮಗಾನ ವಾಗಬೇಕು. ಆಕಾಶದಲ್ಲಿ ಗಿಡುಗ ಪಕ್ಷಿಯು ಹಾರುತ್ತಿರುವಂತೆ ನೀರಿನಲ್ಲಿ ಮೀನುಗಳು ಚಲಿಸುತ್ತಿರುವಂತೆ ಆಕಾಶದಲ್ಲಿ ಪಕ್ಷಿಗಳು ಹಾರಾಡುವ ಮಾರ್ಗವನ್ನು ಗುರುತಿಸಲಾಗದಂತೆ - ಸ್ವರಗತ ಶ್ರುತಿಯ ವಿಶೇಷ ಸ್ವರೂಪದ ಅವಧಾರಣವು ಕಾಣದಂತೆ ಸಾಮಗಾನದ ಸವಿಗೆ

ಚ್ಯುತಿಬಾರದಂತೆ ಆನಂದಾನುಭವವಾಗುತ್ತಿರಬೇಕು. ಹಾಲಿನಲ್ಲಿರುವ ತುಪ್ಪದಂತೆ ಕಟ್ಟಿಗೆಯಲ್ಲಿನ ಬೆಂಕಿಯಂತೆ ಸ್ವರಗತ ಶ್ರುತಿಯು ಗೀತದಲ್ಲಿ ಅವಿತುಕೊಂಡಿರುವುದರಿಂದ ವಿಶೇಷ ಪ್ರಯತ್ನದಿಂದ ಅದನ್ನು ಸಂಪಾದಿಸಬೇಕು.

ವೇದಾಧ್ಯಯನ ಮಾಡುವವರು ಸಾತ್ವಿಕ ಆಹಾರವನ್ನು ಹಿತಮಿತವಾಗಿ ಸೇವಿಸುತ್ತಿದ್ದು ಉಷಃಕಾಲಕ್ಕೆ ನಿದ್ದೆಯಿಂದೆದ್ದು ಮೌನವಾಗಿ ಶೌಚಾದಿಗಳನ್ನು ಮುಗಿಸಿ ತೇಗ, ಮಾವು ಮುತ್ತುಗ ಬಿಲ್ವ ಉತ್ತರಣೆ ಬಾಗೆ ಕಗ್ಗಲಿ ಕರವೀರ ಹೊಂಗೆ ಇತ್ಯಾದಿ ಮುಳ್ಳಿನ ಅಥವಾ ಹಾಲಿರುವ ಮರದ ಕಡ್ಡಿಗಳಿಂದ ದಂತಧಾವನ ಮಾಡಿಕೊಳ್ಳುವುದರಿಂದ ಕಫವು ಕಡಿಮೆಯಾಗಿ ವಾಗಿನ್ದ್ರಿಯದ ಪಟುತ್ವ ವೃದ್ಧಿಯಾಗಿ ಶಬ್ದೋಚ್ಚಾರಣೆ ಸರಳವೂ ಸ್ಪಷ್ಟವೂ ಆಗಿ ಧ್ವನಿ ಮಧುರವಾಗುತ್ತದೆ ಎಂದೂ ಉಪ್ಪಿನೊಂದಿಗೆ ತ್ರಿಫಲಾಚೂರ್ಣವನ್ನು ಭಕ್ಷಿಸುವುದರಿಂದ ಜಠರಾಗ್ನಿ ಪ್ರಜ್ವಲಿತವಾಗಿ ಮೇಧಾಧಾರಣೆ ಶಕ್ತಿ ವೃದ್ಧಿಸಿ ಸ್ವರವರ್ಣಗಳ ಸ್ಪಷ್ಟ ಉಚ್ಚಾರಣೆಗೆ ನೆರವಾಗುತ್ತದೆಂದೂ '**ಪ್ರಾಚೀನ ಔದವ್ರಜಿಗಳು**' ಮಾನ್ಯ ಮಾಡಿರುತ್ತಾರೆ.

ವೇದಪಾರಾಯಣ ಮಾಡುವವರು ಋಕ್ ಪದ ಗಾನ ಅನಂತರ ಉಪನಿಷತ್ತುಗಳನ್ನು ಕ್ರಮವಾಗಿ ಯಥಾನುಕೂಲ ಪಾರಾಯಣ ಮಾಡುತ್ತಾ ಅರ್ಥಾನುಸಂಧಾನ ಮಾಡುತ್ತಿರಬೇಕು. ಇದರೊಂದಿಗೆ ಬ್ರಾಹ್ಮಣ ಗ್ರಂಥಗಳ ಅಧ್ಯಯನ ಪೂರಕವಾಗಿರುತ್ತದೆ. **.... ಸ್ವಾಮಿ ದೇವತಾ ಪ್ರತಿಷ್ಠಾಂಗಭೂತಂ ಸಾಮವೇದ ಗ್ರಾಮ/ ಅರಣ್ಯ/ ಊಹ/ ರಹಸ್ಯ ಭಾಗ ಪಾರಾಯಣಂ ಕರಿಷ್ಯೆ** ಎಂದು ನವರಾತ್ರಿ ಶಂಕರಜಯಂತಿ ಹೋಮಹವನಾದಿ ನಿಮಿತ್ತವಾಗಿ ಕಾಮನಾಪೂರ್ತಿಗಾಗಿ ಪಾರಾಯಣ ಮಾಡುವಾಗ ಒಂದು/ಮೂರು/ಹತ್ತು ದಿನಗಳಲ್ಲಿ ಪಾರಾಯಣ ಮಾಡಲಾಗುವಷ್ಟು ಗ್ರಾಮ - ಅರಣ್ಯ, ಊಹ, ರಹಸ್ಯಗಾನ ಭಾಗಗಳನ್ನು ನಿಶ್ಚಯಮಾಡಿಕೊಂಡು, ಅಷ್ಟು ಭಾಗವನ್ನು ಸಂಕಲ್ಪದಲ್ಲಿ ಅಳವಡಿಸಿಕೊಂಡು ಪಾರಾಯಣ ಮಾಡಬೇಕು. ನಿತ್ಯನಿಯಮಾಧ್ಯಯನ ಮಾಡುವವರು **ನಾ ಭುಕ್ತ್ವಾ ನಕ್ತಂ ನಾಧೀತಾ ॥** ಭೋಜನಾನ್ತರ ಮತ್ತು ರಾತ್ರಿ ಅಧ್ಯಯನ ಮಾಡಬಾರದು.

ಗುರುವು ಸ್ವಮುಖದಿಂದ ಖಚಿತವಾದ ಸ್ಪಷ್ಟವಾದ ಉಚ್ಚಾರಣೆಯ ಮೂಲಕ ಶಿಷ್ಯನಿಗೆ ವೇದಮನ್ತ್ರಗಳನ್ನು ಉಪದೇಶಿಸುತ್ತಾ ಬಾಯಿಪಾಠ ಮಾಡಿಸುವುದೇ ಪ್ರಾಚೀನ ಪರಂಪರೆಯಾಗಿದೆ. ಸಕಾಲದಲ್ಲಿ ಉಪನಯನ ಸಂಸ್ಕಾರದ ಮೂಲಕ ಸಾವಿತ್ರೀ ಉಪದೇಶ ಪಡೆದು, ಗಾಯತ್ರೀ ಜಪವನ್ನೂ ಅಗ್ನಿಕಾರ್ಯದ ಮೂಲಕ ಅಗ್ನಿಪರಿಚರ್ಯೆಯನ್ನೂ ಮಾಡುತ್ತಿರುವ ಬಾಲಕನು ಪ್ರಥಮ ಉಪಾಕರ್ಮವಾದ ನಂತರ ಶುಭದಿನದಂದು

ಪ್ರಾತರಾಹ್ನಿಕಗಳನ್ನು ಮುಗಿಸಿಕೊಂಡು ಗುರುಸೇವಾ ಸಂಕೇತವಾಗಿ ಒಂದು ಹಿಡಿ ಸಮಿತ್ತಿನೊಂದಿಗೆ ಅಭೀಷ್ಟ ಗುರುವಿನ ಬಳಿಗೆ ಬಂದು ಪ್ರವರಪೂರ್ವಕ ಪಾದಾಭಿವಂದನೆ ಮಾಡಿ ತಂದಿರುವ ಸಮಿತ್ತನ್ನು ಅವರ ಮುಂದಿಟ್ಟು ವೇದಾಧ್ಯಯನ ಮಾಡಿಸಬೇಕೆಂದು ಬಿನ್ನವಿಸಿಕೊಳ್ಳುವುದು. **ಅಧೀ ಹಿ ಭಗವಃ...** *ತೈ. ಉ. ೩.೧.೧., ಛಾಂ. ಉ. ೭.೧.೧. ॥* ಶಿಷ್ಯನು ಪ್ರವರ ಹೇಳಿಕೊಂಡು **'ಅಹಂ ಭೋಃ ಅಭಿವಾದಯೇ'** ಎಂದು ನಮಸ್ಕಾರ ಮಾಡಿದಾಗ ಗುರುವು **'ಆಯುಷ್ಮಾನ್ ದೇವದತ್ತಾ ೩ಏಧಿ'** ಎಂದು 'ತ್ತಾ' ಎಂಬಕ್ಷರವನ್ನು ೩ ಮಾತ್ರಾಕಾಲವಾದ ಪ್ಲುತದಲ್ಲುಚ್ಚರಿಸುವುದು.

**ಬ್ರಹ್ಮಚಾರೀ ಧನದಾಯೀ ಮೇಧಾವೀ ಶ್ರೋತ್ರಿಯಃ ಪ್ರಿಯೋ ವಿದ್ಯಯಾ ವಾ ....** *ಸಂ. ಉ. ಬ್ರಾ. ೩.೧೧ ॥* ಇದರ ಆದೇಶದ ಹಿನ್ನೆಲೆಯಲ್ಲಿ, ಶಿಷ್ಯನ ನಡೆನುಡಿಗಳಿಂದ ಸಂತುಷ್ಟನಾದ ಗುರುವು - ತೈ. ಉಪ. ಶೀಕ್ಷಾವಲ್ಲಿಯಲ್ಲಿ ಹೇಳಿರುವಂತೆ ತಾನು ಪೂರ್ವಾಭಿಮುಖನಾಗಿ ಸ್ಥಿರಸುಖಾಸನದಲ್ಲಿ ಕುಳಿತುಕೊಂಡು ಶಿಷ್ಯನನ್ನು ಉತ್ತರಾಭಿಮುಖವಾಗಿ ಸ್ಥಿರಸುಖಾಸನದಲ್ಲಿ ಕೂರಿಸಿಕೊಳ್ಳುವುದು. ಓಂಕಾರ ಪೂರ್ವಕವಾಗಿ ಗುರುವಿಗೂ ಭಗವಂತನಿಗೂ ವಂದಿಸುವುದು - *ಗೌ. ಧ. ಸೂ. ೧.೨.೫೮,* ವಾ. ಶಿ.೧.೬.೪ ಮತ್ತು ನಾರದಪುರಾಣ ಪೂರ್ವಭಾಗ ೨ನೆಯ ಪಾದದಲ್ಲಿ ನಿರ್ದೇಶಿಸಿರುವಂತೆ ಮೊದಲು ಓಂಕಾರವನ್ನೂ ವ್ಯಾಹೃತಿಸಹಿತ ಗಾಯತ್ರೀ ಮನ್ತ್ರವನ್ನೂ ಪಠಿಸಿ **'ಗಾಯತ್ರಾಖ್ಯಂ ಪ್ರಥಮಂ ಗಾನಂ'** ಪ್ರಾರಂಭಿಸುವುದು.

ಮನ್ತ್ರದ ಪ್ರಥಮಪಾದವನ್ನು ಸ್ವರಪೂರ್ವಕವಾಗಿಯೂ ಸ್ಪಷ್ಟವಾಗಿಯೂ ಶಿಷ್ಯನಿಗೆ ಸರಿಯಾಗಿ ಕೇಳಿಸುವಂತೆ ಉಚ್ಚರಿಸುವುದು, ಶಿಷ್ಯನು ಶ್ರದ್ಧಾಭಕ್ತಿಯಿಂದ ಏಕಾಗ್ರಚಿತ್ತನಾಗಿ ತನ್ಮಯತೆಯಿಂದ ಗುರು ಉಪದೇಶಿಸಿದ್ದನ್ನು ಸ್ಪಷ್ಟವಾಗಿ ಅಕ್ಷರ ಗ್ರಹಣಪೂರ್ವಕವಾಗಿ ಕೇಳಿಸಿಕೊಂಡು ಗುರುವಿಗೆ ಕೇಳಿಸುವಂತೆ ಮನಸ್ಸಿಟ್ಟು ಎರಡು ಅಥವಾ ಮೂರುಬಾರಿ ಯಥಾವತ್ತಾಗಿ ಸ್ಪಷ್ಟವಾಗಿ ಉಚ್ಚರಿಸುವುದು. ಗುರುವು ಶಿಷ್ಯನ ಸ್ವರಾಕ್ಷರ ಉಚ್ಚಾರ ಲೋಪದೋಷಗಳನ್ನೂ ಶಿರಸ್ಸು ಕೈ ಆದಿ ಅಂಗಗಳ ಚಲನೆಯ ವಿಕಾರಗಳನ್ನೂ ತಿಳಿಸಿ ತಿದ್ದಿ ಹೇಳಿಕೊಡುವುದು. ದುರೂಹವಾದ ಪರಿಚಿತವಲ್ಲದ ಪದಗಳನ್ನೂ ಪದಸಮೂಹ ಗಳನ್ನೂ ಉಚ್ಚರಿಸಲು ಶಿಷ್ಯನಿಗೆ ಕಷ್ಟವಾದಾಗ ಸೂಕ್ತವಾಗಿ ಪದಚ್ಛೇದ ಮಾಡಿ ಬಿಡಿಬಿಡಿಯಾಗಿ ಭಾಗಗಳಾಗಿ ಹೇಳಿಕೊಡುವುದು.

ಗುರುವು ವೇದವಾಕ್ಯಗಳ ಪದಗಳನ್ನೂ ಸ್ವರವರ್ಣಗಳನ್ನೂ ವಿರಾಮವನ್ನೂ ಶಿಕ್ಷಾ ಮತ್ತು ವ್ಯಾಕರಣ ನಿಯಮಾನುಸಾರ ಗುರುತಿಸಬಲ್ಲವನಾಗಿರಬೇಕು. ಅಂದರೆ ವಾಕ್ಯದ ಸ್ವಲ್ಪಭಾಗವನ್ನು ಹೇಳುವಾಗ ಉಂಟಾಗಬಹುದಾದ ಸ್ವರವ್ಯತ್ಯಾಸ ವರ್ಣ ವ್ಯತ್ಯಾಸ

ಸಂಧಿನಿಯಮಗಳನ್ನು ಗಮನಿಸಿ ಉಚ್ಚಾರವನ್ನು ಮಾಡಲೂ ಹೇಳಿಕೊಡಲೂ ಶಕ್ತನಾಗಿರಬೇಕು. ಈ ಸಂದರ್ಭದಲ್ಲಿ - ಮುಖ ನ್ಯಾಸ ಕರಣ ಪ್ರತಿಜ್ಞಾ ಹಾಗೂ ಉಚ್ಚಾರಣ ಎಂಬ ಐದೂ ಆಚಾರ್ಯನ ಕರ್ಮಗಳೆಂದು ಶಾಸ್ತ್ರ ಹೇಳುತ್ತಿರುವುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಯಾವುದಾದರೂ ವರ್ಣದ ಕರಣದ ಬಗೆಗೆ ಶಿಕ್ಷಾಶಾಸ್ತ್ರಗಳು ಮೌನವಾಗಿದ್ದರೆ ಗುರುಪರಂಪರಾಗತ ನಿಶ್ಚಯವೆಂಬ ಕರಣವೇ ಪ್ರತಿಜ್ಞಾರೂಪವೆಂದು ನಿರ್ವಹಿಸಬೇಕು. ಸಪ್ರತಿಜ್ಞಾ ಉಚ್ಚಾರಣೆಯೇ ಶ್ರೇಷ್ಠ. ಶಿಷ್ಯನ ಶಕ್ತಿಯನ್ನನುಸರಿಸಿ ಅರ್ಧ ಅಥವಾ ಒಂದು ಪ್ರಪಾಠಕವನ್ನು ಒಂದು ಅಥವಾ ಎರಡು ಪಕ್ಷಗಳ ಕಾಲ ಅಧ್ಯಯನ ಮಾಡಿಸುವುದು. ಅನಧ್ಯಯನ ದಿನಗಳನ್ನು ಬಿಟ್ಟು ದಿನದಿನವೂ ಪ್ರಾತರಾಹ್ನಿಕಗಳ ನಂತರ ಶಿಷ್ಯನ ಶಕ್ತಿ ಸಾಧನೆ ಆಸಕ್ತಿಗಳನ್ನನುಸರಿಸಿ ಅಧ್ಯಾಪನವನ್ನು ಮುಂದುವರೆಸುತ್ತಿರಬೇಕು.

ಶಿಷ್ಯನು ಗುರುವಿನಿಂದ ಶ್ರವಣ ಮಾಡಿದ್ದನ್ನು ಅಂದಂದೇ ಹತ್ತು ಅಥವಾ ಹೆಚ್ಚುಬಾರಿ ಆವರ್ತನೆ ಮಾಡಿಕೊಳ್ಳುತ್ತಾ ಗುರುವಿಗೊಪ್ಪಿಸುತ್ತಾ ವಾಚೋವಿಧೇಯ ಮಾಡಿಕೊಳ್ಳುವುದು. ಸ್ವಶಾಖೆಯ ಋಕ್, ಪದ, ಗಾನ, ಸಂಹಿತಾಪಾಠಗಳನ್ನೂ ಬ್ರಾಹ್ಮಣ ಉಪನಿಷತ್ತುಗಳನ್ನೂ ಅರ್ಥಸಹಿತ ಅಧ್ಯಯನ ಮಾಡುತ್ತಿರುವಾಗಲೇ ಬಿಡುವಾದಾಗ ಶಿಕ್ಷಾ ಆದಿ ಷಡಂಗ ಗಳನ್ನೂ ಕಲ್ಪಸೂತ್ರ ಧರ್ಮಶಾಸ್ತ್ರ ಪುರಾಣೇತಿಹಾಸಗಳನ್ನೂ ವ್ಯಾಸಂಗ ಮಾಡುವುದು. ಈ ರೀತಿ ಒಂದು ವೇದದ ಸಾಂಗವಾದ ಅಧ್ಯಯನ ಮಾಡಲು ಹನ್ನೆರಡು ವರ್ಷಗಳ ಸಮಯ ವನ್ನು ನಿಗದಿಮಾಡಲಾಗಿದೆ. ನಂತರ ಯಥಾಶಕ್ತಿ ಅನ್ಯಶಾಖೆಗಳ ಅಧ್ಯಯನವನ್ನೂ ಮಾಡಿ ಗುರುವಿಗೆ ದಕ್ಷಿಣೆ ಸಲ್ಲಿಸಿ ಸ್ನಾತಕನಾಗಿ ಗೃಹಸ್ಥಾಶ್ರಮ ಸ್ವೀಕರಿಸುವುದೇ ವೇದಾಧ್ಯಯನದ ಸನಾತನ ಪರಂಪರೆಯಾಗಿದೆ.

**ಸಂಹಿತೆ : ಸಂಹಿತೈಕಪದಂ ನಿತ್ಯಾನಿತ್ಯಾಧಾತೂಪಸರ್ಗಯೋಃ । ನಿತ್ಯಾ ಸಮಾಸೇ ವಾಕ್ಯೇ ತು ಸಾ ವಿವಕ್ಷಾಯಪೇಕ್ಷ್ಯತೇ ॥ ಪದಃ ಪ್ರಕೃತಿ ಸಂಹಿತಾ ॥ ಪರಃ ಸನ್ನಿಕರ್ಷಾ ಸಂಹಿತಾ ॥** *ಪಾ.೧.೪.೧೦೯* ॥ ಭಗವಂತನ ನಿಃಶ್ವಾಸರೂಪವಾಗಿರುವ ವೇದಮನ್ತ್ರಗಳು ಋಷಿಗಳಿಂದ ದ್ರಷ್ಟವಾಗಿದ್ದು ಅಕ್ಷರಗಳೂ ಪದಗಳೂ ಪ್ರಕೃತಿಪ್ರತ್ಯಯಗಳೂ ಸ್ವರಗಳೂ ನಿಯಮಾನುಸಾರವಾಗಿ ಪರಸ್ಪರ ಸೇರಿಕೊಂಡು ನಿರಂತರ ಪ್ರವಾಹಮಯವಾಗಿ ಆನುಪೂರ್ವಿಯು ನಿತ್ಯವಾಗಿರುವುದೇ - ಸಂಹಿತೆ ಎನಿಸುತ್ತದೆ. **ಸಾಮ ಸಂತಾನಃ - ಸಾಮ ವರ್ಣಾನಾಂ ಮಧ್ಯಮ ವೃತ್ತ್ಯೋಚ್ಚಾರಣಂ ಸಮತಾ ಸನ್ತಾನಃ ಸನ್ತತಿಃ ಸಂಹಿತೇತ್ಯರ್ಥಃ -** *ತೈ.ಉ. ೧.೨.೧.* ॥ **ಸಾಮವೇದಸ್ಯ ಗೀತಿಷು ಸಾಮಾಖ್ಯಾ ॥** *ಮೀ.ಸೂ.೨.೧.೩೬,* **ಇತಿ ನ್ಯಾಯೇನ ಕೇವಲ ಗಾನಾತ್ಮಕತ್ವಾತ್ ॥ ಪದಾಭಾವೇನ ಪ್ರಸಿದ್ಧಾ ಸಂಹಿತಾ ಯದ್ಯಪಿ ನ ಭವತಿ ತಥಾಪಿ ತಸ್ಮಿನ್**

**ಸಾಮ್ನೋ ಗಾನೇ ಸಪ್ತಸ್ವರಾಭವಂತಿ ಕೃಷ್ಟಪ್ರಥಮಾ .... ಮನ್ದ್ರಾತಿ ಸ್ವಾರ್ಯಾ ಇತಿ । ಯಥಾ ಮನ್ದ್ರ ಮಧ್ಯಮತಾರಾಣೇತಿ ತ್ರೀಣಿ ವಾಚಃ ಸ್ಥಾನಾನಿ ಭವನ್ತಿ । ಏತೇಷಾಂ ಯಃ ಸನ್ನಿಕರ್ಷಃ ಸಾ ಸಂಹಿತಾ ॥** *ಸ.ಉ.ಬ್ರಾ.೧.೧. ॥* ಸಪ್ತಸ್ವರಗಳಿಂದ ವ್ಯಾಪ್ತವಾದ ಋಕ್ಕನ್ನು ವಿಕಾರ ವಿಶ್ಲೇಷಣ ವಿಕರ್ಷಣ ಅಭ್ಯಾಸ ವಿರಾಮ ಹಾಗೂ ಸ್ತೋಭ ಸಹಿತ ನಿಯಮಾನುಸಾರ ಎಡಬಿಡದೆ ವ್ಯಕ್ತವಾಗುವ ಗಾನವೇ, **ಸಂಹಿತೆ : ಸಂಹಿತಾತ್ವನ್ತು ಸತತ ಗಾನ ಏವ ಸಾರ್ಥಕಂ ಭವತಿ ॥** ಋಕ್ ಶರೀರ ಸಾಮ ಆತ್ಮ. ಋಕ್ ಆಧಾರ ಸಾಮ ಆಧೇಯ ವಾಕ್ಕೇ ಋಕ್ ಪ್ರಾಣವೇ ಸಾಮ - *ಛಾಂ.ಉ. ೧.೧.೫, ೧.೬.೧, ೧.೭.೨ ॥* ಋಕ್‌ನಲ್ಲಿ ವಾಗ್ದೃಷ್ಟಿಯನ್ನೂ ಸಾಮದಲ್ಲಿ ಪ್ರಾಣ ದೃಷ್ಟಿಯನ್ನೂ ಗ್ರಹಿಸಿದರೆ ಋಕ್ ಸಾಮಗಳಿಗೆ ವಾಕ್‌ಪ್ರಾಣಗಳು ಕಾರಣವಾಗಿರುವುದರಿಂದ ಋಕ್‌ಸಾಮ ಸಾಧ್ಯವಾದ ಸಮಸ್ತ ಕರ್ಮಗಳನ್ನೂ ಒಳಗೊಂಡಂ ತಾಗುತ್ತದೆಯಾಗಿ ಸಾಮವೇದವು ಋಕ್‌ಸಂಹಿತೆ ಮತ್ತು ಸಾಮಗಾನ ಸಂಹಿತೆ ಎಂಬೆರಡರ ಸಮೂಹವಾಗಿರುತ್ತದೆ.

ಋಕ್ ಸಾಮಕ್ಕೆ ಆಧಾರ. **'ಯಾ ಋಕ್ ತತ್ ಸಾಮ'** - *ಛಾಂ.ಉ.೧.೩.೪ ॥* ಯಾವುದು ಋಕ್ಕೋ ಅದೇ ಸಾಮ. ಋಕ್ ಮೇಲೆ ಆಧಾರಿತವಾದದ್ದು ಸಾಮ. ಋಚೀಷಮ್ - ಋ.೧.೬೧.೧, ೬.೬೪.೪, ೮.೩೨.೨೬., ೬೨.೬, ೬೮.೬, ೮.೯೦.೧, ೯೭.೯., ೧೦.೨೨.೧, ಹೀಗೆ ಎಂಟು ಮನ್ತ್ರಗಳಲ್ಲಿ ಬಂದಿದ್ದು ಋಕ್ ಮೇಲೆ ಸಾಮಗಾನವಾಗುತ್ತದೆ ಎಂಬ ಅರ್ಥವನ್ನೇ ತಿಳಿಸುತ್ತಿದೆ. **'ಋಕ್ ಸಾಮಾಭ್ಯಾಮಭಿಹಿತೌ ಗಾವೌ ತೇ ಸಾಮನಾ ವೈತಾಮ್'** - ಋಕ್ ಮತ್ತು ಸಾಮದ ಮನೋಹರ ಸಾಮಂಜಸ್ಯವು. 'ಸೂರ್ಯಾ' ವಿವಾಹದ ರಥಕ್ಕೆ ಹೂಡಿರುವ ಎತ್ತುಗಳ ಭವ್ಯ ನಡಿಗೆಯ ಸೌಮನಸ್ಯದಂತಿದೆ - ಅ.ವೇ.೧೪.೧.೧೧. **ಅಮೋಹಮಸ್ಮಿ ಸಾ ತ್ವಂ ಸಾಮಾಹಮಸ್ಮಿ ಋಕ್ತ್ವಂ ದ್ಯೌರಹಂ ಪೃಥಿವೀ ತ್ವಮ್ । ತಾವಿಹ ಸಂಭವಾವ ಪ್ರಜಾಮಾ ಜನಯಾವಹೈ ॥** ಅ.ವೇ. ೧೪.೨.೭೧ ದಲ್ಲಿ ವಧುವನ್ನು ವರನು ಆಹ್ವಾನ ಮಾಡುತ್ತಾ ನಾನು **'ಅಮ'** ನಾಗಿದ್ದೇನೆ, ನೀನು **'ಸಾ'** ಆಗಿದ್ದೀಯೆ. ನಾನು **'ಆಕಾಶ'** ನೀನು **'ಪೃಥಿವೀ'**, ನಾನು **'ಸಾಮ'** ನೀನು **'ಋಗ್'**ರೂಪಾ, ಹೀಗೆ ನಮ್ಮಿಬ್ಬರಿಗೂ ಅಭಿನ್ನವಾದ ಪತಿಪತ್ನಿರೂಪ ಮೈದಳೆದಿದೆ. ಇದೇ ಅಭಿಪ್ರಾಯವನ್ನು ಐ.ಬ್ರಾ.೩.೨೩, ಬೃ.ಉ.೧.೪.೨೦, ಆಶ್ವ.ಗೃ.ಸೂ.೧.೫೮ರಲ್ಲೂ ಕಾಣಬಹುದು. **'ಸಾ'** ಋಕ್, **'ಅಮ'** ಗಾನ ಈ ಎರಡರ ಸಂಬಂಧದಿಂದ ಸಾಮದ ನಿಷ್ಪತ್ತಿಯಾಗಿದೆ. **'ಸಾ'** ರೂಪೀ ಋಕ್‌ನೊಂದಿಗೆ **'ಅಮ'** ರೂಪೀ ಸ್ವರದ ಮೇಳದಿಂದಲೇ ಸಾಮತ್ವ ಸಿದ್ಧಿಯಾಗುತ್ತದೆಂದು ಬೃ.ಉ.೧.೩.೨೨ ತಿಳಿಸುತ್ತಿದೆ.

**ವಾಗೇವರ್ಕ್ ಪ್ರಾಣಃ ಸಾಮೋಮಿತ್ಯೇದಕ್ಷರ ಮುದ್ಗೀಥಃ । ತದ್ವಾ ಏತನ್ ಮಿಥುನಂ ಯದ್ವಾಕ್ ಚ ಪ್ರಾಣಶ್ಚರ್ಕ್ ಚ ಸಾಮ ಚ** - *ಛಾಂ.ಉ.೧.೧.೫* // ಆಧ್ಯಾತ್ಮಿಕ ದೃಷ್ಟಿಯಲ್ಲಿ ವಾಕ್ ಮತ್ತು ಪ್ರಾಣಗಳ ಘನಿಷ್ಟ ಸಂಬಂಧದಂತೆಯೇ ಋಕ್ ಮತ್ತು ಸಾಮದ ಸಂಬಂಧ ಮಿಥುನ ರೂಪದಲ್ಲಿ ಘನಿಷ್ಟವಾಗಿರುವುದನ್ನು ಚರ್ಚಿಸಿದ್ದಾರೆ. **ಚಕ್ಷುರೇವರ್ಗಾತ್ಮಾ ಸಾಮ ತದೇತದಸ್ಯಾಮೃಚ್ಯದ್ಯೂಢಂ ಸಾಮ ತಸ್ಮಾದೃಚ್ಯದ್ಯೂಢಂ ಸಾಮಗೀಯತೇ । ಚಕ್ಷುರೇವ ಸಾತ್ಮಾಮಸ್ತತ್ಸಾಮ** - ಛಾಂ.ಉ. ೧.೬.೨ನಲ್ಲಿ ಚಕ್ಷು ರೂಪ ಋಕ್ ಮೇಲೆ ಸಾಮರೂಪ ಆತ್ಮಾ ಅಧಿಷ್ಠಿತವಾಗಿದೆ ಎಂದು ಕಣ್ಣುಗಳಲ್ಲಿ 'ಸಾ' ಆತ್ಮನಲ್ಲಿ **'ಅಮ'** ದ ಭಾವನೆ ಮಾಡಲಾಗಿದೆ. ಶ್ರೋತ್ರಮೇವರ್ಙ್ಮನಃ ಸಾಮ । ತದೇತ್ ಸ್ಯಾಮೃಚ್ಯದ್ಯೂಢಂ ಸಾಮ, ತಾಸ್ಮಾದ್ಯಚ್ಯದ್ಯೂಢಂ ಸಾಮ ಗೀಯತೇ । ಶ್ರೋತ್ರಮೇವ ಸಾ ಮನೋಽಮಸ್ತತ್ಸಾಮ ಛಾಂ.ಉ. ೧.೬.೩. ಶ್ರೋತ್ರವೆಂಬ ಋಕ್‌ನಲ್ಲಿ ಮನಸ್ಸೆಂಬ ಸಾಮ ಅಧಿಷ್ಠಿತವಾಗಿದ್ದು ಋಕ್‌ನಲ್ಲಿ ಅಧಿಷ್ಠಿತವಾಗಿಯೇ ಸಾಮಗಾನವಾಗುತ್ತದೆ ಎಂದು ತಿಳಿಸಿದೆ.

**ಅಥಯದೇತದಕ್ಷ್ಣಃ ಶುಕ್ಲಂ ಭಾಃ ಸೈವರ್ಗಥಯನ್ನೀಲಂ ಪರಃ ಕೃಷ್ಣಂ ತತ್ಸಾಮ । ತದೇತದಸ್ಯಾಮೃಚ್ಯದ್ಯೂಢಂ ಸಾಮ ತಸ್ಮಾದ್ಯಚ್ಚದ್ಯೂಢಂ ಸಾಮ ಗೀಯತೇ । ಅಥ ಯದೇನ್ಯೆ ತದಕ್ಷ್ಣಃ ಶುಕ್ಲಂ ಭಾಃ ಸೈವ ಸಾಽಥ ಯನ್ನೀಲಂ ಪರಃ ಕೃಷ್ಣಂ ತದಮಸ್ತತ್ಸಾಮ** ಛಾಂ.ಉ.೧.೬.೪ ರಲ್ಲಿ ಕಣ್ಣಿನ ಪ್ರಕಾಶಮಾನವಾದ ಬಿಳಿಯ ಭಾಗವಾರ ಶುಕ್ಲವರ್ಣವೆಂಬ ಋಕ್‌ನಲ್ಲಿ ಕಣ್ಣಿನ ಶ್ಯಾಮಲವರ್ಣರೂಪವಾದ ಸಾಮ ಅಧಿಷ್ಠಿತವಾಗಿದೆ. ಅಂದರೆ ಕಣ್ಣಿನ ಶುಕ್ಲಪ್ರಕಾಶದಲ್ಲಿ 'ಸಾ' ವನ್ನೂ ಶ್ಯಾಮಲವರ್ಣದಲ್ಲಿ **'ಅಮ'** ವನ್ನೂ ಭಾವಿಸಲಾಗಿದೆ. ಛಾಂ.ಉ. ಪ್ರಥಮ ಅಧ್ಯಾಯ ೬ನೆಯ ಖಂಡದಲ್ಲಿ ಆಧಿದೈವಿಕ ದೃಷ್ಟಿಯಲ್ಲಿ ಋಕ್ ಮತ್ತು ಸಾಮದ ಅವಿನಾ ಸಂಬಂಧವನ್ನು ತಿಳಿಸುತ್ತಿರುವುದನ್ನೇ **'ಸಾಮ ಸಮ್ಮಿತ ಋಕ್'** ಎಂದು ನಿ.೭.೧೨ ತಿಳಿಸುತ್ತಿದೆ. ಋಗಕ್ಷರಗಳ ಮೇಲೆ ಕ್ರುಷ್ಟಾದಿ ಸಪ್ತಸ್ವರಗಳಿಂದ ಮೈದಳೆದಿರುವುದೇ ಸಾಮಗಾನ.

**ಛನ್ದಾರ್ಚಿಕ : ಋಚ್ ಸ್ತುತೌ** ಧಾತುವಿನಿಂದ **'ಋಕ್'** ಪದವಾಗಿದೆ. **ಪಾದೇನ ಅರ್ಥರ್ಚೇನ ಚ ಉಪೇತಾಃ ವೃತ್ತಬದ್ಧಾಃ ಮನ್ತ್ರಾಃ ಋಚಃ ॥ ನಿಯತಾಕ್ಷರಾವಸಾನಾ ಛನ್ದೋ ನಿಬದ್ಧಾ ಋಕ್ । ತೇಷಾಂ ಯತ್ರಾರ್ಥವಶೇನ ಪಾದ ವ್ಯವಸ್ಥಾ ಸಾ ಋಕ್ ॥** ಗಾಯತ್ರ್ಯಾದಿ ಛಂದಸ್ಸುಗಳ ನಿಯಮಿತಾಕ್ಷರಗಳಿಂದ ಕೂಡಿದ ಅರ್ಥವಶದಿಂದ ಪಾದ ವ್ಯವಸ್ಥೆ ಇರುವ ಮನ್ತ್ರವು ಋಕ್ ಎನಿಸುತ್ತವೆ. ಪ್ರಾಣದ ಸಂಕಲ್ಪದಿಂದ ಮನ್ತ್ರಗಳ ಮೂಲಕ ಪ್ರಕಾಶಿಸುವ ಕರ್ಮಗಳು ಫಲವನ್ನು ಕೊಡಲು ಸಮರ್ಥವಾಗುತ್ತವೆ. **ಸಾಮ್ನಿ ಮನ್ತ್ರಾ ಏಕಂ ಭವನ್ತಿ ಮನ್ತ್ರೇಷು ಕರ್ಮಾಣಿ** - *ಛಾಂ.ಉ. ೭.೨೧, ೭.೩.೫, ೭.೫.೧, ಮುಂ.ಉ. ೧.೨.೧* // ಮನ್ತ್ರ

ವಿಲ್ಲದೆ ಕರ್ಮವಿಲ್ಲ. ಮನ್ತ್ರಮಯವಾದ ಈ ಋಕ್‌ಗಳನ್ನು ಆಶ್ರಯಿಸಿಯೇ ಸಾಮಗಾನಗಳು ಉದಯವಾಗಿರುವುದರಿಂದ ಇವಕ್ಕೆ ಯೋನಿ ಋಕ್ ಅಥವಾ ಆಧಾರ ಋಕ್ ಎನ್ನುತ್ತಾರೆ. ಒಂದು ಋಕ್ಕಿನಿಂದಾದ ಸೂಕ್ತಕ್ಕೆ **'ಏಕರ್ಚ'** ವೆಂದೂ ಎರಡು ಋಕ್‌ಗಳಿಂದಾದ ಸೂಕ್ತಕ್ಕೆ **'ಪ್ರಗಾಥ'** ವೆಂದೂ ಮೂರು ಋಕ್‌ಗಳಿಂದಾದ ಸೂಕ್ತಕ್ಕೆ **'ತೃಚ'** ವೆಂದೂ ನಾಲ್ಕು ಋಕ್‌ಗಳಿರುವ ಸೂಕ್ತಕ್ಕೆ ಚತುರ್ಚ. ಹೀಗೆ ಪಂಚರ್ಚ ಷಡೃಚ ಸಪ್ತರ್ಚವೆಂದು ಪೂರ್ವಾಚಾರ್ಯರು ಗುರುತಿಸಿದ್ದಾರೆ. ಸಾಮವೇದದಲ್ಲಿರುವ ೧೮೭೫ ಋಕ್‌ಗಳ ಸಮೂಹಕ್ಕೆ **'ಛನ್ದಾರ್ಚಿಕ'** ವೆಂಬ ಅಭಿಧಾನವಿದೆ. ಇದನ್ನೇ ಸಾಮವೇದ ಸಂಹಿತೆ ಎಂದೂ ಕೆಲವರು ಲೋಕಾರೂಢಿಯಾಗಿ ಕರೆಯುತ್ತಾರೆ. ಗ್ರಾಮಗೇಯ ಅರಣ್ಯಗೇಯಗಳಿಗೆ ಆಧಾರವಾದ ೧-೬೪೦ ಋಕ್‌ಗಳು **'ಪೂರ್ವಾರ್ಚಿಕ'**ವೆಂದೂ ೬೪೧-೬೫೦ ಋಕ್‌ಗಳು **'ಮಹಾನಾಮ್ನ್ಯಾರ್ಚಿಕ'** ವೆಂದೂ, ಊಹ ಮತ್ತು ರಹಸ್ಯ ಗಾನಗಳಿಗೆ ಆಧಾರವಾದ ೬೫೧-೧೮೭೫ ಋಕ್‌ಗಳು **'ಉತ್ತರಾರ್ಚಿಕ'** ವೆಂದೂ ಪ್ರಸಿದ್ಧವಾಗಿವೆ. ಈ ೧೮೭೫ ಋಕ್‌ಗಳಲ್ಲಿ ೧೮೧೫ ಋಗ್ವೇದದ ಆಶ್ವಲಾಯನ ಶಾಖೆಯಲ್ಲೂ ೬೦ ಋಗ್ವೇದದ ಶಾಂಖ್ಯಾಯನ ಶಾಖೆಯಲ್ಲೂ ಪಠಿತವಾಗಿವೆ.

**ಪದಪಾಠ : ಛನ್ದಸಾಂ ಪರಿಜ್ಞಾನಾಯ ಪಾದವಿಜ್ಞಾನಮಾವಶ್ಯಕಂ - ಸಾಮವೇದಃ ಪದಾನ್ತಸ್ಯಾತ್ - ಇತಿ ಪದಪಾಠೋಪಿ ಅಧ್ಯೇತವ್ಯಃ ॥** ಮನ್ತ್ರಗಳ ಆನುಪೂರ್ವಿಯ ನಿಯತವಾದ ಶುದ್ಧರೂಪದ ರಕ್ಷಣೆಗಾಗಿ ಶಾಕಲ್ಯರೂ ಗಾರ್ಗ್ಯರೂ ರೂಪಿಸಿರುವ ಪದಪಾಠವನ್ನು ಪ್ರಾಚೀನರು ಕಾಪಾಡಿಕೊಂಡುಬಂದಿದ್ದಾರೆ. ಇದರಿಂದ ಸಂಸ್ಕೃತ ಬಲ್ಲವರು ತಮಗೆ ತೋರಿದ ಅಭಿಪ್ರಾಯಕ್ಕನುಕೂಲವಾಗುವಂತೆ ಪದಗಳನ್ನು ಬಿಡಿಸಿ ವಿಚಿತ್ರಾರ್ಥ ಗಳನ್ನು ಕಲ್ಪಿಸಿ ಮೂಲ ಅಭಿಪ್ರಾಯವೇ ಲೋಪವಾಗುವಂತೆ ಮಾಡುವ ಅವಕಾಶ ಕಡಿಮೆಯಾಗಿದೆ. ವೇದ ಮನ್ತ್ರಗಳು ಕ್ಲಿಷ್ಟವೂ ಅರ್ಥಗಳು ಗಹನವೂ ಆಗಿರುವ ಸಂಹಿತಾ ರೂಪದ ವಾಕ್ಯಗಳನ್ನು ಪ್ರಾತಿಪದಿಕ ಪ್ರತ್ಯಯ ಸಂಧಿ ಸಮಾಸಗಳ ರೂಪದಲ್ಲಿ ಬಿಡಿಸಿ ತೋರಿಸಿಕೊಡುವ ಈ ಪದಪಾಠ ಕ್ರಮವು ಅಧ್ಯಯನ ಅಧ್ಯಾಪನಗಳಲ್ಲಿ ನಿಖರತೆಯೂ ಸ್ಪಷ್ಟತೆಯೂ ಮೂಡಲು ಸಹಾಯಕವಾಗಿದ್ದು, ಮನ್ತ್ರಗಳ ಅರ್ಥಗಳನ್ನು ತಿಳಿಯಲು ಅನುಕೂಲವಾಗಿದೆ. ಒಂದೇ ಪದಕ್ಕೆ ಬೇರೆಬೇರೆ ಅರ್ಥಗಳಿರುವ ಸಂದರ್ಭದಲ್ಲಿ ಬೇರೆ ಬೇರೆ ಪದವಿಚ್ಛೇದವಿದ್ದು ಅರ್ಥವ್ಯತ್ಯಾಸವಾದಾಗ ಸ್ವರವ್ಯತ್ಯಾಸವಾಗಿರುವ ಅಂಶಗಳೂ ಶಾಖಾಂತರ ಪಾಠಗಳೂ ಪದಪಾಠದಿಂದ ಗೊತ್ತಾಗುತ್ತವೆ. ಪದವಿಭಾಗದ ಕ್ರಮದಲ್ಲಿಯೂ ಸ್ವರಘೋಷಣೆಯಲ್ಲಿಯೂ ಒಂದು ನಿರ್ದಿಷ್ಟವಾದ ಕ್ರಮವಿದೆ.

**ಮನ್ತ್ರೈಃ ಸರ್ವೈಃ ಪದ್ಯೈರ್ವ್ಯಾಪ್ತಾ ವಾಕ್ಯಭಾವಾತ್ಪದಾನಿ ಚ ।**
**ವರ್ಣೈಃ ವರ್ಣಸಮೂಹಂ ಹಿ ಪದಮಾಹುರ್ವಿಪಶ್ಚಿತಃ ॥**

*ಶಿ.ಪು. ವಾಯವೀಯ ಸಂಹಿತೆ ೨೯.೧೩ ॥*

**ಪದವಿಚ್ಛೇದೋಽಸಂಹಿತಃ** - ಪ್ರಾತಿಶಾಖ್ಯ - ಕಾತ್ಯಾಯನ. ಮನ್ತ್ರಗಳೆಲ್ಲವೂ ಪದ ಗಳಿಂದ ಸಮೃದ್ಧವಾಗಿವೆ. ವಾಕ್ಯರೂಪದಿಂದಿರುವ ಅಕ್ಷರಸಮೂಹಗಳು ಯಾವುದಾದರೂ ಅರ್ಥವನ್ನು ಸೂಚಿಸಿದರೆ ಅದನ್ನು ಪದವೆನ್ನುತ್ತಾರೆ.

**ಪದಮೇವ ಹಿತಂ ನಿತ್ಯಮನಿತ್ಯಾಃ ಪದಿನಃ ಸ್ಮೃತಾಃ ।**
**ಪದಾನಾಂ ಪರಿವೃತ್ತಿಃ ಸ್ಯಾನ್ಮುಚ್ಯಂತೇ ಪದಿನೋ ಯತಃ ॥**

*ಶಿ.ಪು. ೯.೪, ಕೈಲಾಸ ಸಂಹಿತೆ.*

ಪದವು ಯಾವಾಗಲೂ ನಿತ್ಯವಾದದ್ದು, ಪದಗಳ ಅರ್ಥ ಅನಿತ್ಯ. ಪದವ್ಯಂ ಜನದ ಶಕ್ತಿ ಶಬ್ದಾರ್ಥಗಳ ತಾದಾತ್ಮ್ಯವನ್ನವಲಂಬಿಸಿದ್ದು, ಪದಗಳ ಬದಲಾವಣೆಯಿಂದ ಪದಗಳ ಅರ್ಥ ಬದಲಾಗುತ್ತದೆ. ಇಲ್ಲಿ ಗಮನಿಸಬೇಕಾದುದು ಪದವೊಂದೇ ಅಲ್ಲ ಪದವಿಯನ್ನೂ ಸಹ, ಇದರಿಂದ ವಸ್ತು ರೀತಿ ಸಾರ ಸ್ವರೂಪ ಅಕ್ಷರಗಳಿಗಿರುವ ನಂಟು ಅರ್ಥಗಳನ್ನು ಸಮಗ್ರವಾಗಿ ಚಿಂತಿಸಲು ಅನುಕೂಲವಾಗುತ್ತದೆಯಾದುದರಿಂದ ಪದಪಾಠದ, ಅಧ್ಯಯನ ವನ್ನು ಮಾಡಿಯೇ ತೀರಬೇಕೆಂಬ ಪರಂಪರೆ ಇದೆ.

**ಸಾಮಗಾನ ಸಂಹಿತೆ : ಗೀತಿಷು ಸಾಮಾಖ್ಯಾ** - ಜೈ.ಸೂ. ೨.೧೩೬ ॥ವೇದಮನ್ತ್ರಗಳ ಗಾನ ಸಂಜ್ಞೆಯೇ ಸಾಮ. ಕೇವಲ ಮನ್ತ್ರ ಪಠನವಾಗಲೀ ಕೇವಲ ಗಾನವಾಗಲೀ ಸಾಮವಲ್ಲ. **'ಋಚ್ ಸ್ತುತೌ'** ಗಾನರೂಪವಾದ ಮನ್ತ್ರಗಳೇ ಸಾಮ. **ಗಾನಾರ್ಥಂ ಗೃಹೀತಾ ಋಕ್ ಸಾಮ । ಗೀತರೂಪಾಃ ಮನ್ತ್ರಾಃ ಸಾಮಾನಿ । ಚಿತ್ತಿಃ ಸ್ರುಕ್ .... ಸಾಮಾಧ್ವರ್ಯುಃ ॥** ತೈ.ಆ. ೩.೧. ॥ **ಸಾಮ ಶಬ್ದೇನ ಅಧ್ಯೇತುರ್ವರ್ಣೋಚ್ಚಾರಣ ಶಕ್ತಿರುಚ್ಯತೇ ॥** ಯಜ್ಞವು ಸಾಂಗವಾಗಿ ನೆರವೇರಲು ಅಧ್ವರ್ಯುವಿನ ಅವಶ್ಯಕತೆ ಇರುವಂತೆಯೇ ಸೃಷ್ಟಿರೂಪಿ ಅಧ್ವರಕ್ಕೆ ಯಜ್ಞಕ್ಕೆ ತಪ್ಪೋಽರೂಪವಾದ **'ಸಾಮದ'** ಅವಶ್ಯಕತೆ ಇದೆ. ಋಕ್ ಗಾನಯುಕ್ತವಾದಾಗ ಅರ್ಥವನ್ನು ಗಾನದಲ್ಲಿ ಕಾಣಬೇಕೇ ಅಥವಾ ಋಕ್ಕಿನಲ್ಲಿ ಕಾಣಬೇಕೇ ಎಂಬ ಜಿಜ್ಞಾಸೆ - ತಾಂ.ಮ.ಬ್ರಾ. ೧೫.೧೦.೧ರಲ್ಲಿ ನಡೆದಿದೆ - ಉದಾಹರಣೆಗಾಗಿ ರಥನ್ತರ ಗಾನವನ್ನು ಆರ. ೩೬, ಮಾಡೋಣವಾಗಲಿ ಎಂದಾಗ ಸ್ವರಸ್ತೋಭ ಭಕ್ತಿ ಆದಿ ಪರಿಕರಗಳಿಂದಲಂಕೃತವಾದ

**ಅಭಿತ್ವಾಶೂರನೋ** - ಋ. ೨೩೩ನ್ನು ಗಾನಮಾಡುತ್ತಾರೆಯೇ ವಿನಹ ಕೇವಲ ಸ್ವರ ಸ್ತೋಭ ಭಕ್ತಿಗಳನ್ನಾಗಲೀ ಕೇವಲ ಋಕ್ಕನ್ನಾಗಲೀ ಗಾನ ಮಾಡುವುದಿಲ್ಲ. ಹೀಗಾಗಿ ರಥನ್ತರ ಶಬ್ದಾರ್ಥವು ಗಾನ ವಿಶಿಷ್ಟವಾದ ಋಕ್ ಎನ್ನಬೇಕಾದರೆ ಋಗಾಕ್ಷರಗಳಿಂದ ಬೇರೆಯಾದ ಸ್ವರಸ್ತೋಭಾದಿ ಅಪೂರ್ವ ಪರಿಕರಗಳಿಂದ ಅಲಂಕೃತವಾಗಿ ಮನವನ್ನು ಮುಟ್ಟಿ ತಟ್ಟಿ ವಿಲಕ್ಷಣ ಪರಿಣಾಮವನ್ನು ಬೀರುವ ಸ್ವಾಂತಃ ಸುಖಕ್ಕೂ ಶಾನ್ತಿಗೂ ಕಾರಣವಾಗುವ ಆನುಪೂರ್ವೀಸ್ವರೂಪದ ಗಾನವೇ ರಥನ್ತರ ಸಾಮದ ಶಬ್ದಾರ್ಥ ಎಂಬುದೇ ಸರಳ ವಿವರಣೆಯಾಗಿರುತ್ತದೆ - ಜೈ.ನ್ಯಾ.ವಿ. ೭.೨.೧. ॥

**ಸರ್ವೇಷಾಂ ವಾ ಏಷ ವೇದಾನಾಂ ರಸೋಯತ್ಸಾಮ** - *ಶತಪಥ ೧೨.೮.೩,೨೩,* **ಸಾಮವೇದ ಏವ ಪುಷ್ಪಂ** - *ಛಾಂ. ೩.೩.೧.* ಇತ್ಯಾದಿ ಶ್ರುತಿಸ್ಮೃತಿ, ಇತಿಹಾಸ, ಪುರಾಣಗಳ ಹೊಗಳಿಕೆಗೆ ಪಾತ್ರವಾಗಿರುವ **ಸಾಮಗಾನ** ವೇದರಾಶಿಗೇ ಅಪೂರ್ವವಾದ ದೈವಿಕ ಧ್ವನಿಯನ್ನು ನೀಡಿದೆ. ವೇದ ಸಮುದ್ರದ ಅಂತರಂಗ ವೈಭವವನ್ನು ಪ್ರಕಟಿಸುವ ಉತ್ತುಂಗ ತರಂಗಗಳೇ ಈ ಸಾಮಗಾನಗಳು. ಸಾಮಗಾನದ ಅಪೂರ್ವ ಸ್ವರವಿನ್ಯಾಸಗಳಿಂದ ಉದಯವಾಗುವ ಧ್ವನಿಶಕ್ತಿಯು ಶಬ್ದಾತೀತವಾದ ಆನಂದವನ್ನು ಅನುಭವ ಮಾಡಿಕೊಡುತ್ತದೆ - **ಅನಾಹತಸ್ಯ ಶಬ್ದಸ್ಯ ತಸ್ಯ ಶಬ್ದಸ್ಯ ಯೋ ಧ್ವನಿಃ । ಧ್ವನಿರಂತರ್ಗತಂ ಜ್ಯೋತಿಃ ಜ್ಯೋತಿರನ್ತರ್ಗತಂ ಮನಃ ॥ ಉನ್ಮನೋ ವಿಲಯಂ ಯಾನ್ತಿ ತದ್ವಿಷ್ಣೋಃ ಪರಮಂ ಪದಂ ॥** ಸಾಮಗಾನವು ಆ ಪರಮಪದವನ್ನು ನಮ್ಮದನ್ನಾಗಿಸುತ್ತದೆ. **ದೈವೀವಾಕ್** ನ ಪ್ರಬಲಶಕ್ತಿಯೂ ಸಂಗೀತದ ಲಯಬದ್ಧವಾದ ಇಂಪೂ ಸಾಮಗಾನದಲ್ಲಿ ಹಿತಮಿತವಾಗಿ ಮಿಳಿತವಾಗಿದ್ದು ನಾದಾನುಸಂಧಾನಕ್ಕೆ ಸಹಾಯಕವಾಗಿ ಸಾಧಕನನ್ನೂ ಶ್ರೋತೃವನ್ನೂ ಮನ್ತ್ರಪೂತರನ್ನಾಗಿ ಮಾಡಿ ಧನ್ಯರನ್ನಾಗಿಸುತ್ತದೆ. '**ಯುದ್ಧ ವೈ ಶಿವಂ ಶಾನ್ತಂ ವಾಚಸ್ತತ್ಸಾಮ**' ಕಲ್ಯಾಣಕರವೂ, ಶಾಂತವೂ, ಆದ ವಾಣಿಯ ರೂಪವೇ ಸಾಮ, ಇದರ ಕಡೆಗೆ ಪ್ರವೃತ್ತಿಯಾಗುವುದರಿಂದಲೇ '**ಶಿವಮ್**' '**ಶಾನ್ತಿ**' ನಮಗೆ ಹತ್ತಿರವಾಗುವುದು. ಸಾಮಗಾನದ ನಿಜಸ್ವರೂಪವನ್ನು ತಿಳಿ ದವನು ಅಮೃತತತ್ತ್ವವನ್ನು ಪಡೆಯುತ್ತಾನೆ.

ಪಶುಗಳಿಗೆ ಹಿತವೂ ಗಂಭೀರವೂ ಆದ ಯಜಮಾನನಾಗಲಿ ಉದ್ಗಾತೃವಾಗಲಿ ಗಾನ ಮಾಡುವ ಉದ್ಗಾನವು ಅಗ್ನಿದೇವತಾ ಸಂಬಂಧವಾದುದು. ಇಂತಹುದಕ್ಕೆ ಸಮವಾದು ದೆಂಬ

ವಿಶೇಷವಿಲ್ಲದ ಅನಿರುಕ್ತ ಗಾನವು ಪ್ರಜಾಪತಿ ದೇವತಾ ಸಂಬಂಧವಾದುದು. ಸ್ಪಷ್ಟವಾದ ನಿರುಕ್ತಗಾನವು ಸೋಮದೇವತಾ ಸಂಬಂಧವಾದುದು. ಮೃದುವೂ ಕೋಮಲ ವೂ ಆದುದು ವಾಯುವಿನದು ಕೋಮಲವೂ ಪ್ರಯತ್ನ ಸಾಧ್ಯವಾದುದು ಇಂದ್ರನದು. ಕ್ರೌಂಚ ಪಕ್ಷಿಯ ಧ್ವನಿಗೆ ಸಮಾನವಾದ ಗಾನವು ಬೃಹಸ್ಪತಿಯದು. ಒಡೆದ ಕಂಚಿನಂತಿರುವ ವರುಣ ಸಂಬಂಧವಾದ ಧ್ವನಿಯನ್ನು ಬಿಟ್ಟು ಉಳಿದೆಲ್ಲವನ್ನೂ ಉಪಯೋಗಿಸಬೇಕು. ದೇವತೆಗಳಿಗೆ ಅಮೃತವನ್ನೂ, ಪಿತೃಗಳಿಗೆ ಸ್ವಧೆಯನ್ನೂ, ಮನುಷ್ಯನಿಗೆ ಅವನ ಇಷ್ಟಾರ್ಥ ಗಳನ್ನೂ, ಪಶುಗಳಿಗೆ ಹುಲ್ಲು ನೀರನ್ನೂ, ಯಜಮಾನನಿಗೆ ಸ್ವರ್ಗಲೋಕವನ್ನೂ ನನಗೆ ಅನ್ನ ವನ್ನೂ ಸಾಮಗಾನದ ಮೂಲಕ ಸಾಧಿಸುವೆನೆಂದು ಸ್ವರ, ಊಷ್ಮ, ವ್ಯಂಜನಗಳ ಉಚ್ಚಾರದಲ್ಲಿ ಜಾಗ ರೂಕನಾಗಿ ಸ್ತುತಿಸಬೇಕು. ಸಾಧಕನ ಐಹಿಕ ಆಮುಷ್ಮಿಕ ಆಸೆ ಆಕಾಂಕ್ಷೆಗಳನ್ನು ಪೂರ್ಣಗೊಳಿಸಿ **ಪರಬ್ರಹ್ಮ** ವನ್ನು ಪಡೆಯುವ ಉತ್ಕೃಷ್ಟ ಸಾಧನವೇ ಸಾಮಗಾನ' ವೆಂದು ಛಾಂದೋಗ್ಯಾದಿ ಉಪನಿಷತ್ತುಗಳು ಘೋಷಿಸುತ್ತಿವೆ - *ಛಾಂ. ಉ. ೨.೨೨.೧,೨.*

ಸಾಮಗಾನಾಧ್ಯಯನದ ಧ್ಯೇಯ ಉದ್ದೇಶ ಫಲಪ್ರಾಪ್ತಿಗಳಿಗನುಗುಣವಾದ ಕೆಲವು ವಿಶಿಷ್ಟ ಗಾನ ಪ್ರಕಾರಗಳನ್ನು ಸಂ.ಉ.ಬ್ರಾ. ಪ್ರಥಮ ಖಂಡದಲ್ಲಿ ಹೆಸರಿಸಿ ವಿವರಿಸಿದ್ದಾರೆ. ಯಾರಿಗೂ ಕೇಳಿಸದಂತೆ ಸಮಸ್ತ ಜನರಿಂದ ಮರೆಯಾಗಿ ಸಮಸ್ತರ ಹಿತಕ್ಕಾಗಿ ಬ್ರಹ್ಮಲೋಕ ಪ್ರಾಪ್ತಿಗಾಗಿ ಉಪಾಂಶುವಾಗಿ ಸಾಮಗಾನಾಧ್ಯಯನ ಮಾಡುವುದು. ಪರೋಕ್ಷಪ್ರಿಯರಾದ ದೇವತೆಗಳಿಗೆ ಮುದವನ್ನುಂಟು ಮಾಡುವಂತಹದಾಗಿದ್ದು **'ಸರ್ವಪರೋಕ್ಷಾ ದೇವ ಸಂಹಿತಾ'** ಎನಿಸುತ್ತದೆ. ಪರಮಾರ್ಥಪ್ರಾಪ್ತಿಗಾಗಿ ಪರೋಕ್ಷದಲ್ಲಿ ಏಕಾಂತದಲ್ಲಿ ಸ್ವಧರ್ಮ ಪ್ರಾಪ್ತ ಅಧ್ಯಯನದಲ್ಲಿ ನಿರತರಾಗಿದ್ದು ಅವಕಾಶವಾದಾಗ ಸ್ವಧರ್ಮನಿರತರೂ ಶಾಸ್ತ್ರ ಪಾರಂಗತರೂ ಋಷಿತುಲ್ಯರೂ ಆದವರ ಸಮಕ್ಷಮದಲ್ಲೂ ಶಾಸ್ತ್ರಪ್ರಾಪ್ತವಾದ ಗಂಗಾದಿ ತೀರ್ಥ ಕ್ಷೇತ್ರಗಳಲ್ಲೂ ವಿಧಿಪೂರ್ವಕವಾದ ಯಜ್ಞಸಿದ್ಧಿ ಗಾಗಿಯೂ **ಮಧ್ಯಮಸ್ವರದಲ್ಲಿ** ನೆರವೇರಿಸುವ ಸಾಮಗಾನಾಧ್ಯಯನವು ಋಷಿಗಳನ್ನು ಸಂತೋಷಗೊಳಿಸಿ ಬ್ರಹ್ಮವರ್ಚಸ್ಸಿಗೆ ಕಾರಣವಾಗಿದ್ದು, **ಪರೋಕ್ಷಪ್ರತ್ಯಕ್ಷರ್ಷಿ ಸಂಹಿತಾ** ಎನಿ ಸುತ್ತದೆ. ದೀನತೆ ಇಲ್ಲದೆ ಹ್ರಸ್ವ ದೀರ್ಘ ಪ್ಲುತಭೇದಗಳ ನ್ಯೂನಾತಿರಿಕ್ತ ದೋಷ ರಹಿತವಾಗಿರುವ ಅಂದರೆ **ಸಂಪೂರ್ಣ** ವೆನಿಸಿದ ಆ ಸ್ಥಾನದಲ್ಲಿ ಉಚ್ಛ್ವಾಸ ವಿಚ್ಛೇದ ರಹಿತ ಅಂದರೆ **ಸಂಸೃಷ್ಟ**ವೆನಿಸಿದ, ತದೇಕ ಚಿತ್ತವಾದ ಅಂದರೆ **ಸಂಯತ**ವೆನಿಸಿದ ವಾಕ್‌ನಿಂದ ಮನ್ದರಾನ್ತರ್ಭೂತವಾದ **ಮಧ್ಯಮ** ಸ್ವರದಲ್ಲಿ ಪಠಿತವಾಗುವ **ಸ್ತುತಿರೂಪ**ವೆನಿಸಿದ ಗಾನಗಳು ಇನ್ದ್ರಾದಿ ದೇವತೆಗಳನ್ನೂ

ಆಹ್ವಾನಿಸಿ ಸಂತೋಷಪಡಿಸುವುದಾಗಿದ್ದು ಪುತ್ರಪೌತ್ರಹಿರಣ್ಯಾದಿ ಸಮೃದ್ಧಿಯನ್ನು ತರುವುದೂ ಸ್ವರ್ಗಪ್ರದವೂ ಆಗಿದ್ದು, **ದೇವಹೂಃ ಸಂಹಿತೆ** ಎನಿಸುತ್ತದೆ.

ಅಶನ ವಸನ ಪಶು ಆದಿ ಪ್ರತ್ಯಕ್ಷವಾದ ಐಹಿಕ ಫಲಾಪೇಕ್ಷೆಯಿಂದ ಎಲ್ಲರೂ ಕೇಳುವಂತೆ ಸಮಸ್ತ ಸಮಾಜದ ಸಮಕ್ಷಮದಲ್ಲಿ **ಉಚ್ಚಸ್ವರದಲ್ಲಿ** ಸಾಮಗಾನ ಮಾಡುವುದು. **ಸರ್ವಪ್ರತ್ಯಕ್ಷ ಪಶವ್ಯಾಸುರ ಸಂಹಿತಾ** ಎನಿಸಿದ್ದು ರಾಕ್ಷಸತ್ವ ಹಾಗೂ ಪಶುತ್ವಪ್ರದವಾದುದು. ಆಕ್ರಂದ ಆಕ್ರೋಶ ಸಹಿತವಾಗಿ ಬಹು ದೀರ್ಘಸ್ವರದಿಂದ ಮಾಡುವ ಸಾಮಗಾನಾಧ್ಯಯನವು **ಅಮಿತ್ರಹೂ ಸಂಹಿತಾ** ಎನಿಸಿದ್ದು ಪುಂಡರು ಪೋಕರು ಕಳ್ಳಕಾಕರಾದಿ ಹಿಂಸಾನಿರತರನ್ನು ಆಹ್ವಾನಿಸಿ ಮೃತ್ಯುಸಮಾನ ಫಲದಾತೃವಾಗಿದ್ದು ತ್ಯಾಜ್ಯವಾದದ್ದು. ಮಾತನಾಡುವ ಧಾಟಿಯಲ್ಲಿ ಪ್ರಲಾಪಿಸುತ್ತಾ ಅಸ್ಪಷ್ಟಾಕ್ಷರಗಳಿಂದ ಕ್ಷೀಣಸ್ವರದಲ್ಲಿ ಪಠಿತವಾಗುವ ಸಾಮಗಾನಾಧ್ಯಯನವು **ವಾಕ್‌ಶಬಹೂಃ ಸಂಹಿತಾ** ಎನಿಸಿದ್ದು ಬಹು ನಿಕೃಷ್ಟವಾದುದಾಗಿದ್ದು ತಿರಸ್ಕರಿಸತಕ್ಕುದಾಗಿದೆ.

ಸಾಮಗಾನ ಸಂಹಿತೆಯು ಗ್ರಾಮಗಾನ, ಅರಣ್ಯಗಾನ, ಮಹಾನಾಮ್ನೀಗಾನ ಊಹಗಾನ ಮತ್ತು ರಹಸ್ಯಗಾನವೆಂಬ ಅಭಿಧಾನಗಳಿಂದ ವಿಭಕ್ತವಾಗಿ ಸಾಧಕನನ್ನು ಆಕರ್ಷಿಸುತ್ತಿದೆ. ಸಾಮಸಂಹಿತೆಯ ಸ್ವರೂಪವನ್ನು ಈ ಪಟ್ಟಿಕೆಯು ಸ್ಪಷ್ಟಪಡಿಸುತ್ತದೆ.

**ಅಕ್ಷರಗಳು ವರ್ಣಗಳು :** ಭಗವಂತನು ಸ್ವಯಂ ಅಮೃತಮಯನಾಗಿದ್ದು ವೇದಮೂರ್ತಿಯಾಗಿದ್ದಾನೆ. ಪ್ರಾಣವು ಅವನ ಉಪಾಧಿಯಾಗಿದ್ದು ಅನಾಹತನಾದವಾಗಿ ಅಭಿವ್ಯಕ್ತಗೊಳ್ಳುತ್ತದೆ. ಜೇಡರಹುಳು ತನ್ನ ಬಾಯಿನ ಜೊಲ್ಲಿನಿಂದ ಬಲೆಯನ್ನು ಕಟ್ಟಿಕೊಂಡು ಪುನಃ ಅದೇ ಬಲೆಯನ್ನು ತಾನೇ ನುಂಗುವಂತೆ **ಸ್ವರ ಸ್ಪರ್ಶಾ** ದಿ ಅಕ್ಷರಗಳನ್ನು ಸಂಕಲ್ಪಿಸುವ ಮನರೂಪೀ ನಿಮಿತ್ತ ಕಾರಣದಿಂದ ಹೃದಯಾಕಾಶದಲ್ಲಿ ಅನನ್ತವಾದ ಅಪಾರವಾದ ಅನೇಕ ಮಾರ್ಗಗಳಲ್ಲಿ ವೇದವಾಣಿಯನ್ನು ವೈಖರೀ ರೂಪದಲ್ಲಿ ಸ್ವತಃ ಪ್ರಕಟಿಸುತ್ತಲೂ ತನ್ನಲ್ಲೇ ಲೀನ ಗೊಳಿಸುತ್ತಲೂ ಇರುತ್ತಾನೆ. ಈ ವೇದವಾಣಿಯು ಹೃದ್ಗತವಾದ ಸೂಕ್ಷ್ಮವಾದ **ಓಮ್** ಕಾರದ ಮೂಲಕ ಅಭಿವ್ಯಕ್ತವಾಗುವ **ಅ** ಯಿಂದ **ಔ** ವರೆಗಿನ ಒಂಬತ್ತು ಸ್ವರ ಗಳಿಂದಲೂ **ಕ್** ಯಿಂದ **ಮ್** ವರೆಗಿನ ಇಪ್ಪತ್ತೈದು **ಸ್ಪರ್ಶ** ಗಳಿಂದಲೂ, **ಯರಲವ** ಎಂಬ ಅಂತಸ್ಥಗಳಿಂದಲೂ **ಶ.ಷ.ಸ.** ಎಂಬ **ಊಷ್ಮ** ಗಳಿಂದಲೂ ವಿಜೃಂಭಿಸುತ್ತಿದೆ - ಭಾ. ೧೧.೨೧.೩೭-೪೧.


ಸಾಮವೇದ ಸಂಹಿತೆ
ಆರ್ಚಿಕ / ಋಕ್
ಸಾಮಗಾನ
ಪೂರ್ವಾರ್ಚಿಕ ಮಹಾನಾಮ್ನೀ
ಉತ್ತರಾರ್ಚಿಕ
ಪದ
ಛಂದಃಪದ
ಸ್ತೋಭಪದ
ಪ್ರಕೃತಿ
ವಿಕೃತಿ
ಗ್ರಾಮೇಗೇಯ
ಗಾಯತ್ರ
ಆಗ್ನೇಯಕಾಂಡ
ಐನ್ದ್ರಕಾಂಡ
ಪಾವಮಾನಕಾಂಡ
ಅರಣ್ಯೇಗೇಯ
ಅರ್ಕಪರ್ವ
ದ್ವನ್ದ್ವಪರ್ವ
ವ್ರತಪರ್ವ
ಶುಕ್ರಿಯಪರ್ವ
ಮಹಾನಾಮ್ನೀಪರ್ವ
ಊಹಗಾನ
ಗ್ರಾಮೇಗೇಯಸ್ಯ
ಊಹ
ರಹಸ್ಯಗಾನ
ಅರಣ್ಯಸ್ಯ
ಊಹ್ಯ
ಸಪ್ತಗಾನಾತ್ಮಕ
ಸಪ್ತತನ್ತ್ರಾತ್ಮಿಕ
೧) ಗಾಯತ್ರ
೨) ಆಗ್ನೇಯ
೩) ಐನ್ದ್ರ
೪) ಪಾವಮಾನ
೫) ಅರ್ಕದ್ವನ್ದ್ವ ವ್ರತಪರ್ವ
೬) ಶುಕ್ರಿಯ
೭) ಮಹಾನಾಮ್ನೀ
೧) ದಶರಾತ್ರಪರ್ವ
೨) ಸಂವತ್ಸರಪರ್ವ
೩) ಏಕಾಹಪರ್ವ
೪) ಆಹೀನಪರ್ವ
೫) ಸತ್ರಪರ್ವ
೬) ಪ್ರಾಯಶ್ಚಿತ್ತಪರ್ವ
೭) ಕ್ಷುದ್ರಪರ್ವ

**ಅಕ್ಷರಂ ಬ್ರಹ್ಮ ಪರಮಂ .... ॥** *ಭ.ಗೀ. ೮.೩* // **ಅಕ್ಷರಾಣಾಂ ಅಕಾರೋಽಸ್ಮಿ .... ॥** *ಭ.ಗೀ. ೧೦.೩೩* // **ಕೂಟಸ್ಥೋಽಕ್ಷರ ಉಚ್ಯತೇ ॥** *ಭ.ಗೀ. ೧೫.೧೬* // **ಏಕಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ॥** *ಬೃ.ಉ.* // **ಅಕಾರೋ ವೈ ಸರ್ವಾ ವಾಕ್ ಶ್ರುತಿ ॥ ಅಕ್ಷರಾಣಾಂ ವರ್ಣಾನಾಂ ಅಕಾರೋ ವರ್ಣೋ ಅಸ್ಮಿ । ಅಕ್ಷರಂ ನ ಕ್ಷರತೀತಿ ಪರಮಾತ್ಮಾ ॥** ಕ್ಷರಾತ್ಮಕವಾದ ನಾದವನ್ನು ಲಿಪಿಬದ್ಧ, ಮಾಡಿದಾಗ ಮೂಡುವ ಆಕೃತಿಗಳನ್ನೂ ಚಿಹ್ನೆಗಳನ್ನೂ ಅಕ್ಷರ ವೆನ್ನುತ್ತಾರೆ. ಈ '**ಅಕ್ಷರ**' ಪದವನ್ನು ವರ್ಣ ಅಥವಾ ಧ್ವನಿಯಾಗಿ ವಿಂಗಡಿಸಿದಾಗ **ಅ+ಕ್+ಷ್+ಅ+ರ್+ಅ** ಎಂಬ ಆರು ಧ್ವನಿಗಳ ಸಮಾಮ್ನಾಯವಾಗುತ್ತದೆ. ಈ ಆರು ಧ್ವನಿ ಗಳಿಂದಲೇ ಸಂಪೂರ್ಣವಾದ ಸ್ವರ ವ್ಯಂಜನ ಯೋಗವಾಹಗಳನ್ನೇ ಸಾಂಕೇತಿಕವಾಗಿ ನಿರೂಪಿಸಿದಂತಾಗುತ್ತದೆ. ಸ್ವರ ಅಥವಾ ಸ್ವರ ಸೇರಿರುವ ವ್ಯಂಜನವು ಒಂದು ಪೂರ್ಣಾಕ್ಷರ ವಾಗಿರುತ್ತದೆ ಎಂಬ ಅರ್ಥದಲ್ಲೇ '**ಅಕ್ಷರ**' ಶಬ್ದದ ಬಳಕೆ ಯಾಗಿರುವುದನ್ನು ಗಮನಿಸ ಬೇಕು. ಅರೆಯಕ್ಷರಗಳಾದ ಕ್, ಷ್ ಎಂಬ ಮೂಲ ರೂಪದಲ್ಲಿರುವ ವ್ಯಂಜನಗಳು. ಅಕ್ಷರ ವೆನಿಸದೆ '**ವರ್ಣ**' ಎಂದೇ ಗಣಿಸಲ್ಪಟ್ಟಿವೆ. **ಅಕ್ಷೀಣಿ ರಮಂತೇ ಯಸ್ಮಿನ್ ।** ನೇತ್ರ ರಮಣೀಯ ತೆಯೇ - ಅಕ್ಷರದ ಮುಖ್ಯ ಲಕ್ಷಣ.

**ಸ ಏಕೋ ಅವರ್ಣೋ ಬಹುಧಾಶಕ್ತಿಯೋಗಾತ್ ವರ್ಣಾನನೇಕಾನಿಹಿತಾರ್ಥೋ ದಧಾತಿ ॥ ವರ್ಣ್ಯತೇ ದೀಪ್ಯತೇ ಅನೇನೇತಿ ವರ್ಣಃ** - ಕಣ್ಣಿಗೆ ಹೊಳೆದು ಕಾಣುವುದು. ಅಂದರೆ ರೂಪ. ಮೂಲತಃ ರೂಪ ರಹಿತವಾಗಿ ಧ್ವನಿಯುಕ್ತವಾಗಿ ಕಿವಿಗೆ ಕೇಳಿಸಿ ಮನಸ್ಸಿಗೆ ಗೋಚರಿಸುವ ವಿಚಾರದ ಚಾಕ್ಷುಷ ರೂಪವು ವರ್ಣವೆನಿಸುತ್ತದೆ. ಇದು ಅಕ್ಷರೋಚ್ಚಾರ ಣೆಯ ಕೇವಲ ಏಕಧ್ವನಿ. ಅಂದರೆ ಬೇರ್ಪಡಿಸಲು/ ಬಿಡಿಸಲು ಸಾಧ್ಯವಾಗದ ಕೇವಲ ಮೂಲ ಘಟಕವಾದ ಏಕಧ್ವನಿಯ ಲಿಖಿತ ರೂಪವನ್ನು **ವರ್ಣ**ವೆನ್ನುತ್ತಾರೆ. ಇದನ್ನು ಬಿಡಿಸಿ ನೋಡಿದಾಗ **ವ್+ಅ+ರ್+ಅ+ಣ್+ಅ** ಎಂಬ ಆರು ಮೂಲಧ್ವನಿಗಳಿಂದ **ವರ್ಣ** ಎಂಬ ಎರಡು ಅಕ್ಷರದ ಒಂದು ಶಬ್ದವಾಗಿದೆ. ಪ್ರಪಂಚದ ಭಾಷೆಗಳಲ್ಲೆಲ್ಲಾ **ಬಹುಸಮರ್ಪಕ ವಾದುದು. ವೈಜ್ಞಾನಿಕವಾದುದು** ಎಂಬ ಹೆಗ್ಗಳಿಕೆಯನ್ನು ಪಡೆದಿರುವ ಕನ್ನಡ/ ಸಂಸ್ಕೃತ ಭಾಷೆಯನ್ನು ಉಚ್ಚರಿಸುವ ಧ್ವನಿಗೆ ಸ್ವಲ್ಪವೂ ವ್ಯತ್ಯಯವಾಗದಂತೆ ಪ್ರತಿಧ್ವನಿಗೂ ರೂಪಿತ ವಾಗಿರುವ ಲಿಪಿ ಪದ್ಧತಿಯು ಅಕ್ಷರಾತ್ಮಕ ವಾಗಿರುವುದರಿಂದಲೇ 'ಕ' ವನ್ನು **ಕ್+ಅ** ಎಂದು ಇಂಗ್ಲಿಷ್ ಭಾಷೆಯಂತೆ ಬಿಡಿಬಿಡಿಯಾಗಿ ಬರೆಯದೆ, ಒಂದಕ್ಷರವಾಗಿಯೇ ಬರೆಯುತ್ತೇವೆ, ಉಚ್ಚರಿಸುತ್ತೇವೆ. **ಅಕ್ಷರ** ಎಂಬುದು ಭಾರತೀಯ ಭಾಷೆಗಳ ಲಕ್ಷ್ಯ ಲಕ್ಷಣಗಳೆರಡೂ ಆಗಿದೆ, ಆದುದರಿಂದಲೇ ಭಾರತೀಯ ಭಾಷೆಯ ಲಿಪಿ ಚಿಹ್ನೆಗಳನ್ನು ಆಲ್ಫೋಬೆಟ್ - ವರ್ಣಮಾಲೆ ಎನ್ನದೆ, **ಅಕ್ಷರಮಾಲೆ** ಎಂದೇ ಕರೆಯುತ್ತೇವೆ.

ಪಾಣಿನೀಯ ಶಿಕ್ಷಾ ವರ್ಣಗಳು ೬೩ಎಂದೂ, ವ್ಯಾಸ ಶಿಕ್ಷಾ ೬೬ ವರ್ಣಗಳೆಂದೂ, ಪ್ರಾತಿಶಾಖ್ಯಾದಲ್ಲಿ ೫೯ ವರ್ಣಗಳೆಂದೂ ತಿಳಿಸಿದ್ದಾರೆ. ಗೌತಮೀ ಶಿಕ್ಷಾ ಪ್ರಕಾರ ಎಲ್ಲಾ ವ್ಯಂಜನಗಳಿಗೂ '**ದ್ವಿರ್ಭಾವ**' ಬರುತ್ತದೆಯಾದರೂ ಖ, ಛ, ಠ, ಥ, ಫ, ಘ, ಝ, ಢ, ಧ, ಭ, ರ, ಹ - ಈ ೧೨ ವರ್ಣಗಳಿಗೆ ದ್ವಿತ್ವವಿರುವುದಿಲ್ಲ. ಅಂದರೆ ಪ್ರತಿ ವರ್ಗದಲ್ಲೂ ದ್ವಿತೀಯ, ಚತುರ್ಥಾಕ್ಷರಗಳು, ರೇಫ ಮತ್ತು ಹಕಾರಗಳಿಗೆ ದ್ವಿತ್ವವಿಲ್ಲ. ಸಂಯುಕ್ತಾಕ್ಷರವಾದಾಗ, ಮೊದಲನೆಯ ಅಕ್ಷರ ದ್ವಿತ್ವ ಪಡೆಯುತ್ತದೆ. ಉದಾ : ಅಗ್ನ ಆಯಾಹಿ ಎಂಬಲ್ಲಿ ಗಕಾರಕ್ಕೆ ದ್ವಿತ್ವ ಬರುತ್ತದೆ.

ಸಂಯುಕ್ತಾಕ್ಷರಗಳಲ್ಲಿ '**ಅಶರೀರಂ ಯಮಂ ವಿದ್ಯಾತ್**' ಎಂಬಂತೆ. ಅನನ್ತಾನನ್ತ ಸಂಯೋಗಗಳ ಮಧ್ಯೆ '**ಯಮ**' ಎಂಬ ವರ್ಣವಿಶೇಷವಿದೆ. ಉದಾ : ಅಗ್ನ ಆಯಾಹಿ ಎಂಬಲ್ಲಿ ಗ್ನ ಎಂಬಲ್ಲಿ ೪ ಅಕ್ಷರಗಳಿವೆ. ಗ್+ಗ್+ಯಮ+ನ; ಸಂಯುಕ್ತಾಕ್ಷರಗಳು '**ಯಮ**' ಯುಕ್ತವಾಗಿದ್ದರೆ '**ಅಯಸ್ಪಿಂಡ**' ವೆಂದೂ, ಅಂತಸ್ಥಯುಕ್ತವಾಗಿದ್ದರೆ ದಾರುಪಿಂಡವೆಂದೂ ಕರೆಯುತ್ತಾರೆ. ಇದಕ್ಕೆ ಯಾವ ಚಿಹ್ನೆಯೂ ಇಲ್ಲ. ಋಕ್ಪ್ರಾತಿಶಾಖ್ಯೆ ೩.೪೪ರಲ್ಲೂ, ತೈತ್ತರೀಯ ಪ್ರಾ.ಶಾ.೨೩.೧೨ರಲ್ಲೂ, **ಸಪ್ತಸ್ವರಾ ಯೇ ಯಮಾಸ್ತೇ** - ಛಾಂ.ಉ.೧.೮.೫ರ ಟಿಪ್ಪಣಿಯಲ್ಲೂ, ಕ್ರುಷ್ಟಾದಿ ಸಪ್ತಸ್ವರಗಳೇ '**ಯಮ**' ಎಂದು ತಿಳಿಸಲಾಗಿದೆ. ಉವ್ವಟರು ತಮ್ಮ ಋಕ್ ಪ್ರಾತಿಶಾಖ್ಯೆ ಭಾಷ್ಯದಲ್ಲಿ ಸಾಮಗಾನದ ಪ್ರಥಮಾದಿ ಕ್ರುಷ್ಟಸ್ವರಗಳೇ ಗಾಂಧರ್ವಗಾನದ ಷಡ್ಜಾದಿ ನಿಷಾದ ಸ್ವರಗಳೆಂದೂ ತಿಳಿಸಿ ಇವಕ್ಕೆ '**ಯಮ**' ಎಂಬ ಸಂಜ್ಞೆ ನೀಡಿದ್ದಾರೆ.

**ಮೂಲಾಧಾರಾತ್ ಪ್ರಥಮಮುದಿತೋ ಯಶ್ಚ ಭಾವಃ ಪರಾಖ್ಯಃ ಪಶ್ಚಾತ್ ಪಶ್ಯಂತ್ಯಥಹೃದಯಗೋ ಬುದ್ಧಿಯುಙ್ಮಧ್ಯಮಾಖ್ಯಃ । ವ್ಯಕ್ತೇ ವೈಖರ್ಯಥ... ತಸ್ಮಾದ್ಭವತಿ ಪವನೇ ಪ್ರೇರಿತಾ ವರ್ಣ ಸಂಜ್ಞಾ ॥** ಮೂಲಾಧಾರದಲ್ಲಿರುವ ಕುಂಡಲಿನಿಯಿಂದ ಶಬ್ದ ಬ್ರಹ್ಮವು ಉದಯವಾಗಿ ಪರಾಪಶ್ಯಂತಿ ಮಧ್ಯಮಾ ವೈಖರೀ ಎಂಬ ವಾಕ್ಕಿನ ನಾಲ್ಕು ರೂಪಗಳಲ್ಲಿ ವ್ಯಕ್ತವಾಗುತ್ತದೆ .... **ಮನುಷ್ಯಾಃ ಸ್ಥೂಲದೃಶೋ ವೈಖರೀಮೇವ ವಾಚಂ ಮನ್ವತೇ ॥ .... ಗುಹಾ ತ್ರೀಣಿ ನಿಹಿತಾ ನೇಂಗಯಂತಿ ತುರೀಯಂ ವಾಚೋ ಮನುಷ್ಯಾ ವದಂತಿ ॥** ಹೀಗೆ ಅಕಾರಾದಿಗಳು ವಾಯುವಿನಿಂದಾಗುತ್ತವೆ. *ವೈಖರೀ ರೂಪಾ-೩೭೧, ಲ.ಸ.*

ಶ್ರೋತ್ರಾದಿ ಐದು ಜ್ಞಾನೇಂದ್ರಿಯಗಳು ಪಂಚತನ್ಮಾತ್ರೆಗಳು ವ್ಯಕ್ತವಾಗುವ ಸ್ಥಾನಗಳಾಗಿವೆ. ಜೀವಾತ್ಮನು ನಿಶ್ಚಯಾತ್ಮಕವಾದ ಬುದ್ಧಿಯೊಡನೆ ಸೇರಿ ಬಾಹ್ಯ ವಿಷಯಗಳ

ಸಂಪರ್ಕದಿಂದ ಸಂಕಲ್ಪ ವಿಕಲ್ಪಾತ್ಮಕವಾದ ಮನಸ್ಸನ್ನು ಪ್ರೇರಿಸುವನು. ಮನಸ್ಸು ಶರೀರದ ಜಠರಾಗ್ನಿಯನ್ನು ತಟ್ಟುವುದು. ಅಗ್ನಿಯಿಂದ ಪ್ರೇರಿತವಾದ ಪ್ರಾಣವಾಯುವು ಹೃದಯಾಕಾಶ ದಲ್ಲಿ ಸಂಚರಿಸುತ್ತಾ ಬಾಹ್ಯಾಭ್ಯಂತರ ಪ್ರಯತ್ನಗಳಿಂದ - **ಉರಃ ಕಂಠ ಶಿರಶ್ಚೈವ ಸ್ಥಾನಾನಿ ತ್ರೀಣಿ ವಾಙ್ಮಯೇ** - *ನಾ.ಶಿ. ೧.೧.೭* // ಎದೆ, ಕಂಠ, ಶಿರಸ್ಸು ಎಂಬ ವಾಗಿಂದ್ರಿಯ ಸ್ಥಾನಗಳನ್ನು ಸ್ಪರ್ಶಿಸಿ, ಸಂವೃತ ವಿವೃತ ಕ್ರಿಯೆಯಿಂದ ಅಕಾರಾದಿ ಧ್ವನಿ ನಾದ ಶಬ್ದ ಗಳನ್ನುಂಟು ಮಾಡುವುದು. ಆಕಾಶದ ತನ್ಮಾತ್ರೆಯಾದ ಶಬ್ದವನ್ನು ಗ್ರಹಿಸುವ ಶ್ರೋತ್ರೇಂದ್ರಿಯದಿಂದ ಗ್ರಾಹ್ಯವಾದ ಗುಣವೇ ಶಬ್ದವೆನಿಸುತ್ತದೆ. ವೇದದ ಶಬ್ದಗಳು ಬ್ರಹ್ಮ ಸ್ವರೂಪವಾಗಿದ್ದು ಈ **'ಶಬ್ದಬ್ರಹ್ಮ'** ವು ಪತಂಜಲಿ ಮಹಾಭಾಷ್ಯ ತಿಳಿಸುವ ಜಾತಿ, ಕ್ರಿಯಾ, ಗುಣ, ದ್ರವ್ಯ ಎಂಬ ಚತುರ್ಮುಖದಿಂದ ಈ ಜಗತ್ತಿನ ವ್ಯವಹಾರವನ್ನು ನಡೆಸುತ್ತಿದೆ.

ಅಕ್ಷರಾತ್ಮಕವೆಂದೂ ಅನಕ್ಷರಾತ್ಮಕವೆಂದೂ ಎರಡು ಬಗೆಯಾಗಿರುವ ಈ ಶಬ್ದಗಳು **ಜಿಹ್ವಾತಾಲುಮೂಲ ಉತ್ತರೋಷ್ಠ ಅಧರೋಷ್ಠ ದನ್ತ ನಾಸಿಕಾ ಕಂಠ ಹೃದಯ ಮೂರ್ಧ್ನಿ** ಎಂಬ ಅಷ್ಟಸ್ಥಾನಗಳನ್ನಾಶ್ರಯಿಸಿಕೊಂಡಿವೆ. ಈ ಸ್ಥಾನಗಳಿಂದುದಯವಾಗುವ ಅಕ್ಷರಾತ್ಮಕ ಶಬ್ದಗಳು **ತಿಙನ್ತ ಸುಬನ್ತ ಅವ್ಯಯ** ಹಾಗೂ ಕೇವಲ ಧ್ವನಿಗಳೆಂದು ನಾಲ್ಕು ತೆರನಾಗಿವೆ. ಈ ಅಕ್ಷರಾತ್ಮಕ ಶಬ್ದಗಳ ಧ್ವನಿ ಹಾಗೂ ಚಾಕ್ಷುಷರೂಪಗಳೇ ಸಂಸ್ಕೃತ ಆದಿ ಸಮಸ್ತ ಭಾಷೆಗಳೂ ಲಿಪಿಗಳೂ ಆಗಿರುತ್ತವೆ. ಸಂಯೋಗ ವಿಭಾಗಜವಾಗಿ ಭೇರಿ ವೇಣು ವೀಣಾದಿ ಶರೀರದ ಬಾಹ್ಯಪ್ರದೇಶಗಳಿಂದುದಯವಾಗುವ ಶಬ್ದಗಳು ಧ್ವನಿಗಳು ಅನಕ್ಷರಾತ್ಮಕವೆನಿಸಿಕೊಂಡು ಅನಂತವಾಗಿವೆ. ಈ ಸಮಸ್ತ ಶಬ್ದಗಳನ್ನೂ ಧ್ವನಿಗಳನ್ನೂ ಶ್ರೋತ್ರೇಂದ್ರಿಯವು ತನ್ನ ಅಧಿಷ್ಠಾತೃ ದೇವತೆ ಯಾದ **ದಶದಿಕ್ಕುಗಳ** ಪ್ರೇರಣೆಯಿಂದ ಸ್ವೀಕರಿಸುವುದು ಗ್ರಹಿಸುವುದು. ಪಂಚತನ್ಮಾತ್ರಾ - ವಿವೇಕ, ವಿದ್ಯಾರಣ್ಯ ಪಂಚದಶೀ ॥

**ಸ್ವಯಂ ರಾಜಂತ ಇತಿ ಸ್ವರಾಃ ॥** *ಪಾ.ಪ.ಭಾ.೧.೨.೩೧* // ಅಕಾರಾದಿ ಸ್ವರಾಕ್ಷರಗಳು ಅನ್ಯ ಅಕ್ಷರಗಳ ಸಹಾಯವಿಲ್ಲದೆ ಸ್ವತಂತ್ರವಾಗಿ ಉಚ್ಚರಿಸಲು ಅನುಕೂಲವಾಗುವಂತೆ ಸ್ವತಃ ತಾವೇ ಪ್ರಕಾಶಿಸುತ್ತಿರುವುದರಿಂದಲೇ ಸ್ವರಗಳೆನಿಸಿ ವ್ಯಂಜನಗಳೊಂದಿಗೆ ಸೇರಿ ಅವಕ್ಕೆ ಪ್ರಾಣವನ್ನುಂಟು ಮಾಡುವುದರಿಂದ ಸಮೂಹತ್ವೇನ ಬ್ರಹ್ಮವರ್ಗವೆನಿಸಿಕೊಂಡಿವೆ. ನಮ್ಮ ಅಕ್ಷರಮಾಲೆಯ ಪ್ರಥಮಾಕ್ಷರವಾದ **ಅ** ಉಚ್ಚಾರಣೆಯು ಸಹಜವಾಗಿದ್ದು ಅಕ್ಷರೋತ್ಪತ್ತಿ ಸ್ಥಾನಗಳಲ್ಲೇ ಮೊದಲನೆಯದಾದ ಕಂಠದಿಂದಲೇ ಹುಟುತ್ತದೆ. **ಅಕ್ಷರಾಣಾಂ 'ಅ' ಕಾರೋಽಸ್ಮಿ** - *ಭ.ಗೀ. ೧೦.೩೩,* ಎಂದಿರುವುದು **ಅ** ಕಾರವೇ ಅಕ್ಷರಗಳಿಗೆಲ್ಲಾ ಮೊದಲನೆಯದು ಎಂದು

ಮಾತ್ರವೇ ಅರ್ಥವಲ್ಲ ಬೀಜದಿಂದ ವೃಕ್ಷವಾಗಿರುವಂತೆ ಅಕಾರ ದಿಂದಲೇ ಇತರ ಅಕ್ಷರಗಳೂ ಉದಯವಾಗಿವೆ ಎಂಬುದೂ ಗಮನಾರ್ಹ. ಓಂಕಾರದ ಪ್ರಥಮ ಅಕ್ಷರವೇ **ಅ** ಕಾರವಾಗಿದ್ದು ಬ್ರಹ್ಮದ ಪಾದವಾಗಿದೆ. ಇದರ ವ್ಯಾಪಕತೆಯನ್ನೂ ಮಹತ್ವವನ್ನೂ ಮಾಂಡೂಕ್ಯೋಪನಿಷತ್ತು ಬಹುವಿಸ್ತಾರವಾಗಿ ತಿಳಿಸುತ್ತಿದೆ. ಸಾಮವೇದದ ಪ್ರಥಮ ಮನ್ತ್ರ **ಅಗ್ನ ಆಯಾಹಿ** ಮತ್ತು ಋಗ್ವೇದದ ಪ್ರಥಮ ಮನ್ತ್ರ **ಅಗ್ನಿಮೀಳೇ ಅ**ಕಾರ ದಿಂದಲೇ ಪ್ರಾರಂಭವಾಗಿರುವುದು **'ಅ'** ಅಕ್ಷರವೇ ಜ್ಞಾನರಾಶಿಯ ಮೂಲ ಎಂಬುದರ ದ್ಯೋತಕವಾಗಿದೆ.

ಅಕ್ಷರಾಭ್ಯಾಸ ಸಂಸ್ಕಾರದಲ್ಲಿ ಅಕ್ಷರಮಾಲೆಯ ಪ್ರತಿ ಅಕ್ಷರಕ್ಕೂ ಉಕ್ತವಾಗಿರುವ ಪ್ರತಿ ದೇವತೆಯನ್ನೂ ಪ್ರತ್ಯೇಕಪ್ರತ್ಯೇಕವಾಗಿ ಹೆಸರಿಸಿ ಆವಾಹನಾದಿ ಷೋಡಶೋಪಚಾರ ಪೂಜೆ ಯನ್ನು ಸಲ್ಲಿಸಿ ಶಿಶುವಿಗೆ ವಿಧ್ಯುಕ್ತವಾಗಿ ಅಕ್ಷರಾಭ್ಯಾಸವನ್ನು ಪ್ರಾರಂಭಿಸುವುದು - ನದಿಯು ಸಮುದ್ರಕ್ಕೆ ದಾರಿ ತೋರಿಸುವಂತೆ ಜ್ಞಾನಭಂಡಾರದ ಸಹಾಯದಿಂದ ಕ್ಷರವಲ್ಲದ ನಾಶ ರಹಿತವಾದ **ಅಕ್ಷರವನ್ನು** ಬ್ರಹ್ಮನನ್ನು ಪಡೆಯಲು ಮಾರ್ಗದರ್ಶನ ಮಾಡುವ ಪರಂಪರೆ ಅನೂಚಾನವಾಗಿ ನಡೆದು ಬರುತ್ತಿರುವುದು - ಈ **ಅಕ್ಷರ** ತತ್ತ್ವವನ್ನೂ ಮಹತ್ವವನ್ನೂ ಪರಿಣಾಮಕಾರಿಯಾಗಿ ತಿಳಿಸುವುದಕ್ಕಾಗಿಯೇ ಎಂಬುದನ್ನರಿಯಬೇಕು.

**ಸ್ವರಗಳು :**

**ಪ್ರಹೀಣಃ ಸ್ವರವರ್ಣಾಭ್ಯಾಂ ಯೋ ವೈ ಮನ್ತ್ರಃ ಪ್ರಯುಜ್ಯತೇ ।**
**ಯಜ್ಞೇಷು ಯಜಮಾನಸ್ಯ ರುಶತ್ಯಾಯುಃ ಪ್ರಜಾಂ ಪಶೂನ್ ॥** *ನಾ. ಶಿ. ೧.೧.೬ ॥*

ವೇದಮನ್ತ್ರಗಳ ಸನಾತನವಾದ ಕ್ರಮಬದ್ಧವಾದ ಸ್ವರಾಕ್ಷರಗಳ ಯಥಾವತ್ ಉಚ್ಚಾರಣೆ ಯಿಂದಲೇ ಇಷ್ಟಸಿದ್ಧಿಯಾಗುವುದು. ಸರಿಯಾದ ಉಚ್ಚಾರಣೆ ಮಾಡದೆ ದೋಷವುಂಟಾದರೆ ಹಿಂಸೆ ನಾಶಗಳಿಗೆ ಒಳಗಾಗಬೇಕಾಗುವುದು. ವೇದದ ಅರ್ಥವು ಸ್ವರಾನುಗತವಾಗಿರುವುದ ರಿಂದ ಅಥವಾ ವೇದದ ಅರ್ಥವೇ ಸ್ವರಾನುಗತ ವಾಗಿರುವುದರಿಂದ ಸ್ವರಮರ್ಯಾದೆ ಯನ್ನು ಸರಿಯಾಗಿ ತಿಳಿದೇ ಲೋಪದೋಷಗಳಿಗೆಡೆಯಾಗದಂತೆ ಮನ್ತ್ರೋಚ್ಚಾರಣೆ ಯಾಗತಕ್ಕದ್ದು. **ಋಗ್ವೈ ಮಾತಾ ಸಾಮಪಿತಾ ಪ್ರಜಾಪತಿಸ್ಸ್ವರಃ ॥ ಋಕ್ ಪ್ರಸಿದ್ಧಾ । ಸಾಮ ಗೀತ್ಯಾತ್ಮಕಮ್ । ಸ್ವರಃ ಕ್ರುಷ್ಟಾದಿಃ ॥** *ದೇ. ಬ್ರಾ. ೧.೨೩ ॥* **ವರ್ಣಃ ಸ್ವರಃ ॥ ವರ್ಣೋಽಕಾರಾ ದಿ ಸ್ವರ ಉದಾತ್ತಾದಿಃ ॥** *ಶಂ. ಭಾ., ತೈ. ಉ. ೧.೨.೧. ॥* ಅಕಾರಾದಿ ಎಲ್ಲಾ ಸ್ವರಗಳನ್ನೂ ಬಲವಾಗಿ ಶಕ್ತಿಯುತವಾದ ಧ್ವನಿಯಿಂದ ಉಚ್ಚರಿಸಬೇಕು. ಸ್ಪರ್ಶಗಳಾದ **ಕ** ಕಾರಾದಿ ವ್ಯಂಜನಗಳನ್ನು ಪರಸ್ಪರ ಕೂಡಿಸದೆ ಮೆಲ್ಲಗೆ ಸ್ಪಷ್ಟವಾಗಿ ಉಚ್ಚರಿಸತಕ್ಕದ್ದು. ಊಷ್ಮವರ್ಣ

ಗಳೆಂದೆನಿಸಿಕೊಂಡಿರುವ ಶ ಷ ಸ ಹ ಗಳನ್ನು ಒಳಗೆ ನುಂಗದೆ ಹೊರಗೆ ಹಾಕದೆ ಮೃದುವಾಗಿ ಸುಸ್ಪಷ್ಟವಾಗಿ ಉಚ್ಚರಿಸತಕ್ಕದ್ದು - *ಛಾಂ. ಉ. ೨.೨.೩-೫ ॥*

**ಸ್ವರೋ ನಾಸಾ ಸಮೀರಣೇ । ಉದಾತ್ತಾದಾವಕಾರಾದೌ ಷಡ್ಜಾದೌ ಚ ಧ್ವನೀ ಪುಮಾನ್ । ಮೇದಿನೀ ಕೋಶ ॥ ಸ್ಯರ್ಷಡ್ಜರ್ಷಭ ಗಾನ್ಧಾರ ಮಧ್ಯಮಾಃ ಪಂಚಮಸ್ತಥಾ । ಧೈವತಂ ಚ ನಿಷಾದಶ್ಚ ತನ್ತ್ರೀ ಕಂಠೋದ್ಭವಾಃ ಸ್ವರಾಃ । ತೇ ಕೇಕಿ ಚಾತಕಾಜಕುಜ್ ಪಿಕ ಭೇಕ ಗಜಸ್ವರಾಃ । ವೈಜ ॥ ಸ್ವರನ್ತಿ ಶಬ್ದಾಯನ್ತೇ - ಸ್ವೃ ಶಬ್ದೋಪತಾಪಯೋಃ । ನಿಘಂ ॥ 'ಅಚ್' ಅಕಾರಾದಿ ಸ್ವರಗಳು ।** *೩.೧.೧೩೪ ॥* **ತದ್ಧರ್ಮತ್ವಾತ್ ಉದಾತ್ತಾದಯೋಽಪಿ ಸ್ವರ್ಯತೇ ಶಬ್ದ್ಯತೇಽನೇನ ವ್ಯಂಜನಮ್ ॥ ಅನುದಾತ್ತೋ ಹೃದಿಜ್ಞೇಯಃ ಮೂರ್ಧ್ನ್ಯುದಾತ್ತ ಉದಾಹೃತಃ ಸ್ವರಿತಃ ಕರ್ಣಮೂಲೀಯಃ ಸರ್ವಾಸ್ಯೇ ಪ್ರಚಯಃ ಸ್ಮೃತಃ ।** *ಪಾ.ಶಿ ॥* **ತಥಾ ಸ್ವರತಿ ಗಚ್ಛತೀತಿ ಸ್ವರ ಇತೀಮಂ ಪ್ರಾಣಮಾಚಕ್ಷತೇ ಕಥಯನ್ತಿ ಸ್ವರ ಇತಿ ।** *ಛಾಂ. ಉ.೧.೩.೨. ಮಿತಾಕ್ಷರ ॥* **ಕಾ ಸಾಮ್ನೋ ಗತಿರಿತಿ ಸ್ವರ ಇತಿ ಹೋವಾಚ .... ।** *ಛಾಂ. ಉ. ೧.೮.೪. ॥* ಸಾಮಕ್ಕೆ **ಗತಿ** ಯಾವುದು ಎಂಬ ಪ್ರಶ್ನೆಗೆ ಉತ್ತರ - ಸ್ವರ, ಆಲಾಪನೆಯೇ ಸ್ವರದ ಗತಿ, ಸಾಮವು ಸ್ವರಾತ್ಮಕ ವಾಗಿರುವುದರಿಂದ ಅಂದರೆ ಸ್ವರವೇ ಆಶ್ರಯವಾಗಿದೆ. ಆಲಾಪನೆ ಇಲ್ಲದ್ದು ಸಾಮವಾಗಲಾರದು. **ಸ್ವರವೇ** ಸಾಮದ **ಸಂಪತ್ತು**. ಕಂಠದ **ಮಾಧುರ್ಯವೇ** ಇಂಪೇ ಸಾಮದ **ಭೂಷಣ**, ಸಾಮ ವೆಂಬ ಹೆಸರಿನ ಪ್ರಾಣದ ಸಂಪತ್ತೇ ಒಡವೆಯೇ ಸ್ವರ. ಸಾಮದ ಸ್ವತ್ತನ್ನು ಅರಿತವನಿಗೆ **ಸ್ವರವೇ ಸ್ವತ್ತು**. ಆದುದರಿಂದಲೇ ಮಧುರಸ್ವರಯುಕ್ತವಾದ ಸ್ವರ ಸೌಷ್ಠವದಿಂದಕೂಡಿದ ವಾಕ್ಕಿ ನಿಂದ ಆರ್ತ್ವಿಜ್ಯವನ್ನು ಮಾಡಬೇಕು. ಇಂತಹ ಸ್ವರ ಸಂಪತ್ತುಳ್ಳವನನ್ನೇ ಜನರು ನೋಡಲಿಚ್ಛಿ ಸುತ್ತಾರೆ, ಪ್ರೀತಿಸುತ್ತಾರೆ, ಗೌರವಿಸುತ್ತಾರೆ. ... **ಸ್ವರ ಏವ ಸುವರ್ಣಂ ಭವತಿ ಹಾಸ್ಯ ಸುವರ್ಣಂ ಯ ಏವಮೇತತ್ಸಾಮ್ನಃ ಸುವರ್ಣಂ ವೇದ ॥** ಸ್ವರವೇ ಸುವರ್ಣ - ಹೀಗೆ ಸಾಮವೆಂಬ ಸುವರ್ಣವನ್ನರಿತವನಿಗೇ ಸುವರ್ಣ ಅಂದರೆ ಸಂಪತ್ತು ಲಭಿಸುತ್ತದೆ - *ಸಾ. ವಿ. ಬ್ರಾ. ೧.೧.೧೧., ಬೃ. ಉ. ೧.೩.೨೨-೨೬.*

ಪ್ರತಿ ಭಾಷೆಯಲ್ಲೂ ಉಚ್ಚಾರಣೆಯು ಅರ್ಥಬೋಧ ಮತ್ತು ವಿಶಿಷ್ಟ ಲಯಗಳಿಗೆ ಸಂಬಂಧವಿರುತ್ತದೆ. ಇದನ್ನೇ **ಅರ್ಥತತ್ವ** ಹಾಗೂ **ಅಭಿವ್ಯಕ್ತಿತತ್ವ**ವೆನ್ನುತ್ತಾರೆ. ಭಾವಗತ ವಸ್ತುವಿನ ಅಭಿವ್ಯಕ್ತಿಗಾಗಿಯೇ ಇರುವ ಭಾಷೆಯ ಪ್ರಯೋಗಕ್ಕೆ ಶಬ್ದವು ಪ್ರತೀಕವಾಗಿದ್ದು, ಈ ಶಬ್ದದೊಂದಿಗೆ ಭಾವದ ಸಂಬಂಧವನ್ನು ಸ್ಥಾಪಿಸುವ ಪ್ರಯತ್ನವು ನಿರಂತರವಾಗಿ ಸಾಗುತ್ತಿರುತ್ತದೆ. ಶಬ್ದವು ಅರ್ಥದ ಪ್ರತೀಕವಾದರೂ ಅದರ ಅಭಿವ್ಯಕ್ತಿಯು ಉಚ್ಚಾರ ಣೆಯ ವಿಶಿಷ್ಟ ಪ್ರಕಾರವನ್ನೇ ಅವಲಂಬಿಸಿರುತ್ತದೆ. ಆದುದರಿಂದಲೇ ಒಂದೇ ಶಬ್ದವನ್ನು ಭಿನ್ನಭಿನ್ನ

ಸ್ವರದಲ್ಲಿ ಉಚ್ಚರಿಸಿದಾಗ ಭಿನ್ನಭಿನ್ನ ಅರ್ಥದ ಬೋಧವಾಗುತ್ತದೆ. ಈ ಭಿನ್ನಭಿನ್ನ ಉಚ್ಚಾರಣೆಗಳ ವೈವಿಧ್ಯತೆಯಿಂದ ವಕ್ತೃ ಮತ್ತು ಶ್ರೋತೃಗಳಿಬ್ಬರಿಗೂ ಪ್ರಯೋಗ ಮಾಡಲೂ ತಿಳಿದುಕೊಳ್ಳಲೂ, ಅನಾನುಕೂಲವಾಗಬಾರದೆಂದು ಉಚ್ಚಾರಣೆಯ ಪ್ರಕಾರಗಳನ್ನು ನಿಯಮಿಸುವ ಪ್ರಯತ್ನ ಸಾಗಿದೆ. ವೈದಿಕ ಭಾಷೆಯ ಉಚ್ಚಾರಣೆಯು ಉದಾತ್ತಾನುದಾತ್ತ ಸ್ವರಿತಾದಿ ರೂಪಗಳಲ್ಲಿ ನಿಯತವಾಗಿದ್ದು ಶಬ್ದದ ಅರ್ಥ ನಿರ್ಧರಿಸಲು ಅನುಕೂಲವಾಗಿರುವುದರೊಂದಿಗೆ ವಿಶೇಷ ಪ್ರಕಾರವಾದ ಗೇಯತೆಯನ್ನು ಅಳವಡಿಸಿಕೊಂಡಿದೆ.

ವೈದಿಕ ಭಾಷೆಯಲ್ಲಿ ಪ್ರಯೋಗವಾಗಿರುವ ಸ್ವರಗಳು **ಬಲಾಘಾತ** ಮತ್ತು ಸ್ವರಾಘಾತಳೆರಡಕ್ಕೂ ಸಂಬಂಧಿಸಿವೆ. ಸ್ವರಾಘಾತ ಸಂಬಂಧವು ಮನ್ತ್ರಗಳ ಮನ್ತ್ರೋಚ್ಚಾರಣೆಯೊಂದಿಗಿದ್ದು ಅರ್ಥದೊಂದಿಗೆ ಇಲ್ಲ ಎಂಬುದನ್ನು ಗಮನಿಸಬೇಕು. ಆದುದರಿಂದಲೇ ಋಚೆಗಳಲ್ಲಿ ಸ್ವರಗಳ ಏರಿಳಿತಗಳ ನಿಯಮವನ್ನು ಪಾಲಿಸಲಾಗುತ್ತಿದೆ. ಸಂಹಿತೆಯ ಸ್ವರ ನಿಯಮದಂತೆ ಉದಾತ್ತಾನಂತರ ಬರುವ ಅನುದಾತ್ತವು ಸ್ವರಿತವಾಗುವುದು. ಅದರ ಮುಂದೆ ಉದಾತ್ತ ಅಥವಾ ಸ್ವರಿತಗಳಿಲ್ಲದಿದ್ದರೆ ಸ್ವರಾಘಾತದ ವಿಶೇಷತೆ ವ್ಯಕ್ತವಾಗುತ್ತದೆ. ಅನುದಾತ್ತಾನಂತರ ಉದಾತ್ತ ಉದಾತ್ತಾನಂತರ ಸ್ವರಿತ ಸ್ವರಾಘಾತಕ್ಕೆ ಕಾರಣ ವಾಗಿರುತ್ತದೆ. ಅರ್ಧರ್ಚದಲ್ಲಿ ಅವಸಾನ ಬರದಿರುವವರೆಗೆ ಈ ಸ್ವರಾಘಾತನಿಯಮದ ಪಾಲನೆಯಾಗುತ್ತದೆ. ಅಂದರೆ ಸಂಹಿತೆಯ ಸ್ವರವೇ ಸ್ವರಾಘಾತವಾಗಿದ್ದು ಸಂಹಿತೆಯ ಸ್ವರ ನಿಯಮವೇ ಸ್ವರಾಘಾತದ ನಿಯಮವಾಗಿರುತ್ತದೆ.

ಬಲಾಘಾತದ ಸಂಬಂಧವು ಮನ್ತ್ರಗಳ ಪದಗಳ ಅರ್ಥದೊಂದಿಗಿದ್ದು ಉದಾತ್ತಾನುದಾತ್ತ ಜಾತ್ಯ ಸ್ವರಿತಗಳು ಅರ್ಥದ ನಿಯಮಾಕಗಳಾಗಿರುತ್ತವೆ. ಹೀಗಾಗಿ ಪದ ಸ್ವರವಿಚಾರ ಮಾಡುವುದೆಂದರೆ ಈ ಬಲಾಘಾತ ಸಂಬಂಧದ ಬಗೆಯೇ ಆಗಿರುತ್ತದೆ. ಅಂದರೆ ಬಲಾಘಾತದ ಸಂಬಂಧ ಮನ್ತ್ರದ ಪದಗಳ ಅರ್ಥದೊಂದಿಗಿದ್ದರೆ, ಸ್ವರಾಘಾತದ ಸಂಬಂಧ ಮನ್ತ್ರೋಚ್ಚಾರಣೆಯೊಂದಿಗಿರುತ್ತದೆ. ಬಲಾಘಾತ ಸ್ವರಾಘಾತ ಸಂಬಂಧವಾದ ಸ್ವರ ಪ್ರಯೋಗಗಳಲ್ಲಿ ಚಾತುಃಸ್ವರ್ಯ ತ್ರೈಸ್ವರ್ಯ ದ್ವಿಸ್ವರ ಏಕಸ್ವರ ಎಂಬ ನಾಲ್ಕು ಪದ್ಧತಿಗಳನ್ನು ಗುರುತಿಸಲಾಗಿದೆ.

**ಚಾತುಃ ಸ್ವರ್ಯಪದ್ಧತಿ :-** ಇದರಲ್ಲಿ ಮನ್ತ್ರದ ಉಚ್ಚಾರಣೆಯು ಉದಾತ್ತಾನುದಾತ್ತ ಸ್ವರಿತ ಪ್ರಚಯಗಳೆಂಬ ನಾಲ್ಕು ಸ್ವರಗಳಲ್ಲಿ ನಡೆಯುತ್ತದೆ. ಖಾಂಡಿಕೇಯ ಹಾಗೂ ಔಂಖೇಯ ಕೃಷ್ಣಯಜುರ್ವೇದ ಶಾಖೆಯ ಬ್ರಾಹ್ಮಣಗಳಲ್ಲಿ ಈ ಪದ್ಧತಿ ಇದೆ - **ತೇಷಾಂ ಖಾಂಡಿಕೇಯೌಂಖೇಯಾನಾಂ ಚಾತುಃಸ್ವರ್ಯಮಪಿ ಕ್ವಚಿತ್ ॥** *ಭಾ. ಸೂ. ೩. ೨೭* ॥ ಸ್ವತಂತ್ರಸ್ವರಿತ ಮತ್ತು ಸ್ವಭಾವತಃ ಅನುದಾತ್ತವಾಗಿರುವ ಆಶ್ರಿತಸ್ವರಿತ ಎಂದು ಸ್ವರಿತ ಎರಡು

ಬಗೆ. ಉದಾತ್ತ ಹಾಗೂ ಸ್ವತಂತ್ರ ಸ್ವರಿತ ಮೂಲಸ್ವರವೆಂದು ಗ್ರಹಿಸಲ್ಪಟ್ಟಿದ್ದು ಅನುದಾತ್ತಾಶ್ರಿತ ಸ್ವರಿತ ಹಾಗೂ ಪ್ರಚಯಗಳು ಸಾಂಹಿತಿಕ ಧರ್ಮದಿಂದಾಗಿ ಪರಿವರ್ತನಗೊಳ್ಳುವುದರಿಂದ ಸಾಂಹಿತಿಕ ಸ್ವರವೆಂದು ಪರಿಗಣಿಸಲ್ಪಟ್ಟಿವೆ. ಸಾಧಾರಣವಾಗಿ ಪ್ರತ್ಯೇಕಪದದಲ್ಲಿ ಒಂದು ವರ್ಣವನ್ನು ಬಿಟ್ಟು ಉಳಿದವು ಅನುದಾತ್ತವಾಗಿರುತ್ತವೆ. **ಅನುದಾತ್ತಂ ಪದಮೇಕ ವರ್ಜಮ್** - ಪಾ.೬.೧.೧೫೮. ಕೆಲವು ಪದಗಳು ಸರ್ವದಾ ಅನುದಾತ್ತವಾಗಿಯೇ ಇರುತ್ತವೆ - ಪಾ.೮.೧.೧೮. ಕೆಲವು ವರ್ಣಗಳು ಅವಸ್ಥಾ ವಿಶೇಷದಿಂದ ಉದಾತ್ತಯುಕ್ತವಾಗಿದ್ದು ಅನ್ಯತ್ರ ಸರ್ವಾನುದಾತ್ತವಾಗಿರುತ್ತವೆ - **ಇದಮೋಽನ್ವಾದೇಶೇಽಶನುದಾತ್ತಸ್ತೃತೀ ಯಾದೌ** - ಪಾ.೨.೪.೩೨ ॥ ಕೆಲವು ಪದಗಳಲ್ಲಿ ಒಂದಕ್ಕಿಂತ ಹೆಚ್ಚು ಉದಾತ್ತಗಳಿರುತ್ತವೆ. ಪದಗಳಲ್ಲಿ ಸ್ವರಗಳನ್ನು ಕೆಲವು ನಿಶ್ಚಿತ ಕ್ರಮದಲ್ಲಿ ಕಾಣುತ್ತೇವೆ - ಒಂದು ಪದದಲ್ಲಿ ನಾಲ್ಕು ಸ್ವರಗಳಿದ್ದರೆ ಅವು ಅನುದಾತ್ತ ಉದಾತ್ತ ಸ್ವರಿತ ಮತ್ತು ಪ್ರಚಯ. ಹೀಗೆ ನಿಶ್ಚಿತ್ತ ಕ್ರಮದಲ್ಲಿರುತ್ತವೆ. ಉದಾ : **ಸುಪೇಶಸಃ** ॥ ಉದಾತ್ತ ಅನುದಾತ್ತ ಸ್ವರಿತ - ಹೀಗೆ ಮೂರೇ ಸ್ವರಗಳಿದ್ದರೆ, ಉದಾತ್ತ ಅನುದಾತ್ತ ಸ್ವರಿತ ಈ ಕ್ರಮದಲ್ಲೇ ಇರುತ್ತವೆ. **ಗಣಾನಾಮ್** ಒಂದು ಪದದಲ್ಲಿ ಅನುದಾತ್ತ ಉದಾತ್ತ ಎರಡೇ ಇದ್ದರೆ ಅನುದಾತ್ತ ಮುಂಚೆ ಇದ್ದು ಉದಾತ್ತ ನಂತರವಿರುತ್ತದೆ. **ಅಗ್ನಿಮ್** - ಒಂದು ಪದದಲ್ಲಿ ಉದಾತ್ತ ಮತ್ತು ಆಶ್ರಿತ ಸ್ವರಿತ ಎರಡೇ ಇದ್ದರೆ ಉದಾತ್ತ ಮುಂಚೆ ಇದ್ದು ಸ್ವರಿತ ನಂತರವಿರುತ್ತದೆ - ಇನ್ದ್ರ. ಸ್ವರದ ದೃಷ್ಟಿಯಲ್ಲಿ ಸಂಹಿತಾಗತ ಮನ್ತ್ರದ ಅರ್ಧರ್ಚ ಅಥವಾ ಇಡೀ ಪಾದ - ಒಂದು ಅಳತೆಯ ಕನಿಷ್ಠ ಮೂಲಪ್ರಮಾಣವಾಗಿರುತ್ತದೆ. ಅನುದಾತ್ತ ಸ್ವರಿತ ಹಾಗೂ ಪ್ರಚಯ ಸಂಹಿತಾ ಸ್ವರವೆನಿಸುತ್ತದೆ. ಆದುದರಿಂದ ಪೂರ್ವವರ್ತೀ ಮತ್ತು ಪರವರ್ತೀ ಉದಾತ್ತಗಳ ಕಾರಣ, ಇವುಗಳಲ್ಲಿ ಪರಿವರ್ತನೆ ಯಾಗುತ್ತಿರುತ್ತದೆ. ಉದಾತ್ತ ಮೂಲಸ್ವರವಾಗಿರುವುದರಿಂದ ಬದಲಾವಣೆಯಾಗುವುದಿಲ್ಲ. ಪದಗತ ಸ್ವರಗಳಲ್ಲಿ ಅನುದಾತ್ತಾನಂತರ ಆಶ್ರಿತ ಸ್ವರಿತ ಅಥವಾ ಪ್ರಚಯ ಬರುವುದಿಲ್ಲ. ಇದೇ ರೀತಿ ಸ್ವರಿತ/ ಪ್ರಚಯದ ನಂತರ ಉದಾತ್ತ ಬರುವುದಿಲ್ಲ. ಒಂದು ಪಕ್ಷ ಸ್ವರಿತ/ ಪ್ರಚಯಗಳ ನಂತರ ಉದಾತ್ತಸ್ವರ ಬಂದರೆ ಸ್ವರಿತ ಅಥವಾ ಪ್ರಚಯ ಎರಡೂ ಅನುದಾತ್ತವಾಗಿ ಪರಿವರ್ತಿತವಾಗುತ್ತವೆ.

**ತ್ರೈಸ್ವರ್ಯ ಪದ್ಧತಿ :-** ಇದು ಚತುಃಸ್ವರ್ಯ ಪದ್ಧತಿಯಂತೆ ಇದ್ದರೂ ಇದರಲ್ಲಿ ಅನುದಾತ್ತ ಉದಾತ್ತ ಮತ್ತು ಸ್ವರಿತ ಹೀಗೆ ಮೂರೇ ಸ್ವರಗಳ ಉಚ್ಚಾರಣೆಯಿರುತ್ತದೆ. ಪ್ರಚಯದ ಸ್ವತಂತ್ರವಾದ ಉಚ್ಚಾರಣೆ ಇರುವುದಿಲ್ಲ. ಋಗ್ವೇದ ಮಾಧ್ಯಂದಿನ ಸಂಹಿತಾ ಕಾಣ್ವಸಂಹಿತಾ **'ಸಾಮವೇದಾರ್ಚಿಕ'** ಸಂಹಿತೆ ಹಾಗೂ ಅಥರ್ವವೇದದಲ್ಲಿ ಉದಾತ್ತಾನು

ದಾತ್ತ ಸ್ವರಿತ ಈ ಮೂರು ಸ್ವರಗಳು ಮಾತ್ರ ಉಚ್ಚರಿಸಲ್ಪಡುತ್ತವೆ. ಪ್ರಚಯದ ಸ್ವತಂತ್ರ ಉಚ್ಚಾರಣೆ ಇರುವುದಿಲ್ಲ. ಈ ಸಂಹಿತೆಗಳಲ್ಲಿ ಪ್ರಚಯ ಸ್ವರವಿದ್ದರೂ ಅದು ಉದಾತ್ತ ಶ್ರುತಿಯಲ್ಲಿ ಉಚ್ಚಾರವಾಗುವುದರಿಂದ ಇದರ ಸ್ವತಂತ್ರ ಅಸ್ತಿತ್ವ ಸ್ವೀಕೃತವಾಗಿಲ್ಲ. ಹೀಗಾಗಿ ಈ ಸಂಹಿತೆಗಳಲ್ಲಿ ತ್ರೈಸ್ವರ್ಯ ಪದ್ಧತಿಯೇ ಇದ್ದು ಚತುಃಸ್ವರಪದ್ಧತಿಯಂತೆಯೇ ಸ್ವರಗಳ ಸಂಹಿತೋಚ್ಚಾರಣೆಯಿರುತ್ತದೆ.

**ದ್ವಿಸ್ವರ ಪದ್ಧತಿ :** ಯಲ್ಲಿ ಉದಾತ್ತಾನುದಾತ್ತ ಸ್ವರೋಚ್ಚಾರಣೆ ಮಾತ್ರವಿರುತ್ತದೆ. ಪ್ರಚಯ ಸ್ವರಿತಗಳ ಉಚ್ಚಾರಣೆ ಇರುವುದಿಲ್ಲ. ಈ ಪದ್ಧತಿ ಶತಪಥ ಬ್ರಾಹ್ಮಣ, **'ತಾಂಡ್ಯ ಬ್ರಾಹ್ಮಣ'** ಭಾಲ್ಲವಿ ಬ್ರಾಹ್ಮಣದಲ್ಲಿ ಪ್ರಚಲಿತವಾಗಿದೆ. ಇದಕ್ಕೆ **'ಭಾಷಿಕ ಸ್ವರ'** ವೆಂಬ ಅಭಿಧಾನವಿದೆ. **ಶತಪಥವತ್ತಾಣ್ಡಿ ಭಾಲ್ಲವಿನಾಂ ಬ್ರಾಹ್ಮಣ ಸ್ವರಃ ॥** *ಭಾ.ಸೂ. ೩.೧೫, ನಾ.ಶಿ.೧.೧.೧೩ ॥* **ಉದಾತ್ತಾನುದಾತ್ತೌ ಭಾಷಿಕಾಸ್ತತ್ಸಂಧಿಃ ।** *ಭಾ.ಸೂ.೧.೫ ॥* **ಛನ್ದೋಗಾ ಬಹ್ವೃಚಾಶ್ಚೈವ ತಥಾವಾಜಸನೇಯಿನಃ । ಉಚ್ಚನೀಚಂ ಸ್ವರಂ ಪ್ರಾಹುಃ ಸ ವೈ ಭಾಷಿಕ ಉಚ್ಯತೇ** - *ಜೈ.ಮೀ.ಸೂ.೧೨೩.೩೦, ಶಾಬರ ಭಾಷ್ಯ ॥* ಈ ಪದ್ಧತಿಗೆ **'ಗಾಥಾಸ್ವರ'** ವೆಂದೂ ಹೆಸರಿದೆ - *ನಾ,ಶಿ.ಶೋಭಾಕರ ಭಾಷ್ಯ ೧.೧.೧೩. ॥* **ಛನ್ದೋಗಾನಾಂ ವಾಜಸೇನೇಯಾನಾಂ ಚ ಬ್ರಾಹ್ಮಣೇ ಗಾಥಾಸ್ವರೌ ಪ್ರಥಮದ್ವಿತೀಯೌ ಭವತಃ ।** *ನಾ.ಶಿ. ೧.೧.೧೩ ಶೋಭಾಕರ ಭಾಷ್ಯ ॥* ಈ ಗಾಥಾಸ್ವರ ಬ್ರಾಹ್ಮಣಸ್ವರ ಸಂಹಿತಾಸ್ವರಕ್ಕಿಂತ ಭಿನ್ನವಾಗಿದೆ. ಸಂಹಿತೆಯ ಉದಾತ್ತಸ್ವರ ಬ್ರಾಹ್ಮಣದಲ್ಲಿ ಅನುದಾತ್ತವಾಗಿರುತ್ತದೆ. ಸಂಹಿತೆಯ ಸ್ವರಿತ ಮತ್ತು ಅನುದಾತ್ತಗಳು ಬ್ರಾಹ್ಮಣದಲ್ಲಿ ಉದಾತ್ತವಾಗಿರುತ್ತವೆ. ಈ ಸಿದ್ಧಾನ್ತವನ್ನು ಕಾತ್ಯಾಯನರು ಭಾಷಿಕಾ ಸೂತ್ರದಲ್ಲಿ ವಿವೇಚಿಸಿದ್ದಾರೆ.

**ಏಕಸ್ವರ ಪದ್ಧತಿ :** ಕೇವಲ ಒಂದೇ ಸ್ವರದಿಂದ ಮಂತ್ರೋಚ್ಚಾರಣೆಯಾಗುವ ಬಗೆಗೆ ಈ ಹೆಸರಿದೆ. ಇದಕ್ಕೆ **'ತಾನ'** ಎಂಬ ಸಂಜ್ಞೆ ಇದೆ, **ತಾನೋ ಅನ್ಯೇಷಾಂ ಬ್ರಾಹ್ಮಣ ಸ್ವರಃ** - *ಭಾ.ಸೂ. ೩.೨೮ ।* ವೈದಿಕ ಗ್ರಂಥಗಳಲ್ಲಿ ದೂರದಲ್ಲಿರುವವರನ್ನು ಕರೆಯಲೂ ಯಜ್ಞದಲ್ಲಿ **'ವೌಷಟ್'** ಶಬ್ದೋಚ್ಚಾರಣೆಯಲ್ಲೂ ಈ ಏಕಶ್ರುತಿ ವಿಧಾನವಿದೆ. **ಏಕಶ್ರುತಿರ್ದೂರಾತ್ ಸಂಬುದ್ಧೌ । ಯಜ್ಞಕರ್ಮಣ್ಯ ಜಪನ್ಯೂಙ್ಖಸಾಮಸು । ಉಚ್ಚೈಸ್ತರಾಂ ವಾ ವಷಟ್ಕಾರಃ ।** *ಪಾಣಿನೀ ೧.೨.೩೩.೩೫ ॥* ಯಜ್ಞದಲ್ಲಿ ಏಕಸ್ವರ ಪದ್ಧತಿ ಇದೆ. ಅನೇಕ ಬ್ರಾಹ್ಮಣಗಳಿಗೆ ಸ್ವರವಿಲ್ಲ. ಕಾವ್ಯದಲ್ಲಿ ಸ್ವರಪ್ರಕ್ರಿಯೆಗಳಿಗೆ ಅವಕಾಶವೇ ಇಲ್ಲ.

ಸಾಮವೇದದ ಆರ್ಚಿಕ ಸಂಹಿತೆಯಲ್ಲಿ ತ್ರೈಸ್ವರ್ಯ ಪದ್ಧತಿ ಕಂಡುಬರುತ್ತದೆ. ಋಗ್ವೇದ ಮನ್ತ್ರಗಳಲ್ಲಿರುವ ಅದೇ ಸ್ವರಗಳೇ ಸಾಮವೇದ ಆರ್ಚಿಕದ ಆಯಾ

ಮನ್ತ್ರಗಳಲ್ಲಿದ್ದರೂ ಅಲ್ಲಲ್ಲೇ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ -

ಉದಾತ್ತಸ್ವರವು ಅರ್ಧರ್ಚ ಅಥವಾ ಋಕ್‌ನ ಅಂತ್ಯದಲ್ಲಿದ್ದಾಗ :

೧ ೨ ೩ ೨ ೩ ೨
**....ದೋಷಾವಸ್ತರ್ಧಿಯಾ ವಯಮ್ ।** *ಸಾ. ಋ.೧೪ ॥* **....ದೋಷಾವಸ್ತರ್ಧಿಯಾ ವಯಮ್ ।** *ಋ.೧.೧.೭ ॥* ವಯಮ್ - ನಲ್ಲಿನ 'ಯ' ಋಗ್ವೇದದಲ್ಲಿ ಉದಾತ್ತವಾಗಿದೆ. ಸಾಮವೇದದಲ್ಲಿ ಸ್ವರಿತ ಚಿಹ್ನೆ ೨ ಎಂದು ಅಂಕಿತವಾಗಿದೆ.

ಉದಾತ್ತಾನಂತರ ಸನ್ನತರ ಅನುದಾತ್ತ ಬಂದು ತಕ್ಷಣವೇ ಉದಾತ್ತ ಅಥವಾ ಸ್ವತಂತ್ರಸ್ವರಿತ ಬಂದಿದ್ದರೆ :

೨೩ ೧ ೨ ೩ ೧ ೨
**ಅಗ್ನಆಯಾಹಿವೀತಯೇ....***ಸಾ. ಋ.೧.* ।**ಅಗ್ನಆಯಾಹಿವೀತಯೇ....** *ಋ.೬.೧೬.೧೦*

**'ಅಗ್ನ'** ದಲ್ಲಿನ ಪ್ರಥಮವರ್ಣ 'ಅ' ಮೂಲತಃ ಉದಾತ್ತವಾಗಿದ್ದು ಮುಂದೆ ಅನುದಾತ್ತವಾದುದರಿಂದ ಸ್ವರಿತವಾಗಿ ಪರಿವರ್ತನೆಯಾಗಿದೆ.

ಎರಡು ಅಥವಾ ಎರಡಕ್ಕಿಂತ ಹೆಚ್ಚು ಉದಾತ್ತ ಸನ್ನತರ ಅನುದಾತ್ತಕ್ಕಿಂತ ಮುಂಚೆ ಇರುವಾಗ ಈ ಉದಾತ್ತಗಳ ಪ್ರಥಮ ಉದಾತ್ತವು ಸ್ವರಿತವಾಗಿರುತ್ತದೆ. ಇದಕ್ಕೆ ಕಾರಣ ವಾಕ್ಯಾನ್ತದಲ್ಲಿ ಸ್ವರಘಾತವು ನೀಚವಾಗಿರುವುದೇ ಆಗಿದೆ.

೨ಉ ೩ ೧ ೨
**ಶಂಯೋರಭಿಸ್ರವನ್ತು ನಃ ।** *ಸಾ. ಋ. ೩೩ ॥* **ಶಂಯೋರಭಿಸ್ರವನ್ತು ನಃ ।** *ಋ.೧೦.೯.೪ ॥*

ಸಾಮವೇದದ ಆರ್ಚಿಕ ಸಂಹಿತೆಯ ಸ್ವರಾಂಕನದಲ್ಲಿ ತ್ರೈಸ್ವರ್ಯಪದ್ಧತಿ ಅನುಸರಿಸಿದರೂ ಕೆಲವು ವ್ಯತ್ಯಾಸಗಳನ್ನು ಕಾಣಬಹುದು. ಋಕ್ ಯಜು ಅಥರ್ವಣ ವೇದಗಳಲ್ಲಿ ಉದಾತ್ತ ಸ್ವರಕ್ಕೆ ಚಿಹ್ನೆ ಇರುವುದಿಲ್ಲ. ಅನುದಾತ್ತವನ್ನು ವರ್ಣದ ಕೆಳಗೆ ಅಡ್ಡಗೀಟಿನಿಂದಲೂ - ಸ್ವರಿತವನ್ನು ವರ್ಣದ ಮೇಲೆ ಲಂಬ ರೇಖೆಯಿಂದಲೂ ಅಂಕಿತ ಮಾಡಿರುತ್ತದೆ. ಸಾಮ ವೇದದಲ್ಲಿ ವರ್ಣಗಳ ಮೇಲೆ ೧/೨/೩ ಅಂಕೆಗಳಿಂದ ಸ್ವರಾಂಕನ ಮಾಡಿರುತ್ತದೆ.

**'ಉದಾತ್ತ'** - ಅಕ್ಷರವು ಹುಟ್ಟುವ ಕಂಠದ ಮೇಲ್ಭಾಗದ ಸ್ಥಾನಗಳನ್ನು ಜಠರಾಗ್ನಿಯು ತಳ್ಳಿದ ವಾಯುವು, ಸ್ಪರ್ಶಿಸಿದಾಗ ಆಗುವ ಆಘಾತದಿಂದ ಉದಾತ್ತವು ಜನಿಸಿ ಎತ್ತರ ಧ್ವನಿಯಲ್ಲಿ ಉಚ್ಚಾರವಾಗುವ ಸ್ವರವಾಗಿದೆ - **ಉಚ್ಚೈಃ ಕರಾಣಿ ಶಬ್ದಸ್ಯ ॥** *ಫ.ಪಾ.ಭಾ.*

೧.೨.೨೯ ॥ ಕಂಠದ ಹರಹು ಸಂಯಮ ನಿಯಮಗಳು ಸ್ವರದ ಕಠಿನತೆ ಒರಟುತನ ಇತ್ಯಾದಿ ಸ್ಥಿತಿಗಳಲ್ಲಿ ಉಚ್ಚರಿಸುವಾಗ ಕಂಠವನ್ನು ಕುಗ್ಗಿಸಿ ಸಣ್ಣದು ಮಾಡಿಕೊಳ್ಳುವುದು. ಉದಾತ್ತ ಸ್ವರೋಚ್ಚಾರಣೆಯ ಉಚ್ಚಸ್ಥಿತಿಗಳಾಗಿರುತ್ತವೆ. **ಉಚ್ಚೈರಾದೀಯತೇ ಉಚ್ಚಾರ್ಯತೇ ಇತಿ ಉದಾತ್ತಃ ॥ ಉಚ್ಚೈರುದಾತ್ತಃ** ಇದನ್ನು ಸಾಮವೇದ ಋಕ್‌ಸಂಹಿತೆಯಲ್ಲಿ ಅಂದರೆ ಛನ್ದಾರ್ಚಿಕದಲ್ಲಿ ಅಕ್ಷರದ ಮೇಲೆ ೧ ಸಂಖ್ಯೆಯಿಂದ ನಿರ್ದೇಶಿಸಿ ಬಲಗೈ ಹೆಬ್ಬೆರಳಿನಿಂದ ಪ್ರದರ್ಶಿಸಲಾಗುತ್ತದೆ -

೧ ೨ ೩ ೧
ಉದಾ : **ತ್ವಂ ನೋ ಅಗ್ನೇ ತ್ವಂ** ಸ್ವರಿತಕ್ಕೆ ಪೂರ್ವವಾದದ್ದು ಉದಾತ್ತ ಸಾಧಾರಣವಾಗಿ ಅನುದಾತ್ತಕ್ಕೆ ಪರವಾದ ಪ್ರಾರಂಭದಲ್ಲಿರುವ ದ್ವಿತೀಯ ಸ್ವರ ಉದಾತ್ತ - ಉದಾತ್ತಾನುದಾತ್ತಗಳ ಮಧ್ಯೆ ಉದಾತ್ತ ಸ್ವರಗಳ ಎರಡು ವರ್ಣಗಳಿದ್ದಾಗ ಪ್ರಥಮ ವರ್ಣಕ್ಕೆ ೨u ಎಂಬ

೨u ೩ ೨ ೩
ಶಿವಕೋದಾತ್ತದ ಚಿಹ್ನೆ ಇರುತ್ತದೆ. ಉದಾ : **ಆದಿತ್ಪ್ರತ್ನಸ್ಯ ॥**

ಉದಾತ್ತಾನಂತರ ಅನುದಾತ್ತ ಬಂದರೆ ಆ ಉದಾತ್ತವನ್ನು ಆ ವರ್ಣದ ಮೇಲೆ '೨'
೨೩ ೧ ೨ ೨
ರಿಂದ ಅಂಕಿತ ಮಾಡಲಾಗುತ್ತದೆ. **ಅಗ್ನ ಆಯಾಹಿ - ಅ** ಒಂದಕ್ಕಿಂತ ಹೆಚ್ಚು ಉದಾತ್ತ ವರ್ಣಗಳು ಪಾದದ ಅಂತ್ಯದಲ್ಲಿ ಬಂದರೆ ಅದರಲ್ಲಿ ಪ್ರಥಮ ಉದಾತ್ತವನ್ನು ೨ ರಿಂದ
೩ ೨
ಅಂಕಿತ ಮಾಡಿ ಉಳಿದವನ್ನು ಅಂಕಿತ ಮಾಡದೆ ಬಿಡುತ್ತಾರೆ. ಉದಾ : **ಮಹಾಜ್‌ಹಿಷಃ -**
೨
**ಹಾಜ್** । ಅನೇಕ ಉದಾತ್ತಗಳು ಎಡೆಬಿಡದೆ ಬಂದು ನಂತರ ಅನುದಾತ್ತ ಬಂದರೆ, ಪ್ರಥಮ ಉದಾತ್ತಕ್ಕೆ **'೨ಉ'** ಚಿಹ್ನೆಯನ್ನು ನೀಡಿ ಉಳಿದವನ್ನು ಅಂಕಿತ
೨ಉ ೨ ೧ ೨ ೨ಉ
ಮಾಡದೆ ಬಿಡಲಾಗುತ್ತದೆ. ಉದಾ : **ತ್ವಮಿತ್ಸಪ್ರಥಾ - ತ್ವ** ಅನೇಕ ಉದಾತ್ತಗಳು ಎಡೆಬಿಡದೆ ಬಂದನಂತರ ಸ್ವರಿತ ಬಂದರೆ ಪ್ರಥಮ ಉದಾತ್ತವನ್ನು ಆ ವರ್ಣದ ಮೇಲೆ '೧ರ' ಎಂದು
೧೦
ಅಂಕಿತ ಮಾಡಿ ಉಳಿದವನ್ನು ಹಾಗೆಯೇ ಬಿಡುತ್ತಾರೆ. ಉದಾ : **ಮಿತ್ರಂ ನ ಶಂಶಿಷಮ್ ॥**

**'ಅನುದಾತ್ತ'** - ತಾಲು ಆದಿ ಸ್ಥಾನಗಳ ಕೆಳಭಾಗದಲ್ಲಿ ವಾಯುವಿನ ಆಘಾತವು ಆದಾಗ ಹುಟ್ಟುವ ಕುಗ್ಗಿದ ಸ್ವರ - **ನೀಚೈರನುದಾತ್ತಃ ॥ ಅನ್ವವಸರ್ಗೋ ಮಾರ್ದವ ಮರುತಾ ಖಸ್ಯೇತಿ ನೀಚೈಃ ಕರಾಣಿ ಶಬ್ದಸ್ಯ ॥** ಅಂಗಗಳ ಶಿಥಿಲತೆ ಸ್ವರದ ಕೋಮಲತೆ ಸ್ನಿಗ್ಧತೆ ಕಂಠವನ್ನು ಅಗಲಿಸಿಕೊಳ್ಳುವಿಕೆಗಳು ಅನುಧಾತ್ತ ಸ್ವರೋಚ್ಚಾರಣೆಯ ನೀಚಸ್ಥಿತಿಯಾಗಿರುತ್ತದೆ. ಸಾಮ

ವೇದದ ಋಕ್‌ಸಂಹಿತೆಯಲ್ಲಿ ಅನುದಾತ್ತವನ್ನು ೩ ಸಂಖ್ಯೆಯಿಂದ ನಿರ್ದೇಶಿಸಿ ಮಧ್ಯದ
೨ ೩ ೧ ೨ ೩ ೧ ೨
ಬೆರಳಿನ ಮಧ್ಯದರೇಖೆಯಿಂದ ಪ್ರದರ್ಶಿಸಲಾಗುತ್ತದೆ. ಉದಾ : **ಅಗ್ನ ಆಯಾಹಿ ವೀತಯೇ**
ಸ್ವತಂತ್ರ ಸ್ವರಿತದಿಂದ ಪೂರ್ವವರ್ತೀ ಅನುದಾತ್ತವನ್ನು ೩ಕ ಚಿಹ್ನೆಯಿಂದ ಅಂಕಿತ
೩ಕ ೧೦ ೧೦ ೩ಕ
ಮಾಡಲಾಗುತ್ತದೆ. **ಅಭ್ಯೇತಿ ರೇಭನ್ – ಅ** । ಎರಡು ಅಥವಾ ಎರಡಕ್ಕಿಂತ ಹೆಚ್ಚು ಅನುದಾತ್ತ
ಗಳು ಎಡಬಿಡದೆ ಬಂದರೆ ಪ್ರಥಮ ಅನುದಾತ್ತದ ವರ್ಣದ ಮೇಲೆ '೩' ಸಂಖ್ಯೆ ಯಿಂದ
೩ ೧೦ ೩
ಅಂಕಿತ ಮಾಡಿ ಉಳಿದವನ್ನು ಹಾಗೆಯೇ ಬಿಡಲಾಗುತ್ತದೆ - ಉದಾ : **ಜನಿತಾಗ್ನೇ ಜನಿ** ।

**ಸ್ವರಿತ – ಯ ಇದಾನೀಮುಭಯ ಗುಣಃ ಸ ತೃತೀಯಮಾಖ್ಯಾಂ ಲಭತೇ ॥** ಪಾ.ಪ.ಭಾ. ೧.೨.೩೧ ॥ ಬೇರೆ ಬೇರೆ ಗುಣಗಳುಳ್ಳ ಉದಾತ್ತಾನುದಾತ್ತಗಳು ಸೇರುವುದರಿಂದ ಉಂಟಾಗುವ ಮೂರನೆಯ ಸ್ವರವು ಸ್ವರಿತವೆನಿಸಿಕೊಳ್ಳುತ್ತದೆ ಇದೇ **ಸಮಾಹಾರಃ ಸ್ವರಿತಃ** ॥ ಸ್ವರಿತವು ಸಾಮವೇದ ಋಕ್‌ಸಂಹಿತೆಯಲ್ಲಿ ೨ ಸಂಖ್ಯೆಯಿಂದ ನಿರ್ದೇಶಿಸಲ್ಪಟ್ಟು
೨ ೩ ೧ ೨ ೨
ತರ್ಜನಿಯ ಮಧ್ಯದಿಂದ ಪ್ರದರ್ಶಿತವಾಗುತ್ತದೆ - **ಅಗ್ನ ಆಯಾಹಿ – ಯಾ** ॥ ಎರಡು ಅಥವಾ ಅದಕ್ಕಿಂತ ಹೆಚ್ಚು ಉದಾತ್ತಾನಂತರ ಸ್ವರಿತವಿದ್ದರೆ ವರ್ಣದ ಮೇಲೆ '೨ರ' ಅಂಕಿತ
೩ ೨ ೧ ೨ರ ೨ರ
ವಾಗುತ್ತದೆ. **ಬ್ರಹ್ಮಾ ಕಸ್ತಂ ಸಪರ್ಯತಿ ಸ** ಸ್ವತನ್ತ್ರ ಸ್ವರಿತಕ್ಕೆ ಪೂರ್ವ ಉದಾತ್ತವರ್ಣವಿಲ್ಲದೆ ಅದರ ನಂತರ ಅನುದಾತ್ತ ಅಥವಾ ಏಕಶ್ರುತಿ ಅಥವಾ ಅವಸಾನವಿದ್ದರೆ ಅಲ್ಲಿ ಸ್ವತಂತ್ರ
೩ಕ ೨ರ ೩ ೨ರ
ಸ್ವರಿತದ ವರ್ಣದ ಮೇಲೆ '೨ರ' ಅಂಕಿತವಾಗುತ್ತದೆ. **ಅಭ್ಯೇತಿರೇಭನ್ – ಭ್ಯೇಕಂಪಸ್ವರ –**

**ಕಂಪಸ್ವರ :** ಸ್ವತನ್ತ್ರ ಸ್ವರಿತಾನಂತರ ಉದಾತ್ತ ಅಥವಾ ಸ್ವತನ್ತ್ರಸ್ವರಿತ ಬಂದಾಗ ಪೂರ್ವ ಸ್ವರಿತದ ಅನುದಾತ್ತಾಂಶದ ಉಚ್ಚಾರಣೆಯಲ್ಲಿ ಕಂಪವಿರುತ್ತದೆ. ಅದನ್ನು ಹ್ರಸ್ವವಾಗಲಿ ದೀರ್ಘ ವಾಗಲಿ '೩' ಚಿಹ್ನೆಯಿಂದ ತೋರಿಸಲಾಗುತ್ತದೆ. ಇದರಲ್ಲಿ ಸ್ವತಂತ್ರಸ್ವರಿತವಿರುವ ವರ್ಣವು ನಿಶ್ಚಿತ ರೂಪವಾಗಿ ದೀರ್ಘವಾಗುತ್ತದೆ. ಸ್ವತನ್ತ್ರ ಸ್ವರಿತಕ್ಕೆ ಪೂರ್ವ ಅನುದಾತ್ತವಿದ್ದರೆ, ಸ್ವತನ್ತ್ರ
೩ ೨ ೨
ಸ್ವರಿತದ ಮೇಲೆ '೨' ಅಂಕಿತವಾಗುತ್ತದೆ. **ಪಾಹ್ಯುಃತ** । ಸ್ವತನ್ತ್ರ ಸ್ವರಿತ ಉದಾತ್ತಪೂರ್ವವಿದ್ದರೆ ಕಂಪಸ್ವರವು ಹ್ರಸ್ವವಾಗಿರದೆ ದೀರ್ಘವಾಗಿಯೇ ಇರುವುದರಿಂದ ಅದರ ಮೇಲೆ '೨' ಅಂಕಿತ
೨ ೧
ವಾಗುವುದಿಲ್ಲ. **ತ್ವಂಹ್ಯಾಃಙ್ಗ** ॥

ಸ್ವಾರ : ಉಚ್ಚ ನೀಚವಾದ ಉದಾತ್ತಾನುದಾತ್ತಗಳ ಮಧ್ಯದಲ್ಲಿರುವ ಸಾಧಾರಶ್ರುತಿಗೆ 'ಸ್ವಾರ' ವೆನ್ನುತ್ತಾರೆ. ಇದು ವರ್ಣಸ್ವಾರ ಅತೀತಸ್ವಾರ ಎಂದು ಎರಡುಬಗೆ. ಪ್ರಥಮಾದಿ

೧ ೧೧೧ ೨ ೧೧೧ ೩ ೧೧೧

**ಕಿನೇಽ೨೩೪೫** ॥ ದ್ವಿತೀಯಾದಿ **ವಾಽ೩೪೫** ॥ ತೃತೀಯಾದಿ **ಹಜ್ಽ೨೪೫** ॥

**ಪ್ರಚಯ** : ಉದಾತ್ತಕ್ಕೆ ಸ್ವರ, ಪರವಾದಾಗಲೂ ಸ್ವರಿತದ ಮುಂದೆ ಸ್ವರಿತವೇ ಬಂದಾಗಲೂ, ಅದು 'ಪ್ರಚಯ' ವೆನಿಸುತ್ತದೆ.

**ಪ್ರಚಯಃ ಸಂಖ್ಯಾತಃ ಪರಿಮಾಣಾಚ್ಚ ಪ್ರಚಯಾದಪಿ ಜಾಯತೇ ।**
**ಪ್ರಚಯಃ ಶಿಥಿಲಾಖ್ಯೋ ಯಂ ಸಂಯೋಗಸ್ತೇನ ಜಾಯತೇ ॥**

ಶಿಥಿಲವಾದ ಸಂಯೋಗ ಅಂದರೆ ಸಡಿಲವಾಗಿ ಅಂಟಿಕೊಂಡಿರುವುದು **ಪ್ರಚಯ ಸ್ವರಿತಾತ್ಪರಂ ವಿದ್ಯಮಾನಾ ಸರ್ವೇ ವರ್ಣಾಃ ಪ್ರಚಯಃ । ಪೃಥಕ್ ಸಂಕೇತೋ ನಾಸ್ತಿ ।** ಪ್ರಚಯ ಪರವಾಗಿ ಸ್ವರಿತ ನಶಿಸಿದರೆ ಅದನ್ನು ನಿಪಾತವೆನ್ನುತ್ತಾರೆ.

ಈ ಮೂರೂ ಸ್ವರಗಳ ಆಶ್ರಯ ಸ್ಥಾನಗಳು ಹೀಗಿವೆ.

**ಅನುದಾತ್ತೋ ಹೃದಿಜ್ಞೇಯಃ ಮೂರ್ಧ್ನ್ಯುದಾತ್ತ ಉದಾಹೃತಃ ।**
**ಸ್ವರಿತಃ ಕರ್ಣಮೂಲೀಯಃ ಸರ್ವಾಸ್ಯೇ ಪ್ರಚಯಃ ಸ್ಮೃತಃ ॥** *ಪಾ. ಶಿ. ॥*

ವ್ಯಂಜನವು ಉದಾತ್ತಾನುದಾತ್ತ ಸ್ವರಿತ ಸ್ವರಗಳನ್ನು ಅನುಸರಿಸುವುದರಿಂದ ಈ ಮೂರೂಪ್ರಧಾನ ಸ್ವರಗಳನ್ನು 'ಸೂತ್ರ'ವೆಂದೂ ವ್ಯಂಜನಗಳನ್ನು ಸೂತ್ರದಲ್ಲಿನ ಮಣಿಗಳೆಂದೂ ಪರಿಗಣಿಸಲಾಗಿದೆ. ಶಕ್ತಿಯುತ ರಾಜನು ದುರ್ಬಲ ರಾಜರನ್ನು ತನ್ನ ಅಧಿಕಾರಕ್ಕೊಳಪಡಿಸಿಕೊಳ್ಳುವಂತೆ ಸಬಲ ವ್ಯಂಜನಗಳು ದುರ್ಬಲ ವ್ಯಂಜನಗಳನ್ನು ತಮ್ಮೊಳಗು ಮಾಡಿಕೊಳ್ಳುತ್ತವೆ.

**ಸಪ್ತ ಸ್ವರಗಳು : ತ ಏತೇ ತನ್ತ್ರೇ ತರ ನಿರ್ದೇಶೇ ಸಪ್ತಸ್ವರಾಃ ಭವನ್ತಿ । ಉದಾತ್ತಃ ಉದಾತ್ತತರಃ ಅನುದಾತ್ತಃ ಅನುದಾತ್ತ ತರಃ ಸ್ವರಿತಃ । ಸ್ವರಿತೇ ಯಃ ಉದಾತ್ತಃ ಸೋಽನ್ಯೇನ ವಿಶಿಷ್ಟಃ ಏಕಶ್ರುತಿಃ ಸಪ್ತಮಃ ॥** *ಪಾ. ಪ. ಭಾ. ೧.೨.೩೩ ॥* ಉದಾತ್ತಾದಿಗಳ ತರ ವ್ಯವಸ್ಥೆಯಿಂದ ಏಳುಸ್ವರಗಳು ಉದಯವಾಗುತ್ತವೆ. ಉದಾತ್ತ ಉದಾತ್ತತರ ಅನುದಾತ್ತ ಅನುದಾತ್ತತರ ಸ್ವರಿತ. ಸ್ವರಿತದಲ್ಲಿ ಉದಾತ್ತವಾಗಿ ಬೇರೆಯದಕ್ಕಿಂತ ವಿಶಿಷ್ಟವಾದುದು **ಸ್ವರಿತೋದಾತ್ತ, ಏಕಶ್ರುತಿಃ ॥** ಹೀಗೆ ಉದಾತ್ತಾದಿ ಏಳು ಸ್ವರಗಳು **ಸ್ವರಾಃ ಷಡ್ಜ ಋಷಭ**

**ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಾಃ ॥** *ಪಿಂಗಲ ೩.೬೪ //* **ಏಷಾಂ ಲಕ್ಷಣ ವ್ಯವಸ್ಥಾ ಗಾಂಧರ್ವವೇದ ಪ್ರಸಿದ್ಧ ಗ್ರಾಹ್ಯಾಃ ॥** ಹೀಗೆ ಷಡ್ಜಾದಿ ಏಳುಸ್ವರಗಳು ಉದಯವಾಗುತ್ತವೆ.

ಶ್ರೋತ್ರ ಗೋಚರವಾಗುವ ಈ ಸ್ವರಗಳು ಚಕ್ಷುಗೋಚರವಾಗಿ ಉಪಾಸನೆ ಮಾಡಲು ಸುಲಭವಾಗಬಹುದೆಂದು ಸ್ವರಗಳ ವರ್ಣಗಳ ಬಣ್ಣಗಳನ್ನು ತಿಳಿಸುತ್ತಿದ್ದಾರೆ. **ಶುಕ್ಲಗುಣಃ ಶುಕ್ಲಃ ಕೃಷ್ಣಗುಣಃ ಕೃಷ್ಣಃ ॥** ಬಿಳಿಯ ಗುಣವುಳ್ಳದ್ದು ಬಿಳಿಯದು ಕಪ್ಪುಗುಣ ವುಳ್ಳದ್ದು ಕಪ್ಪು. **ಯ ಇದಾನೀಮುಭಯ ಗುಣಃ ಸತೃತೀಯಮಾಖ್ಯಾಂ ಲಭತೇ ॥** ಎರಡೂ ಗುಣವುಳ್ಳದ್ದನ್ನು ಮೂರನೆಯ ಗುಣವೆನ್ನುತ್ತಾರೆ. **ಕಲ್ಮಾಷ ಇತಿ ವಾ ಸಾರಂಗ ಇತಿ ವಾ ॥** ಇದನ್ನು ಕಪ್ಪು ಬಿಳುಪು ಬೆರೆತ ವರ್ಣವೆಂದೂ ಚಿತ್ರವರ್ಣವೆಂದೂ ಹೇಳುತ್ತಾರೆ. **ಏವಮಿಹಾಪಿ ಉದಾತ್ತ ಉದಾತ್ತಗುಣಃ ಅನುದಾತ್ತೋ ಅನುದಾತ್ತೋಽನುದಾತ್ತ ಗುಣಃ ಯ ಇದಾನೀಮುಭಯ ಗುಣಃ ಸ ತೃತೀಯಮಾಖ್ಯಾಂ ಲಭತೇ ॥** *ಪಾ.ಪ.ಭಾ. ೧.೨.೩೧. //* **ಷಡ್ಜಸ್ವರವು** - ಕಮಲಪತ್ರದಂತಹ ಹಸಿರುಬಣ್ಣದ್ದು, **ಋಷಭ** - ಗಿಣಿಯ ಹಸಿರು ಮತ್ತು ಹಳದಿ ಛಾಯೆಯದು, **ಗಾಂಧಾರ** - ಚಿನ್ನದ ಕಾಂತಿಯ ಬಣ್ಣದ್ದು. **ಮಧ್ಯಮ** - ಮೊಲ್ಲೆ ಹೂವಿನಂತಹ ಬಿಳಿಯ ಬಣ್ಣದ್ದು **ಪಂಚಮಸ್ವರ** - ಶ್ಯಾಮಲ ವರ್ಣದ್ದು **ಧೈವತ** - ಹಳದಿ ಬಣ್ಣದ್ದು, **ನಿಷಾದ** - ಸ್ವರ ಎಲ್ಲಾ ಬಣ್ಣದ್ದೂ ಆಗಿವೆ.

**ಸ ಏಕೋಽವರ್ಣಃ ಬಹುಧಾ ಶಕ್ತಿಯೋಗಾದ್ವರ್ಣಾನನೇಕಾನ್ನಿಹಿತಾರ್ಥೋ ದಧಾತಿ ॥** ಬಿಳಿ, ಕೆಂಪು, ಕಪ್ಪು, ಹಳದಿ, ಧೂಮ್ರ, ಕಪಿಲ, ಪಾಂಡುರವೆಂಬ ಬಿಳುಪು ಮತ್ತು ಹಳದಿ ಬೆರೆತ ಏಳು ಬಣ್ಣಗಳು ಷಡ್ಜಾದಿಗಳೊಂದಿಗೆ ಮೇಳೈಸಿ ಇಷ್ಟ, ಅನಿಷ್ಟ ಭಕ್ತಿ ಭಾವಗಳೊಂದಿಗೆ ಸೇರಿ ಹತ್ತು ಪ್ರಕಾರದ ಸ್ವರಗಳಿಗೂ ಶಬ್ದಗಳಿಗೂ ಜೀವವು ಆಶ್ರಯ ಸ್ಥಾನವಾಗಿದೆಯೆಂದು ಗರ್ಭೋಪನಿಷತ್ತು ತಿಳಿಸುತ್ತಿದೆ. ಮೂಲಾಧಾರಾದಿ ಚಕ್ರಗಳು ಈ ಬಣ್ಣಗಳಿಗೂ ಅಕಾರಾದಿ ಅಕ್ಷರಗಳಿಗೂ ಆಶ್ರಯಸ್ಥಾನವಾಗಿರುವುದೆಂದು ಗರುಡ ಪುರಾಣದಲ್ಲಿ ಪಠಿತವಾಗಿದೆ. ಇದನ್ನೇ ಮುಕ್ತಾವಿದ್ರುಮ **ಹೇಮ .... ತತ್ವಾರ್ಥ ವರ್ಣಾತ್ಮಿಕಾಂ ।** *ದೇ.ಭಾ. ೧೨.೩೧.* ಎಂದು ಧ್ಯಾನಮಾಡುತ್ತಿರುತ್ತೇವೆ. ಈ ಅಂಶಗಳು ಮನ್ತ್ರ ಚಿಕಿತ್ಸೆ, ನಾದ ಚಿಕಿತ್ಸೆ, ವರ್ಣ ಚಿಕಿತ್ಸೆಗಳಿಗೆ ಪೂಜೆ ಪುರಸ್ಕಾರಗಳ, ದೇವತೆಗಳ ಬಣ್ಣಗಳಿಗೂ ಅಲಂಕಾರಗಳಿಗೂ ಆಧಾರವಾಗಿರುವಂತಿವೆ.

**ಉಚ್ಚೌ ನಿಷಾದಗಾನ್ಧಾರೌ ನೀಚಾ ವೃಷಭ ಧೈವತೌ ।**
**ಶೇಷಸ್ತು ಸ್ವರಿತಾ ಜ್ಞೇಯಃ ಷಡ್ಜ ಮಧ್ಯಮ ಪಂಚಮಾಃ ॥**

ನಿಷಾದ ಗಾನ್ಧಾರೌ ಉಚ್ಚೌ ಉದಾತ್ತಾನ್ತರ್ಭೂತೌ । ಋಷಭ - ಧೈವತೌ ನೀಚೌ ಅನುದಾತ್ತಾನ್ತರ್ಭೂತೌ । ಜ್ಞೇಯೌ ಇತಿ ಶೇಷಃ । ಶೇಷಾಃ ಷಡ್ಜ ಮಧ್ಯಮ ಪಂಚಮಾಃ ಸ್ವರಿತಾಃ ಸ್ವರಿತಾನ್ತರ್ಲೀನಾಃ । ಜ್ಞೇಯಾಃ ಬೋಧ್ಯಾಃ ॥ *ಯಾ.ಶಿ. ೧.೭.* ॥

ಉದಾತ್ತೇ ನಿಷಾದ ಗಾನ್ಧಾರಾವನುದಾತ್ತೇ ಋಷಭ ಧೈವತೌ ।
ಸ್ವರಿತ ಪ್ರಭವಾಹ್ಯೇತೇ ಷಡ್ಜ ಮಧ್ಯಮ ಪಂಚಮಾಃ ॥ *ನಾ.ಶಿ.೧.೮.೮.* ॥

ಕಂಠಾದುತ್ತಿಷ್ಠತೇ ಷಡ್ಜಃ ಶಿರಸ್ತ್ವೃಷಭಃ ಸ್ಮೃತಃ ।
ಗಾನ್ಧಾರಸ್ತ್ವನುನಾಸಿಕ್ಯಃ ಉರಸೋ ಮಧ್ಯಮಃ ಸ್ವರಃ ॥

ಉರಸಶ್ಶಿರಸಃ ಕಂಠಾದುತ್ಥಿತಃ ಪಂಚಮಃ ಸ್ವರಃ ।
ಲಲಾಟಾದ್ಧೈವತಂ ವಿದ್ಯಾನ್ನಿಷಾದಂ ಸರ್ವಸನ್ಧಿಜಮ್ ॥ *ನಾ.ಶಿ. ೧.೫.೬,೭* ॥

ನಿಷಾದ ಗಾಂಧಾರ ಸ್ವರಗಳು ಉದಾತ್ತದಲ್ಲೂ ಋಷಭ ಧೈವತಗಳು ಅನುದಾತ್ತದಲ್ಲೂ ಷಡ್ಜ ಮಧ್ಯಮ ಪಂಚಮಗಳು ಸ್ವರಿತದಲ್ಲೂ ಇವೆ. ಪ್ರಾಣವಾಯು ನಾಸಿಕ ಕಂಠ ಎದೆ ಅಂಗಳು ಜಿಹ್ವೆ ಮತ್ತು ದನ್ತಗಳೆಂಬ ಆರು ಸ್ಥಾನಗಳ ಆಶ್ರಯ ಪಡೆದಾಗ ನವಿಲಿನ ಧ್ವನಿಯಂತಹ '**ಷಡ್ಜಸ್ವರ**' ಉದಯವಾಗುತ್ತದೆ. ನಾಭಿಯಿಂದ ಎದ್ದ ವಾಯು, ಕಂಠ ಮತ್ತು ಶಿರಸ್ಸನ್ನು ಘರ್ಷಿಸಿದಾಗ ಗೂಳಿಯ ಗುಟುರೆಯಂತಹ '**ಋಷಭ**' ಸ್ವರ ಉದಯವಾಗುತ್ತದೆ. ನಾಭಿಯಿಂದ ಎದ್ದ ವಾಯು ಕಂಠ ಮತ್ತು ಶಿರಸ್ಸಿನಲ್ಲಿ ಸಮಾಹತವಾದಾಗ ಆಡಿನ ಧ್ವನಿಯಂತಹ '**ಗಾನ್ಧಾರ**' ಸ್ವರ ಉದಯವಾಗುತ್ತದೆ. ನಾಭಿಯೆಂದೆದ್ದ ವಾಯು ಎದೆ ಮತ್ತು ಹೃದಯದಲ್ಲಿ ಸಮಾಹತವಾಗಿ ನಾಭಿಯನ್ನು ಸೇರಿದಾಗ ನೀರುಕೊಕ್ಕರೆ ಎನ್ನುವ ಕ್ರೌಂಚ ಪಕ್ಷಿಯ ಧ್ವನಿಯಂತಹ'**ಮಧ್ಯಮ**' ಸ್ವರ ಉದಯವಾಗುತ್ತದೆ. ನಾಭಿಯಿಂದೆದ್ದ ವಾಯು ಎದೆ ಹೃದಯ, ಕಂಠ ಮತ್ತು ಶಿರಸ್ಸನ್ನು ಘರ್ಷಿಸಿದಾಗ ಕೋಗಿಲೆಯ ಧ್ವನಿಯಂತಹ '**ಪಂಚಮ**' ಸ್ವರ ಉದಯವಾಗುತ್ತದೆ. ಈ ಪೂರ್ವೋತ್ಥಿತ ಸ್ವರಗಳನ್ನೂ ಅತಿ ಸಂಧಾನ ಮಾಡುವಾಗ ಕೇಳಿಸುವ ಕುದುರೆಯು ಕೆನೆಯುವಂತಹ '**ಧೈವತ**' ಸ್ವರ ಉದಯವಾಗುತ್ತದೆ. ಯಾವುದರ ಧ್ವನಿಯಿಂದ ಉಳಿದೆಲ್ಲಾ ಸ್ವರಗಳು ಅಡಗಿಹೋಗುವುವೋ ಆಗ ಆನೆ ಘೀಳಿಡುವಂತಹ '**ನಿಷಾದ**' ಸ್ವರ ಉದಯವಾಗುತ್ತದೆ. ಷಡ್ಜಾದಿಗಳ ಪ್ರಥಮ ಅಕ್ಷರಗಳನ್ನಾಧರಿಸಿದ 'ಸ ರಿ ಗ ಮ ಪ ಧ ನಿ' ಅಕ್ಷರಗಳ ಸಂಕೇತಗಳಿಂದ ಲೌಕಿಕಗಾನ ರೂಪುಗೊಂಡಿದೆ.

ಸಾಮಗಾನದಲ್ಲಿ ಸಪ್ತಸ್ವರಗಳು ಅವರೋಹಣ ಕ್ರಮದಲ್ಲಿರುವುದು ಇದರ ವೈಶಿಷ್ಟ್ಯ. ಸಾಮಗಾನವನ್ನು ಲಿಪಿ ಬದ್ಧ ಮಾಡುವಾಗ ಅಕ್ಷರಗಳ ಮೇಲೆ ಬರೆಯುವ ಸಂಖ್ಯೆಯನ್ನೂ

ಗಾನ ಮಾಡುವಾಗ ಉಪಯೋಗಿಸುವ ಬೆರಳುಗಳನ್ನೂ ಸಂವಾದಿಯಾದ ಸ್ವರಗಳ ಹೆಸರನ್ನೂ ಪದಕದಲ್ಲಿ ನಮೂದಿಸಲಾಗಿದೆ. ಆಯಾ ಸ್ವರಗಳನ್ನು ಆಯಾ ಬೆರಳುಗಳಲ್ಲಿನ ಸ್ಥಾನಗಳಲ್ಲಿ ಹೆಬ್ಬೆಟ್ಟಿನಿಂದ ಮುಟ್ಟಿತೋರಿಸಲಾಗುತ್ತದೆ.

**ಮಾತ್ರಾ :**

**ಮಾತ್ರಾ ತ್ರುಟೀ ಲವ ಲೇಶ ಕಣಾದಯಃ ॥** ಅಮರ // ಕಣ್ಣು ಮಿಟಕಿಸುವಷ್ಟು ಕಾಲ, ಮಿಂಚು ಹೊಳೆದು ಕಣ್ಮರೆಯಾಗುವ ಕಾಲ. ಖ ಫ ಶ ಆದಿ ಅಕ್ಷರಗಳ ಉಚ್ಚಾರಣಾ ಕಾಲ. ವೇದಾಕ್ಷರಗಳ ಉಚ್ಚಾರಣಾ ಸಮಯದಲ್ಲಿ ಪರಿಚ್ಛೇದವಿರುವ ಕಾಲ. **ಅರ್ಚಿಕೋಽಕ್ಷರ ಕಾಲ** 'ಮಾತ್ರಾ' ಎಂದು ವಿಧವಿಧವಾಗಿ ನಿರ್ವಚನ ಮಾಡಲಾಗಿದೆ. ಅಕ್ಷರದ ಅವಯವವಾಗಿದ್ದುಕೊಂಡು ಅಕ್ಷರವನ್ನು ಉಚ್ಚರಿಸುವ ಕಾಲ ವಿಶೇಷಕ್ಕೆ 'ಮಾತ್ರಾ' ಎನ್ನುತ್ತಾರೆ.

**ಏಕಮಾತ್ರೋ ಭವೇದ್ಧ್ರಸ್ವಃ ದ್ವಿಮಾತ್ರೋ ದೀರ್ಘ ಉಚ್ಯತೇ ।**
**ತ್ರಿಮಾತ್ರಾಸ್ತು ಪ್ಲುತೋ ಜ್ಞೇಯಃ ವ್ಯಂಜನಂ ತ್ವರ್ಧ ಮಾತ್ರಿಕಂ ॥**

ಸೂರ್ಯರಶ್ಮಿಯಲ್ಲಿ ಕಾಣುವ ಕಣವೇ ಅಣು. ಹೃದಯದಲ್ಲಿನ ಈ ಒಂದು ಅಣುಕಂಠದಲ್ಲಿ ಪ್ರವೇಶಿಸಿದಾಗ ಎರಡು ಅಣುವೂ ನಾಸಿಕಾಗ್ರವನ್ನು ಸಂಧಿಸಿದಾಗ ಮೂರು ಅಣುವೂ ಜಿಹ್ವಾಗ್ರವನ್ನು ಮುಟ್ಟಿದಾಗ ನಾಲ್ಕು ಅಣುವೂ ಆಗಿ ಒಂದು ಮಾತ್ರಾಕಾಲವೆನಿಸಿಕೊಳ್ಳುತ್ತದೆ. ಚೌಷ/ ಹಂಗನ ಹಕ್ಕಿಯ ಕೂಗಿನಂತಿರುವ ಹ್ರಸ್ವಾಕ್ಷರ ಒಂದು ಮಾತ್ರಾಕಾಲದ್ದು. ಕಾಗೆಯ ಕೂಗಿನಂತಿರುವ ದೀರ್ಘಾಕ್ಷರ ಎರಡು ಮಾತ್ರಾಕಾಲದ್ದು. ನವಿಲಿನ ಧ್ವನಿಯಂತಿರುವ ಪ್ಲುತಾಕ್ಷರ ಮೂರು ಮಾತ್ರಾಕಾಲದ್ದು. ದೀರ್ಘಾಕ್ಷರ ಮಾತ್ರಾ ಸಂಯುಕ್ತವಾದದ್ದು 'ವೃದ್ಧ' ಎನಿಸುತ್ತದೆ.

ಇದರ ನಿರ್ವಚನವು ಈ ರೀತಿಯಾಗಿಯೂ ಇದೆ. **ಚತುರ್ಥಾಂಶಾ ಮಾತ್ರಾ, ಪಾದ ಮಾತ್ರಾ ಅಣು । ಅರ್ಧಾಂಶ ಮಾತ್ರಾ - ಅರ್ಧಮಾತ್ರಾ । ಏಕಮಾತ್ರಿಕಂ ಹ್ರಸ್ವಮಕ್ಷರಮ್ । ದ್ವಿಮಾತ್ರಿಕಂ ಸಂಯುಕ್ತಾಕ್ಷರಂ ದೀರ್ಘಮಕ್ಷರಮ್ । ದ್ವಿಮಾತ್ರಾ ಸಂಯುಕ್ತಂ ಹ್ರಸ್ವಂ ತ್ರಿಮಾತ್ರಿಕಂ - ಪ್ಲುತಮ್ ॥ ಮಾತ್ರಾ ಸಂಯೋಗಾತ್ ದೀರ್ಘಮಕ್ಷರಂ ತ್ರಿಮಾತ್ರಿಕಂ ವೃದ್ಧಮ್ ॥ ವಿಸ್ವರಂ ಅಕ್ಷರಂ ಸ್ವರೇ ಸ್ವರೇ ತ್ರಿಮಾತ್ರಾ ಭವತಿ । ವೈಸ್ವಾರ್ಯ ಅತಿಕ್ರಮ ಕರ್ಷಣ ಸ್ವಾರೇಷು ॥** ಒಂದೇ ಸ್ವರ ಕ್ರುಷ್ಟದಲ್ಲಿದ್ದು ಸ್ವರಾಂತರವಾದುದು ವಿಸ್ವರ ಅತಿಕ್ರಮ ನಾಲ್ಕು ಬಗೆ. ಸ್ವಾರ ಮೂರು ವಿಧ. ಪ್ರತ್ಯುತ್ಕ್ರಮ ಐದು ವಿಧ. ಅರ್ಧಮಾತ್ರೆ ಏಳು ಬಗೆ. ವಿನತ ಪ್ರಣೆತ ಉತ್ಸ್ವ

# ಸಾಮಗಾನ

| | ಸಾಮಗಾನದಲ್ಲಿ | | ಆರ್ಚಿಕ | ವೇಣು ಗಾನದಲ್ಲಿ | | ಪ್ರಾಣಿ |
|---|---|---|---|---|---|---|
| ಸಂಖ್ಯೆ | ಸಂಜ್ಞೆ | ನಿರ್ದೇಶನ ಬೆರಳಿನಲ್ಲಿ | ಸ್ವರ | ಸ್ಥಾನ | ಸಂಕೇತ | ಧ್ವನಿ |
| ೭ | ಕ್ರುಷ್ಟ | ಅಂಗುಷ್ಠದ ತುದಿ | ಸ್ವರಿತ | ಪಂಚಮ | ಪ | ಕೋಗಿಲೆ |
| ೧ | ಪ್ರಥಮ | ಅಂಗುಷ್ಠದ ಮೂಲ | ಸ್ವರಿತ | ಮಧ್ಯಮ | ಮ | ಕ್ರೌಂಚ ನೀರುಕೋಳಿ |
| ೨ | ದ್ವಿತೀಯ | ತರ್ಜನೀ ಮಧ್ಯ | ಉದಾತ್ತ | ಗಾನ್ಧಾರ | ಗ | ಆಡು |
| ೩ | ತೃತೀಯ | ಮಧ್ಯಮ ಮಧ್ಯ | ಅನುದಾತ್ತ | ಋಷಭ | ರಿ | ಗೂಳಿ |
| ೪ | ಚತುರ್ಥ | ಅನಾಮಿಕಾ ಮಧ್ಯ | ಸ್ವರಿತ | ಷಡ್ಜ | ಸ | ನವಿಲು |
| ೫ | ಮನ್ದ್ರ | ಕನಿಷ್ಠಿಕಾ ಮಧ್ಯ | ಉದಾತ್ತ | ನಿಷಾದ | ನಿ | ಗಜ |
| ೬ | ಅತಿಸ್ವಾರ್ಯ | ಕನಿಷ್ಠಿಕಾ ಮೂಲ | ಅನುದಾತ್ತ | ಧೈವತ | ಧ | ಕುದುರೆ |

ಸಪ್ತಸ್ವರಾಃ ತ್ರಯೋ ಗ್ರಾಮಾ ಮೂರ್ಛನಸ್ತ್ವೇಕ ವಿಂಶತಿಃ ।
ತಾನ ಏಕೋನ ಪಂಚಾಶತ್ ಇತ್ಯೇತತ್ ಸ್ವರಮಂಡಲಮ್ ॥ *ನಾ. ಶಿ.* ॥

# ಸ್ವರಮಂಡಲ

| ಸ್ವರೋತ್ಪತ್ತಿ ಶರೀರದಲ್ಲಿ ವಾಯುಕ್ರಮಿಸುವ ಮಾರ್ಗ | ಅಧಿಷ್ಠಾನ ಬೃಹದ್ದೇವತಾ | ದೇವತೆ ಸಾ.ವಿ.ಬ್ರಾ. | ತೃಪ್ತಿ ಜೀವಿಗಳು | ರಸ ಸಂಗೀತ ವಿಜ್ಞಾನ | ವರ್ಣ ಗರ್ಭೋಪನಿಷತ್ತು ಮತ್ತು ಗರುಡ ಪುರಾಣ |
|---|---|---|---|---|---|
| ನಾಭಿ,ಎದೆ,ಹೃದಯ ಕಂಠ,ಶಿರಸ್ಸು | ಮಿತ್ರಾವರುಣ | ವಿಶ್ವೇದೇವತೆ ಪ್ರಜಾಪತಿ/ಬ್ರಹ್ಮ | ಅನ್ಯಜಗತ್ತು | ಶೃಂಗಾರ | ಶ್ಯಾಮಲ |
| ನಾಭಿ,ಎದೆ,ಹೃದಯ, ನಾಭಿ | ಆದಿತ್ಯರು | ಆದಿತ್ಯರು | ಮನುಷ್ಯರು | ಹಾಸ್ಯ | ಮೊಲ್ಲೆ ಹೂವಿನ ಬಿಳುಪು |
| ನಾಭಿ,ಕಂಠ,ಶೀರ್ಷ, ನಾಸಿಕ | ಸಾಧ್ಯರು | ಸಾಧ್ಯರು | ಗಂಧರ್ವ ಅಪ್ಸರೆ | ಕರುಣ, ಶಾಂತ | ಚಿನ್ನದ ಕಾಂತಿಯ ಹಳದಿ |
| ನಾಭಿ,ಕಂಠ,ಶೀರ್ಷ | ಅಶ್ವಿನೀ ದೇವತೆಗಳು | ಅಗ್ನಿ | ಪಶುಗಳು | ವೀರ | ಗಿಣಿಯ ಹಸಿರು ಹಳದಿಛಾಯೆ |
| ನಾಸಿಕ,ಕಂಠ,ಎದೆ, ಕಾಲು, ಜಿಹ್ವಾ ದಂತ | ವಾಯು, ಅಗ್ನಿ | ವಾಯು | ಪಿತೃ,ಅಂಡಜ | ರೌದ್ರ | ಕಮಲಪತ್ರದ ಹಸಿರು |
| ಈ ಸ್ವರದಲ್ಲಿ ಎಲ್ಲವೂ ಅಡಗಿಹೋಗುವುದು, | ಸೋಮ | ಸೋಮ | ಅಸುರ,ರಾಕ್ಷಸ, ನಿಷಾದರು | ಅದ್ಭುತ | ಎಲ್ಲಾ ಬಣ್ಣದ್ದು |
| ಹಿಂದಿನ ಸ್ವರಗಳನ್ನು ಅತಿಸಂಧಾನಮಾಡುವುದು | ಸೂರ್ಯ | ಮಿತ್ರಾವರುಣ | ಓಷಧಯೋ ವನಸ್ಪತಯಃ | ಬೀಭತ್ಸ | ಹಳದಿ |

| | | |
|---|---|---|
| ಅಭ್ಯಾಸ ಕಾಲದಲ್ಲಿ | .... | ದ್ರುತಗತಿ |
| ಪ್ರಯೋಗ ಕಾಲದಲ್ಲಿ | .... | ಮಧ್ಯಮಗತಿ |
| ಉಪದೇಶ/ಪಾಠ ಕಾಲದಲ್ಲಿ | .... | ವಿಲಂಬಿತಗತಿ |

ರಿತ, ಅಭಿಗೀತ ಇತ್ಯಾದಿ ಸ್ವರಭೇದ ಪ್ರಭೇದಗಳನ್ನು ಮಾತ್ರಾಸಂಖ್ಯೆಯ ಆಧಾರದಲ್ಲಿ ಗುರುತಿಸಲಾಗಿದೆ.

ಅಕಾರಾದಿ ಪ್ರತಿ ಅಕ್ಷರಕ್ಕೂ ಹ್ರಸ್ವ ದೀರ್ಘಪ್ಲುತ ಭೇದದಿಂದ ಮೂರು ಮೂರು ಮಾತ್ರೆಗಳಿರುತ್ತವೆ. ಅ ಇ ಉ ಋ ಸ್ವರಾಕ್ಷರಗಳೂ ಹ್ರಸ್ವ ದೀರ್ಘ ಪ್ಲುತ ಭೇದದಿಂದ ಮೂರು ಮೂರು ವಿಧ. ಇವು ಅನುನಾಸಿಕ ಅನನುನಾಸಿಕ ಭೇದದಿಂದ ಪ್ರತ್ಯೇಕ ಆರುವಿಧ. ಈ ಆರು ವಿಧವೂ ಉದಾತ್ತಾನುದಾತ್ತ ಸ್ವರಭೇದದಿಂದ ಪ್ರತ್ಯೇಕ ಹದಿನೆಂಟು ಬಗೆ. ಹೀಗೆ ಅ ಇ ಉ ಋ ಗಳು ಪ್ರತ್ಯೇಕ ಪ್ರತ್ಯೇಕವಾಗಿ ಹದಿನೆಂಟು ವಿಧಗಳಾಗುವುವು. ಲೃ ವರ್ಣಕ್ಕೆ ದೀರ್ಘವಿಲ್ಲವಾಗಿ ಹನ್ನೆರಡು ವಿಧ. ಏ ಓ ಐ ಔ ಗಳಿಗೆ ಹ್ರಸ್ವವಿಲ್ಲವಾದುದರಿಂದ ಹನ್ನೆರಡು ವಿಧ. ಹೀಗೆ ಮಾತ್ರಾ ವ್ಯತ್ಯಾಸದಿಂದ ಆಗುವ ವಿವಿಧ ಸ್ವರಗಳನ್ನು ಸತತ ಸಾಧನೆಯಿಂದ ಮಾತ್ರ ಗುರುತಿಸಿ ಒಲಿಸಿಕೊಳ್ಳಬೇಕು.

**ಪರ್ವಗಳು :** ಆರ್ಚಕಸಂಹಿತೆಯಲ್ಲಿ ಋಗ್ಗತಪಾದಕ್ಕಿರುವ ಸಂಕೇತವೂ ಅರ್ಥವೂ ಸಾಮಗಾನದ ಪರ್ವಗಳಿಗೂ ಅನ್ವಯಿಸುತ್ತದೆ. ಪ್ರತಿಯೊಂದು ಸಾಮಗಾನದಲ್ಲೂ ಸ್ವರಗಳು ಮೈದಳೆದಿರುವ ಸ್ವರ ವಿನ್ಯಾಸ ಪ್ರಕಾರಗಳ ವೈವಿಧ್ಯತೆಗಳನ್ನೂ ಕ್ರಮಗಳನ್ನೂ ಅರಿತು ಸ್ವರಲೋಪವಿಲ್ಲದಂತೆ ಗಾನವಾಗಲು ರೂಪಿತ ವಾಗಿರುವ ಅತ್ಯಂತ ಚಿಕ್ಕ ಸ್ವರಾಕ್ಷರಗಳ ಗುಂಪಿಗೆ/ ವಿಭಾಗಕ್ಕೆ/ ಗಾನ ಮಾಡುವಾಗಿನ ವಿರಾಮಕ್ಕೆ 'ಪರ್ವ' ಎಂದು ಹೆಸರಿಸಿದ್ದಾರೆ. ಗಾನಗಳಲ್ಲಿ ಐದರಿಂದ ಇಪ್ಪತ್ತೈದು ಪರ್ವಗಳಿರು ವುದನ್ನು ಕಾಣಬಹುದು. ಕೆಲವು ಪರ್ವಗಳಲ್ಲಿ ಒಂದೇ ಅಕ್ಷರವಿರಬಹುದು. ಉದಾ : । ಪೂ । ಗ್ರಾ೧೨೨ । ವಾ । ಗ್ರಾ೧೯೯. ಕೆಲವು ಪರ್ವಗಳಲ್ಲಿ ಎರಡು/ಮೂರು/ನಾಲ್ಕು ಅಥವಾ ಹೆಚ್ಚು ಅಕ್ಷರಗಳಿರಬಹುದು. ಸ್ವರವಿನ್ಯಾಸಗಳಿಗನುಗುಣವಾಗಿ ಈ ಪ್ರಕಾರಗಳನ್ನು ಹೀಗೆ ಗುರುತಿಸಲಾಗಿದೆ.

ಪರ್ವ



**ಏಕಸ್ವರಪರ್ವ :** ಒಂದೇ ತೆರನ ಸ್ವರದಗಾನವಿರುವ ಅಕ್ಷರಗಳ ಗುಂಪು ಏಕಸ್ವರ ಪರ್ವವೆಂದೆನಿಸಿಕೊಳ್ಳುತ್ತದೆ. ಈ ತೆರನ ಸ್ವರಪರ್ವಗಳ ಐದುಪ್ರಕಾರಗಳಿದ್ದು :

೧
ಅವುಗಳ ಉದಾಹರಣೆಗಳು ಹೀಗಿವೆ. ಪ್ರಥಮಸ್ವರದಲ್ಲಿ ಗಾನಮಾಡುವ । **ತದ್ವಿವಿಡ್ಢಾಇ** ।
೨
ಪರ್ವ, ದ್ವಿತೀಯ ಸ್ವರದಲ್ಲಿ ಗಾನಮಾಡುವ । **ಇನ್ದ್ರಂವಿಶ್ವಾಃ** । ಪರ್ವ, ತೃತೀಯ ಸ್ವರದಲ್ಲಿ
೩ ೪
ಗಾನಮಾಡುವ । **ಇ** । ಪರ್ವ, ಚತುರ್ಥಸ್ವರದಲ್ಲಿ ಗಾನಮಾಡುವ । **ಹಿತಾಃ** । ಪರ್ವ.
೫
ಪಂಚಮ/ ಮನ್ದ್ರಸ್ವರದಲ್ಲಿ ಗಾನಮಾಡುವ । **ಅಗ್ನಿಂ ದೂತಾಮ್** । ಪರ್ವ.

**ಅನುಲೋಮಗೀತಪರ್ವ :** ಅವರೋಹಣ ಕ್ರಮದಲ್ಲಿನ ಸ್ವರಗಳಿಂದಾಗಿರುವ ಗಾನಭಾಗ ಅನುಲೋಮಗೀತಪರ್ವವೆನಿಸುತ್ತದ್ಧೆ. ಇದರಲ್ಲಿ ಪ್ರಾರಂಭಿಕಸ್ವರವು ಎತ್ತರದಲ್ಲಿದ್ದು ನಂತರದ ಸ್ವರಗಳು ಇಳಿಕೆಯ ಕ್ರಮದಲ್ಲಿರುತ್ತವೆ.

೧ ೨ ೪ ೫ ೧
ಉದಾ : **ಆನ್ಧಾಏಽ೩ಜಾರೋ** ॥ **ಓಽ೨೩೪೫ಇ** ॥ ಇತ್ಯಾದಿ.

**ಪ್ರತಿಲೋಮಗೀತಪರ್ವ :** ಆರೋಹಣಕ್ರಮದಲ್ಲಿನ ಸ್ವರಗಳಿಂದಾಗಿರುವ ಗಾನಭಾಗವು ಪ್ರತಿಲೋಮಗೀತಪರ್ವವೆನಿಸುತ್ತದೆ. ಇದರಲ್ಲಿ ತಗ್ಗಿನಸ್ವರದಿಂದ ಪ್ರಾರಂಭವಾಗಿ ನಂತರದ ಸ್ವರಗಳು ಎತ್ತರ ಕ್ರಮದಲ್ಲಿರುತ್ತವೆ.

೩ ೦ ೨ ೧ ೫ ೦ ೩ ೨ ೧
ಉದಾ : **ನುಷೇಜನಾ** । **ಸಹೋವಾನನ್ತಾ** । ಇತ್ಯಾದಿ

**ಉಭಯವಿಧಗೀತಪರ್ವ :** ಇದರಲ್ಲಿನ ಸ್ವರವಿನ್ಯಾಸವು ಆರೋಹಣ ಅವರೋಹಣವೆಂಬೆರಡೂ ಕ್ರಮಗಳಲ್ಲಿರುವುದರಿಂದ ಈ ಹೆಸರಿದೆ. ಇದರ ಒಂದು ಪ್ರಕಾರದಲ್ಲಿ ಪರ್ವದ ಪ್ರಾರಂಭವು. ಎತ್ತರಸ್ವರದಿಂದಾಗಿ ನಂತರ ಇಳಿತದ ಸ್ವರಗಳು
೧ ೨ ೧
ಮೂಡಿಬಂದು ಪುನಃ ಎತ್ತರ ಸ್ವರದಲ್ಲೇ ಕಡೆಯಾಗುತ್ತದೆ - ಉದಾ : **ವಾಇಶ್ವತಾಇ** । ಇದರ ಮತ್ತೊಂದು ಪ್ರಕಾರದಲ್ಲಿ ಪರ್ವವು ತಗ್ಗಿನ ಸ್ವರದಿಂದ ಪ್ರಾರಂಭವಾಗಿ, ನಂತರ ಎತ್ತರದ ಸ್ವರಗಳು ಮೂಡಿಬಂದು, ನಂತರ ತಗ್ಗಿನ ಸ್ವರದಿಂದಲೇ ಕಡೆಯಾಗುತ್ತಿವೆ.
೩ ೨
ಉದಾ : **ಪ್ರಗೋಽ೩** ।

ಕ್ರುಷ್ಟ ಮತ್ತು ಅತಿಸ್ವಾರ್ಯ ಸ್ವರದಿಂದ ಯಾವ ಸಾಮವೂ ಪ್ರಾರಂಭವಾಗುವುದಿಲ್ಲ. ಎಲ್ಲಾ ಸಾಮಗಳೂ ಪ್ರಥಮ ದ್ವಿತೀಯ ತೃತೀಯ ಚತುರ್ಥ ಮನ್ದ್ರಸ್ವರಗಳಲ್ಲಿ ಯಾವುದಾದರೊಂದು ಸ್ವರಪರ್ವಪ್ರಕಾರದಿಂದ ಪ್ರಾರಂಭವಾಗುತ್ತವೆ. ಪ್ರಥಮಸ್ವರದಿಂದ ೯೨, ದ್ವಿತೀಯ ಸ್ವರದಿಂದ ೧೨೦, ತೃತೀಯಸ್ವರದಿಂದ ೪೬, ಚತುರ್ಥಸ್ವರದಿಂದ ೨೩, ಮನ್ದ್ರಸ್ವರದಿಂದ ೨೦, ಬಗೆಯ ಪ್ರಕಾರಗಳು. ಸಾಮಗಾನಗಳಲ್ಲಿ ಕಂಡುಬರುತ್ತವೆ. '**ಪರ್ವಶಯ್ಯಾ**' ಎಂದೆನಿಸಿಕೊಂಡಿರುವ ಈ ತೆರನ ಪರ್ವಪ್ರಕಾರಗಳ ಸಂಖ್ಯೆ, ಸಾಮಗಾನದಲ್ಲಿ ಬಿಟ್ಟು ೩೦೧ ಇವೆ. ಇವಿಷ್ಟನ್ನೂ ಜ್ಞಾಪಕವಿಟ್ಟುಕೊಂಡರೆ ಸಾಮಗಾನದ ಮೇಲಿನ ಪ್ರಭುತ್ವ ಪಡೆಯಬಹುದು. ಈ ೩೦೧ ಪರ್ವಗಳನ್ನೂ ಕಚಟತಪ ವರ್ಗಗಳಾಗಿ ವಿಂಗಡಿಸಿರುವ '**ಪರಿಭಾಷಾ**' ಎಂಬ ತಲೆಬರಹದಲ್ಲಿ ದ್ರಾಹ್ಯಾಯಣ ಪ್ರತಿಷ್ಠಾನ ಪ್ರಕಟಿಸಿರುವ ಸಾಮವೇದ ಪರಿಚಯವೆಂಬ ಗ್ರಂಥದ ೧೧೦-೧೨೪ ಪುಟಗಳಲ್ಲಿ ವಿವರಿಸಲಾಗಿದೆ. ಆಧುನಿಕ ಸಂಗೀತದ ಸಪ್ತಸ್ವರಗಳ ಮೇಳಗಳಿಂದ ಆಗಿರುವ ೪೮೪ ರಾಗಗಳಿಗೆ ಈ ಪರ್ವಶಯ್ಯೆಯ ತತ್ತ್ವವೇ ಆಧಾರವಾಗಿದೆಯೆಂಬುದು ಬಲ್ಲವರ ಅಭಿಪ್ರಾಯ.

ಸಾಮವೇದದ ಅಧ್ಯಯನ ಪರಂಪರೆಯಲ್ಲಿ ಈ ಪರ್ವಗಳಿಗಿಟ್ಟಿರುವ ನಾಮಧೇಯಗಳನ್ನು ಸಾಮತನ್ತ್ರ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ. ಪರ್ವಗಳ ಈ ನಾಮಧೇಯಗಳಿಗೆ ಪರ್ವಗಳ ಶಬ್ದಗಳೇ ಆಧಾರವಾಗಿವೆ. ಈ ಪರ್ವ ನಾಮಗಳು ಸ್ತ್ರೀಲಿಂಗದಲ್ಲಿ ವ್ಯಾಹೃತವಾಗಿರುವುದು ಇದರ ವೈಶಿಷ್ಟ್ಯವಾಗಿದ್ದು, ಋಕ್‌ನೊಡನಿರುವ ಸಂಬಂಧದ ದ್ಯೋತಕವಾಗಿದೆ. ಈ ಹೆಸರುಗಳ ಮೂಲಕ ಸಾಮಸ್ವರ ವಿನ್ಯಾಸಗಳು ಜ್ಞಾಪಕದಲ್ಲಿದ್ದು ಸಾಮಗಾನ ಸುಗಮವಾಗುವುದೆಂದು ಅವುಗಳನ್ನು ಅಕ್ಷರಾನುಕ್ರಮಣಿಕೆಯಲ್ಲಿ ಕೊಟ್ಟಿದೆ.

## ಪರ್ವಗಳ ನಾಮಧೇಯಗಳು ಅಕಾರಾದಿಯಾಗಿ

| ಪರ್ವದ ಹೆಸರು | ಪರ್ವ ಸ್ವರೂಪ | ಗ್ರಾಮಗಾನ ಸಂಖ್ಯೆ | ಪರ್ವದ ಹೆಸರು | ಪರ್ವ ಸ್ವರೂಪ | ಗ್ರಾಮಗಾನ ಸಂಖ್ಯೆ |
|---|---|---|---|---|---|
| ಅಗ್ನಿಂ ದೂತಾ | ೫ ೧<br>ಅಗ್ನಿನ್ದೂತಾಮ್ | ೫ | ಆನೀಕಯಾ | | ೧೪೦ |
| | | | | ೦ ೨ ೨<br>ಆನೀಕಯಾಽ೩೧ಉವಾಯೇಽ೩ | |
| ಅಚಿಕ್ರಃ | ೨<br>ಅಚಿಕ್ರದಾಽ೩ತ್ | ೯೧೮ | ಆಯಾ | — ೧<br>ಆಽ೨ಯಾಮ್ | ೫೪೨ |
| ಅತಿಥಿಃ | ೧<br>ಅತಿಥಾಇಮ್ | ೧೧ | ಆತ್ರೇ | ೪ ೫<br>ಆತ್ರಾ | ೨೪೯ |
| ಅದ್ಯಾ | ೨ ೧೦<br>ಅದ್ಯಾಹೋೕಇ | ೬೮ | ಆಹಾ | ೧ ಅ ೨<br>ಆಹರ್ಯತಾ | ೧೦೮೪ |
| ಅನ್ಧಾಃ | ೧ ೨<br>ಆನ್ಧಾಃ | ೫೨೮ | ಇಷ್ಟಾ | ೫ ೦ ೪ ೫<br>ಇಷ್ಟಾಹೋತ್ರಾಃ | ೨೫೭ |
| ಅಭಿ | | ೧೧೩೯ | ಈಯಾ | ೩೦ ೨ ೩ ೪ ೫<br>ಈಯಾನಃ ಕೃಷ್ಣಾಃ | ೫೪೭ |
| | ೨ ೧೦ ೨<br>ಭಿಗಾಯಾಽ೨೩ತಾ | | | | |
| ಅಮೃತಾ | ೨ ೧ ೨<br>ಅಮೃತಇಙ್ಜಾಽ೩ | ೫೭ | ಈಶೇ | ೨೦ ೧೦ ೨ —<br>ಈಶೀಯವಸ್ವಔಽ೨ | ೧೯೮ |
| ಆಇನ್ದ್ರಾ | ೩ ೫<br>ಆಽ೨೩೪ಇನ್ದ್ರಾ | ೮೫ | ಉಗ್ರಜ್ಶರ್ಮಾ | ೨ ೧ ೨ ೧<br>ಉಗ್ರಜ್ಶರ್ಮಾ | ೮೨೬ |
| ಆಇಷಾತಾ | ೧ ೨ ೨<br>ಆಇಷಾಽ೩ತಾಇ | ೬೦೪ | ಉತಾ | ೧ ೨ —<br>ಉತಾದ್ವಾಽ೧ಇಷಾಽ೨ಃ | ೧೨ |
| ಆತ್ವಾ | | ೪೧೩ | | | |
| | ೪೦ ೫೦ ೪ ೫ ೪೦ ೫ ೪<br>ಆತ್ವಾ ಸಹಸ್ರಮಾಶತಮಾ | | ಊತಾ | ೨ ೩ ೪ ೫<br>ಊತಏಕಾಮ್ | ೧೦೭ |
| ಆದಿತ್ಯತ್ರತ್ನಾ | | ೩೪ | ಏನಾ | ೫೦ ೦ ೦ ೪ ೫<br>ಏನಾವೋೕಅಗ್ನಿನ್ನಾಮಸಾ | ೭೮ |
| | ೪೦ ೦ ೪<br>ಆದಿತ್ರತ್ನಾಽ೫ಸ್ಯರೇತಸಾಃ | | ಓಇತ್ರಿಕ | ೨ ೩ ೫<br>ಓಇತ್ರಿಕ | ೭೯೮ |

| | | | |
|---|---|---|---|
| ಓವಾನ್ | ಓಽ೨೩೪ವಾ | ೩೮ | |
| ಓಹಾ | ಓಽ೩ಹಾಽ೩ | ೫೫೦ | |
| ಕಇತ್ | | ೬೭೦ | |
| | ಕಾಈಽ೨ದಾಽ೨೩೪ಔಹೋವಾ | | |
| ಕಯಾಶಚಾ | ಕಯಾಽ೨೩ಶಚಾಇ | ೩೦೬ | |
| ಕಯಾಸ್ಥಿರಾ | | ೨೨ | |
| | ಕಯಾಽ೩ಸ್ಥಾಽ೫ಇರಾಽ೬೫೬ನ್ | | |
| ಕಾರ್ಧ್ವೀ | ಕಾಽ೨೩ರ್ಧ್ವೀಽ೩ | ೧೬೫ | |
| ಕ್ರೇ | ಕ್ರೇಯದೃತ್ಯೈಃ | ೧೧೧೨ | |
| ಗೃಣೀ | ಗೃಣೀಽ೫ಮಸಿ | ೬೫೯ | |
| ಗೋಷಾ | | ೫೪ | |
| | ಗೋಷಾತಾಯಾಽ೨೩ | | |
| ಚತಾ | ಚತಾಸ್ಪೃಭಾ | ೬೧ | |
| ಚತಾ | | ೯೫೪ | |
| | ಚತಾಽ೩೧ಉವಾಽ೨೩ಸೂಽ೨೩೪ತಾಮ್ | | |
| ಚಾ | | ೩೨೨ | |
| | ಚಾಽ೨ರ್ಮಾಽ೨೩೪ಔಹೋವಾ | | |
| ಚಿಕ್ರಾ | | ೯೧೮ | |
| | ಆಚಿಕ್ರದಾಽ೩ತ್ಅಚಿಕ್ರದಾ೫ದೇ | | |
| ಚಿತ್ರಾ | | ೧೦೫ | |
| | ಓಇಚಿತ್ರಇಚ್ಛಾಇಶೋಽ೧ಸ್ತರುಣಾಽ೨೩ | | |
| ಚ್ಯಾವ | | ೫೧೧ | |
| | ಚ್ಯಾವಯಾಸದಽ೩ಸಾಸ್ವಾರೌ | | |
| ಜಾಜ್ಘಾ | ಜಾಜ್ಘಾಽ೩ನಾತ್ | ೭ | |
| ಜಾರಾ | ಜಾರಾ | ೨೫ | |
| ಜ್ಯೋತಿಷಾ | ಜ್ಯೋತಿಷಾಽ೩ | ೧೦೭ | |
| ಜ್ಯೋತಿಃ | ಜ್ಯೋತಿಃ | ಅರ - ೨೫೮ | |
| ಣಂಕ್ಯಣು | ಣಙ್ಕ್ಯಣಾವತಾ | ಅರ - ೬೮ | |
| ಣಸ್ಯಾ | | ೫೫ | |
| | ಕಸ್ಯನೂನಾಽ೩೦ಪಾಽ೩ರೀಣಸಿ | | |
| ತದ್ವಿವಿಡ್ಢಾ | ತದ್ವಿವಿಢ್ಢಾಇ | ೨೫ | |
| ತರುತಾ | ತರುತಾಽ೩ | ೪೭೩ | |
| ತಿಪೌ | ತಿಪೌಜ್ಸಿಯಾಮ್ | ೧೦೮೬ | |

ಧಸೇ ೮೧೮

೧ ೧೦ ನ ೨
ಧಾಸಾ೨೩ಃಓಮೋಽ೨ವಾ

ನಇನ್ನಾ ೩೨೦

೨ ೧ ೨ ೧ ೫
ನಇನ್ವೃತ್ರಾಽ೨೩೪ಹಾನ್

೨೦ ೧
ನಇಷು ನಾಇಷಾಯಾಽ೨೩ಃ ೧೯೫

೧ ೨ ೦ ೨
ನಜಾಗೃವಿ ನಜಾಗೃವಿಃ ೯೭೬

೨ ೧
ನನ್ದಾ ನನ್ದಾಇ ೧೧೦

೨
ನವಾ ನಧಾಽ೨ಇನವಾಃ ೧೧೧೮

೨
ನಶೇ ನಶೌಽ೨ಹೌಽ೨ ೧೮೨

೫ ೨ ೪ ೫ ೪ ೫
ನಹಿ ನಹಿವಾಽ೩ಶ್ಚಾರಮಂಚನಾ ೪೦೫

ನಾಕೇ ೫೪೨

೧೦ ೦ ೩ ೨ ೧
ನಾಕೇಸುಪರ್ಣಮುಪಯಾತ್ಪತನ್ತಮ್

೧ ೨
ನಾವಾ ನಾವಾಽ೨೩ಹಾಽ೨೪೩ಇ ೯

೩೦ ೨ ೧
ನುಷೇ ನುಷೇಜನಾ ೪

೨ ೪ ೫
ನೇಮಿಃ ನಾಇಮೀಽನ್ತ್ವಾಷ್ಟೇ ೩೯೬

೧ ೨
ನಾಇಮಿಶ್ಚಕ್ರಾವಾ ೧೪೬

೧
ನ್ಮಾಭೇ ನ್ಮಾಽ೨೩೪ಭಾಇ ೧೩೭

ಪತನ್ತಃ ೫೪೨

೧೦ ೦ ೩ ೨ ೧
ನಾಕೇಸುಪರ್ಣಮುಪಯಾತ್ಪತನ್ತಮ್

೨ ೧ ೨ —
ಪತಿಃಕಾವ್ಯಾ ಪತಾಇಃಕಾಽ೧ವೀಽ೨ಃ ೪೯

೨ ೨
ಪಾತಾ ಪಾಽ೩ತಾಇ ೬೨

೪ ೨೦ ೩ ೫
ಪಾರೀ ಪಾಽ೩ರೀಣಸಿ ೫೫

೧ ೫
ಪಾಸಾ ಪಾಽ೨೩೪ಸಾಮ್ ೨೦೬

೧೦ ೨ ೨
ಪಾಹಿವಿಶ್ವಾ ಪಾಹೋಇವೀಽ೩ಶ್ವಾ ೧೨

೪ ೫
ಪಿಬಾಸೋಮಾ ಹಾಉಪಿಬಾ ೬೯೪

೨ ೦ ೧ —
ಪಿಬಾ ಪಿಬಾಸೋಮಾಽ೨ಮ್ ೩೭೩

ಪೂಷ್ಣಾ ೭೪೫

೩೦ ೨ ೫೦ ೦
ಪೂಷ್ಣಾಽ೩೪ಔಹೋವಾ

ಪೋಷು ೮೩

೧ ೦ ೨ ೨ ೨
ಊಪೋಷುಜಾಽ೩ಹಾಽ೩ಹಾಇ

೪೦ ೦ ೪
ಪ್ರತ್ನಾ ಆದಿತ್ಪ್ರತ್ನಾಽ೩ಸ್ಯರೇತಸಾಃ ೩೪

೫ ೪
ಪ್ರವಾ ಪ್ರವಾಃ ೨೬೯

ಪ್ರಹೂಯಸಾ ೨೭

೧ ೨ ೩ ೫
ಪ್ರಾಹೂಯಾ೨೩೪ಸಾಇ

ಬರ್ಹಾ ೨

೧ ೩ ೫೦ ೧
ಬರ್ಹಾ೨ಇಷಾ೨೩೪ಔಹೋವಾ

೧ ಅ ೨
ಬೃಹಾ ಬೃಹಾ೩ಉವಾ೩ ೧೪೨

ಬೃಧ್ನೇ ೮೦೦

೨೧ ೨೧ ೨೦ ೧ ೨
ಬ್ರಧ್ನಾಸ್ಸಮಾಇಚೀರುಷಸಃ

೧ ೨ ನ ೨
ಸಮಾಇರಾ೧ಯಾ೨೩ತ್ಓ೩ವಾ

೧ ನ ೨
ಬೃಣಃ ಬೃಹಾ೩ಉವಾ೩ ೧೪೨

ಭದ್ರಮ್ ಅರ - ೧೩೨

೧೦ ೦ ೨ ೧೦ ೦
ಹೋಇಹಾಇಹೋಇಹಾ

೧ ೩ ೨
ಮದೇಷುಸಾ ಮದಾ೨ಇಷುಸಾ ೮೭೯

ಮಧೋರ್ನಪಾ ೭೬

೩ ೨ ೩ ೨
ಮಧೋ೩೪ರ್ನಪಾ

೨ ೦ ೦ ೦ ೦
ಮನ್ಯೇವಾ ಮನ್ಯೇವಾನ್ವಾವಾ

೦ ೦ ೦ ೦ ೦
ಪೃಥಿವೀಸುಭೋಜಸಾವೈಹೀ ಅರ.೨೨೭

೪ ೫
ಮಯೋವಾ ಮಯೋವಾ ೧೬

೨ — ೧
ಮರಾ ಮರಾ೨ರಣಾ ೯೮೪

೨ ೧ ೨
ಮರುತ್ವತಾ ಮರೂತ್ವಾತಾ ೮೪೨

೧ ೨ ೩
ಮರ್ತ್ಯಾ ಮರ್ತ್ಯಾ೩ಹೋ ೧೩೪

೨ ೪೦ ೫
ಮಹಾಂಹಿ ಮಾ೩ಹಾಙ್ಹಿ ೬೫೩

ಮಹಿ ೩೩೩

೩ ೨ ೩ ೫
ಮಹಾಇತ್ರಾ೨೩೪ಇಣಾಮ್

೧ ೦ ೨
ಮಾಗಾ ಮಾಗಾಯತ ೬೭೧

೧ ೫
ಮಾನಾ ಮಾನೋ೨೩೪ಹಾಇ ೪೪೮

೨ ೫೦
ಮಾನೀ ಮಾ೩೪ನೀ -

೪೦ ೫
ಮಾನೇ ಮಾನೋಹಾಉ ೧೭೬

೧
ಯಜ್ಞ ಯಜ್ಞಾ೨೩ ೨೫

೧ ೨೦ ೩ ೫
ಯವಾಶಿರಾ ಯವಾಶಿರಮ್ -

೧ ೨ ೩ ೨
ಯೋನಿ ಯೋನಿಷ್ಟಆಇ ೫೩೦

ರಕ್ಷಾ ೪೩

೫ ೦ ೨ ೪೦ ೫೦ ೪ ೫
ಅಗ್ನೇರಾ೩ಕ್ಷಾಣೋಅಙ್ಹಸಾಃ

ರುಹೂ ರುಹೂಽ೩ ೫೩೦

ವಯಮಾಇನ್ದ್ರಾ ೨೧೭

೨ ೧ ೪ ೫
ವಯಮಾಽ೨೩ಇನ್ದ್ರಾ

೨
ವರುಣಃ ವರುಣಾಽ೩ ೩೬೩

೨ ೩ ೫
ವಾಓವಾ ವಾಓಽ೨೩೪ವಾ ೫೦೫

೨೦ ೧
ವಾಘ ವಾಘಾದ್ಭೀಽ೨ಃ ೯೬

೨ ೩ ೫
ವಾದೇವಾ ವಾಽ೩ದೇಽ೨೩೪ವಾ ೫೯೮

ವಾಯೋರನೀ ೨೨

೨೦ ೧೦ ೨
ವಾಯೋರಾಽ೨೩ನೀ

೨ ೩ ೪
ವಾರಾ ವಾರಾವಾಽ೨೪ನ್ತಾಮ್ ೩೦

೨೦ ೧ ೦ ೦
ವಾರ್ದ್ಧೇ ಆಪಿರ್ನೋಬೋಧಿಸಧ

೦ ೨ ೧೦ ೩೦
ಮಾದಿಯೇವಾಽ೨ರ್ದ್ಧೇ ೪೧೧

೨೦ ೧೦ ೨
ವಾರ್ಷೇ ವಾರ್ಷಾಹರಾಯೇಽ೩ಃ ೧೧೬

೩೦ ೨
ವಾಹಾ ವಾಹಾಽ೩೪೩ಇ ೩೦೮

ಅ ೨
ವಿವಾಹ್ಯಃ ವಿವಾಽ೨೩ಹಾಽ೩ ೬೫೬

೨ ೧೦
ವೃಣೀಮಹಾ ವೃಣೀಮಹಾಇ ೫

೨ ೧
ವೃಧನ್ತಾ ವೃಧನ್ತಾಮ್ ೩೬

೪ ೫
ವೃಷಾ ವೃಷಾ ೮೪೩

೩ ೪೦ ೫
ಶಗ್ಧ್ಯೂ ಶಗ್ಧ್ಯೂಷೂ ೪೩೫

೩ ೨
ಶತಾ ಶತಾಮ್ ೪೧೪

೧ ಅ ೨
ಷುವೃಣ್ವತಾ ಷೂವೃಣ್ವಾಽ೨೩ತಾಇ ೪೬೬

೧ ೪
ಷ್ಠಾ ಷ್ಠಾಽ೨೩ಯಾಽ೩ ೩೦೪

ಸಖಾ ೧೦೩

೫೦ ೦ ೦೪ ೫
ಸಖಾಯಸ್ತ್ವಾಔಹೋಹೋಹಾಇ

೧ ೧
ಸಂವಾ ಸಂವಾಽ೨ರ್ತ್ತ್ಯಾ ೭೯೧

೩ ೨
ಸಂಸ್ಥಾ ಸಜ್ಸ್ಥಾಽ೩ಇ ೭೦೨

೨೦೦ ೧
ಸಹಾ ಸಹಮ್ಯೈಹ್ಯೈಽ೩ಹೋಽ೨ ೨೪೫

೨ ೧ ೫
ಸಹೋವಾ ಸಹೋಽ೨೩೪ವಾ ೩೫

೨ ೪
ಸಾತೀ ಸಾಽ೩ತೀ ೩೯೮

೧
ಸಾರ್ವಾ ಸಾರ್ವಾಽ೨ಮ್ ೨೦೭

೧ ೨ ೨
ಸುನೀ ಸುನಾಇತಾಇಸೂಽ೩ಹಾಇ -

| | | | | | |
|---|---|---|---|---|---|
| | ೪೦ ೦ ೦ ೫ | | | ೩ ೨೦ ೩ ೨ | |
| ಸೂರಾ | ಸೂರೋನಹೀಹಾಉ | ೧೩೨ | ಹರಿರಾ | ಹರಿರಾಸ್ಪೃಜ್ಯ | ೧೦೩೨ |
| | ೪ ೫ ೪ ೫ | | | ೫೦ | |
| ಸೂಷ್ವಾ | ಸೂಷ್ವಾಣಾಸಾಃ | ೫೩೩ | ಹಾಉತ್ವಮಿನ್ದ್ರ | ಹಾಉತ್ವಮಿನ್ದ್ರಾ | ೪೨೨ |
| ಸ್ತುವಜ್ರಿಣಾ | | ೨೯೬ | ಹಾಉವಾ | | - |
| | ೩ ೨ ನ ೨<br>ಸ್ತುವಜ್ರಾ೩೩೨೩೨೩ಇಣಾಇ | | | ೨<br>ಹಾಉವಾ೩ಹೋಉವಾ | |
| | ೨೦ ೩ ೧೧೧ | | | ೧ | |
| ಸ್ತೇನಾ | ಸ್ತೇನಾ೩೪೫ಮ್ | ೧೬೫ | ಹಿನಃ | ಹಾಇನಾ೨ಃ | - |
| | ೧ ೨ | | | ೩ ೫ | |
| ಸ್ತೋತ್ರಾ | ಸ್ತೋತ್ರಾ೩೩ಮ್ | ೩೭೧ | ಹೀಷೀ | ಹೀ೨೩೪ಷೀ | ೧ |
| ಸ್ವಾದಿಪರ್ವ | | ೮೨೯ | | | |
| | ೨೦ ೧<br>ಸ್ವಾದಿಷ್ಠಯೌಹೋ೨ | | | ೧ | |
| | | | ಹೋಇ | ಹೋಇ | ೩೪ |
| | ೨ ೩ ೨ | | | ೧೦ ೦ ೨ | |
| ಹಜ್ಸಿಯಾ | ಹಜ್ಸಿಯಾ | ೪೧೯ | ಹೋತಾ | ಹೋತಾರಾ೨೩ಂವೀ | ೫ |

**ವಿಕಾರಗಳು :**

ಋಚ್ಯದ್ಯೂಢಂ ಸಾಮ ಎಂಬ ಶ್ರುತಿ ವಾಕ್ಯದಂತೆ ಋಕ್‌ಗಳಿಂದ ಸಾಮಗಾನವು ಉದಯವಾಗುವಾಗ ಋಗ್ಗತ ಪದಗಳ ಸ್ವರೂಪವು ವಿವಿಧ ಭಾವಗಳ ಕಾರಣ ಬಗೆಬಗೆಯಾಗಿ ಪರಿವರ್ತನೆಗೊಳ್ಳುತ್ತದೆ. ಈ ಪರಿವರ್ತನೆಯಿಂದಾಗಿ ಋಗ್ಗತಪದಗಳ ಮೂಲ ರೂಪವು ಗುರುತಿಸಲಾಗದಷ್ಟು ವಿಕೃತಗೊಳ್ಳುವುದು ಅಪರೂಪವೇನಲ್ಲ. ಈ ಪರಿಯ ಪರಿವರ್ತನೆಗಳನ್ನು '**ಸಾಮವಿಕಾರ**' ಎಂದು ಹೆಸರಿಸಿ ಹೀಗೆ ವಿಂಗಡಿಸಲಾಗಿದೆ. '**ವಿಕಾರ**' - ಋಗ್ಗತವಾದ '**ಅಗ್ನೇ**' ಪದವು ಸಾಮಗಾನದಲ್ಲಿ '**ಓಗ್ನಾಇ**' ಎಂದಾಗುತ್ತದೆ. '**ವಿಶ್ಲೇಷಣೆ**' - '**ವೀತಯೇ**' ಪದವು '**ವೋಇತೋಯಾ೨ಇ**' ಎಂದಾಗುತ್ತದೆ. '**ವಿಕರ್ಷಣ**' - '**ಯೇ**' ಎಂಬುದು '**ಯಾ೨ಇ**' ಎಂದಾಗುತ್ತದೆ. '**ವಿರಾಮ**' - '**ಗೃಣಾನೋಹವ್ಯದಾತಯೇ**' ಎಂಬುದು '**ಗೃಣಾನೋಹ । ವ್ಯದಾತೋಯಾ೨ಇ**' ಎಂದು ಗಾನಸೌಕರ್ಯಕ್ಕಾಗಿ ಎರಡು ಪದವಾಗುತ್ತದೆ. **ಅಭ್ಯಾಸ** - ಗಾನ ಭಾಗಗಳಾದ **ತೋಯಾ೨ಇ । ತೋಯಾ೨ಇ ॥** ಉದಾ: ಗ್ರಾ.೧.ಪದಗಳು, ಸಾಮಗಾನದಲ್ಲಿ ಪುನರಾವೃತ್ತಿಯಾಗಿರುವುದು ಅಭ್ಯಾಸ ವೆನಿಸುತ್ತದೆ.

ಅರ್ಥೈಕತ್ವಾದ್ವಿಕಲ್ಪಃ ಸ್ಯಾತ್ - ಜೈ.ಮೀ.ಸೂ.೯.೨.೨೯ನ್ನು ವಿವರಿಸುವಾಗ ಶಬರ ಸ್ವಾಮಿಗಳು ವೇದದಲ್ಲಿ ಗಾನಮಾಡಲು ಸಹಸ್ರ ಉಪಾಯಗಳಿವೆ ಎಂದಿದ್ದಾರೆ. 'ಗೀತಿಷು ಸಾಮಾಖ್ಯಾ' ಉಕ್ತಿಯಲ್ಲಿ ಗೀತಿ ಶಬ್ದದ ಅಭಿಪ್ರಾಯವೇ ಸಾಮಗಾನವಾಗಿದೆ. ಸಾಮಗಾನಗಳು ಮೈದಳೆಯುವಾಗ ಭಾವಗಳ ಮೂಲಕವೇ ಪದಗಳ ಸ್ವರೂಪದಲ್ಲಿ ವಿಕಾರ ಉಂಟಾಗುತ್ತದೆ.

**ಅಥ ಭಾವಾನ್ ಪ್ರವಕ್ಷ್ಯಾಮಃ ಪ್ರಗಾಣಾಂ ಯೈರ್ವಿಧೀಯತೇ ।**
**ಆರ್ಚಿಕಂ ಸ್ತೌಭಿಕಂಚೈವ ಪದಂ ವಿಕ್ರೀಯತೇ ತು ಯೈಃ ॥** ಪು.ಸೂ.೯.೨.೧ ॥

ಸಾಮಗಾನಾವಸರದಲ್ಲಿ ಋಗ್ಗತ ಪದಗಳಲ್ಲಾಗುವ ಪರಿವರ್ತನೆಗಳನ್ನು **ಆಭ್ಯನ್ತರ** ವಿಕಾರ ವೆಂದೂ ಋಗ್ವ್ಯತಿರಿಕ್ತವಾದ ಅನ್ಯಶಬ್ದ ಅಥವಾ ವರ್ಣಗಳ ಆಗಮನದಿಂದಾಗುವ ಪರಿವರ್ತ ನೆಗಳನ್ನು **ಸ್ತೋಭ** ಅಥವಾ **ಬಾಹ್ಯ**ವಿಕಾರವೆಂದೂ ವ್ಯವಹರಿಸಲಾಗಿದೆ. **ಸ್ತೋಭಾದಿ ವಿಕೃಷ್ಟಾ** ಂತ್ಯವಾಗಿ ವಿಕಾರಗಳು ೧೮ ಎಂದು ಸಂ.ಉ.ಬ್ರಾ.೨.೨-೧೩ ಹೆಸರಿಸಿದೆ. **ಪ್ರಕೃತಿಭಾವ** ಆದಿ **ವಿಕಲ್ಪಾಂತ**ವಾದ ೨೦ ಭಾವಗಳೆಂದು ಹೆಸರಿಸಿ ಪು.ಸೂ.೯.೨.೨-೫ ತಿಳಿಸುತ್ತದೆ. **ಸನ್ನ್ಯಗೀತ** ಆದಿ **ಯ ಭಾವ** ಪರ್ಯಂತ ೩೪ ವಿಕಾರಗಳನ್ನು ಹೆಸರಿಸಿ ಸಾಮತನ್ತ್ರ ೭೭೮ ಸೂತ್ರದಲ್ಲಿ ಉದಾಹರಣೆಯೊಂದಿಗೆ ವಿವರಿಸುತ್ತ ವಿಕಾರ ಅಥವಾ ಭಾವವೆಂಬ ಹೆಸರಿನ ವೈವಿಧ್ಯತೆಯು ಪ್ರಕರಣವಶಾತ್ ಕಂಡುಬಂದರೂ ಸ್ವರೂಪತಃ ವ್ಯತ್ಯಾಸಗಳೇನೂ ಇರುವುದಿಲ್ಲ. ಈ ವಿಕಾರಗಳ ಪರಿಚಯವು ಸಂಕ್ಷೇಪವಾಗಿ ಹೀಗಿದೆ.

## ಆಭ್ಯನ್ತರ ವಿಕಾರಗಳು :

ಋಗನ್ತರ್ಗತವಾದ ಪದಗಳಿಗೆ ಸಾಮಗಾನಾವಸರದಲ್ಲಿ ಸಂಭವಿಸುವ ಮುಖ್ಯವಾದ ವಿಕಾರಗಳು ಹೀಗಿವೆ.

**ಅಂಭಾವ** - ಋಗ್ಗತ 'ಅ' 'ಇ' 'ಋ' ಮತ್ತು 'ಉ' ಕಾರಗಳು, ಗಾನದಲ್ಲಿ 'ಅ' ಕಾರ, ವಾಗುವುದು 'ಅಂ' ಭಾವವೆನಿಸುತ್ತದೆ. ಸಾ.ಋ.೫೨೪ರಲ್ಲಿನ **'ಪಾವಕಃ'** ಶಬ್ದವು
೧ ೨
ಸಾಮಗಾನಗ್ರಾಮ - ೧೦೧೬ರಲ್ಲಿ **ಪವಾ೭೨೩ಕಾಃ** ॥ ಆಗಿ 'ಪ' ಮೇಲಿನ 'ಅ' ಕಾರವು ಹ್ರಸ್ವವಾಗಿ ಉಚ್ಚಾರವಾಗುತ್ತದೆ. ಸಾ.ತ.೧೧೦೮-೧೧೧೫, ಪ್ರ.ಸೂ.ದಲ್ಲಿ ಇದಕ್ಕೆ **ಅತ್ವಭಾವ** ಎನ್ನಲಾಗಿದೆ.

**ಅಗತಭಾವ** - 'ಹಾಇ' ಹಾಗೂ 'ಹಾಉ' ಗಳನ್ನು ಗಾನದ ಗತ ಅಥವಾ 'ಗತಿ' ಎನ್ನಲಾಗಿದೆ.

೧೦ ೦ ೦ ೦ ೦ __
ಈ 'ಗತಿ' ಯ ಲೋಪವಾದಾಗ 'ಅಗತಭಾವ' ಉಂಟಾಗುತ್ತದೆ. **ರಾಜಾದೇವೌಹೋ೩ಯಿ**
೧
**ಋತಮ್ಬೃಹಾತ್ ॥** ಊಹ ೧೫೧, ಗಾನದಲ್ಲಿ 'ಹೋಇ' ಕಾರದ ಗತಿಲೋಪವಾಗಿದೆ.

**'ಅತಿಕ್ರಮ'** - ಗಾನಕಾಲದಲ್ಲಿ ಒಂದು ಸ್ವರವು ತನ್ನ ನಿಕಟವರ್ತಿ ಸ್ವರವನ್ನು ಬಿಟ್ಟು ಮುಂದಿನ
೧೦ ೦ ೩ ೨ ೧
ಸ್ವರ ಪಡೆಯುವುದು. ಗ್ರಾ.೫೪೨ರಲ್ಲಿ **ನಾಕೇಸುಪರ್ಣಮುಪಾಯಾತ್ಪತನ್ತಾಮ್ ।** ಪ್ರಥಮಸ್ವರವು ದ್ವಿತೀಯ ಸ್ವರವನ್ನು ಅತಿಕ್ರಮಣಮಾಡಿ ತೃತೀಯಸ್ವರವನ್ನು ಪಡೆದಿದೆ. ಅತಿಕ್ರಮದ ನಾಲ್ಕು ಬಗೆಗಳನ್ನು ಮಾಲ ೧.೨೬-೩೫ರಲ್ಲಿ ವಿವರಿಸಲಾಗಿದೆ.

**ಅತಿಹಾರ** - ಅನುಸ್ವಾರ ಸ್ಪರ್ಶ ರೇಫ ಹಾಗೂ ವರ್ಣಸ್ತೋಭವು ಪರವಾದಾಗ ಅದನ್ನು ಅತಿಕ್ರಮಿಸಿ ಋಗಕ್ಷರದೊಂದಿಗೆ ಸನ್ಧಿಭಾವವನ್ನು ಪಡೆಯುವುದು ಸಾ.ಋ.೧೯ 'ತಂಗೂರ್ಧಯಾಸ್ವರ್ಣರಂ' ನಲ್ಲಿ, ತಂಗೂರ್ಧಯಾ ನಂತರ 'ಔಹೋ' ಸ್ತೋಭವಿದ್ದಾಗ್ಯೂ 'ನರಮ್' ನಲ್ಲಿನ 'ನ' 'ಣ' ಆಗಿರುವುದು - ಗ್ರಾಮ.೧೭೪. **ಅತಿಹಾರವೆನಿಸು** ತ್ತದೆ. ಸಾ.ತ.೧೦೩೮-೧೦೪೩. ಪು.ಸೂ.ದಲ್ಲಿ ಈ ಭಾವಕ್ಕೆ 'ಅತಿಹೃತಿ' ಎನ್ನಲಾಗಿದೆ.

**ಅನೀಚತ್ವ** - ಸ್ವರಿತ ಅಥವಾ ಅನುದಾತ್ತವು ಗಾನದಲ್ಲಿ ಉದಾತ್ತವಾದಾಗ **'ಅನೀಚತ್ವ'** ವೆನಿಸುತ್ತದೆ.

**ಅಭ್ಯಾಸ** - ಯಾವುದಾದರೂ ಭಾಗದ ಪುನರಾವೃತ್ತಿಯು 'ಅಭ್ಯಾಸ' ವೆನಿಸುತ್ತದೆ. ಯತ್ಸೋಮೇ೩ ಸೋಮ ಆ ಯತ್ಸೋಮೇ೨ಸೋ ಇದರಲ್ಲಿ 'ಯತ್ಸೋಮ' ಪದದ ಅಭ್ಯಾಸವಾಗಿದೆ.

**ಅವೃದ್ಧ** - ನಿಯಮಾನುಸಾರ ಪ್ರಾಪ್ತವಾಗಿರಬೇಕಾದ 'ವೃದ್ಧಿ'ಯು ಗಾನದಲ್ಲಿ ಹ್ರಸ್ವ
೧ ೨ ೩
ಅಥವಾ ದೀರ್ಘವಾದಾಗ 'ಅವೃದ್ಧ' ವೆನಿಸಿಕೊಳ್ಳುತ್ತದೆ - **ಜಾಗನ್ನಾ೨೩೪ಯಾಃ ।** ಸಾ.ತ.೪೨೬ರಂತೆ **'ಗ'** ವೃದ್ಧಿಯಾಗಬೇಕಾಗಿತ್ತು ಆದರೆ ವೃದ್ಧಿಯಾಗಿಲ್ಲ. ಪು.ಸೂ.೯.೬

**ಆಇಭಾವ** - ಗಾನದಲ್ಲಿ 'ಇ' ಕಾರಕ್ಕೆ ಸಾ.ತ.೭೭೭ ರಂತೆ 'ಆಇ' ಭಾವ ಬರುತ್ತದೆ.
೧ ೨ ೧ ೦ ೨ ೩
'ದಿವಿ' - **ದಿವಾಇ ॥** ಯೋಜಾನ್ವಿನ್ದ್ರ - **ಯೋಜಾನೂ೨ವಾ೨೩ಇ ॥** ದಿವಿಯಲ್ಲಿ ವಿ ಮೇಲಿನ ಇ ಮತ್ತು ಯೋಜಾನ್ವಿನ್ದ್ರದಲ್ಲಿನ ವಿ ಆಇ ಭಾವಹೊಂದಿದೆ ಇದನ್ನು ಆಇತ್ವಭಾವವೆಂದು ಪು.ಸೂ.೯.೬ ಗುರುತಿಸಿದೆ. ಆಜುಹೋತಾಪತ್ತಿಯಲ್ಲಿನ

೪೦ ೫೦ ೪
**ಆಜುಹೋತಾ** ಈ ಪ್ರಕಾರದ ಸ್ವರಗಳು ಗಾನದಲ್ಲಿನ ಅನ್ಯಪದಗಳಲ್ಲಿ ಕಂಡುಬರುವುದು ಆಜುಹೋತಾಪತ್ತಿ ವಿಕಾರವೆನಿಸುತ್ತದೆ. ಸಾ.ತ.೭೭೭ ||

**ಉತ್ಪತ್ತಿ** - ಋಗ್ಗತ ಅನುದಾತ್ತ ಉದಾತ್ತ ಮತ್ತು ಸ್ವರಿತಾಕ್ಷರಗಳ ಸಮುದಾಯಕ್ಕೆ
೧ ೨
'ಉತ್ಪತ್ತಿ' ವಿಕಾರವೆನ್ನುತ್ತಾರೆ - ಉದಾ. **'ಉತ್ನೋ೭ದೇವಾ೭೩೧ಃ'** ದಲ್ಲಿ ಸ್ವರಿತ ಅನುದಾತ್ತ ಉದಾತ್ತಗಳು ಉದಾತ್ತದಲ್ಲೇ ಗಾನವಾಗುತ್ತದೆ.

**ಉದ್ಘಾತ** - ಋಕ್‌ನ ನೀಚಸ್ವರವು ಗಾನದಲ್ಲಿ ಉಚ್ಚಸ್ವರವಾಗುವುದು ಉದ್ಘಾತ ಅಥವಾ ಉಚ್ಚಗೀತಭಾವವೆನಿಸುತ್ತದೆ. ಗ್ರಾಮ ೯೯ರಲ್ಲಿನ 'ಸು - ಅಪತ್ಯಸ್ಯ' ದಲ್ಲಿ 'ಸು
೧ ೨
ಅಪ'ದ ನೀಚಸ್ವರದ ಗಾನವು **'ಸ್ವಪತ್ಯ'** ಎಂದು ಉಚ್ಚಸ್ವರವಾಗುತ್ತದೆ. ಇದನ್ನು 'ಉಚ್ಚ ಭಾವ' ಎಂದು ಪು.ಸೂ.೯.೬ ತಿಳಿಸುತ್ತದೆ.

**'ಏಭಾವ'** 'ಇ' ಆದಿ ವರ್ಣಗಳು ಗಾನದಲ್ಲಿ 'ಏ' ಕಾರರೂಪದಲ್ಲಿ ಉಚ್ಚಾರವಾಗುವುದು.

೩ ೫
**'ಏಭಾವ'** ವೆನಿಸುತ್ತದೆ. ದಿವಾವಸೋ - **ದೇ೭೨೩ಳವಾ** । ಇಲ್ಲಿ ದಿ ಮೇಲಿನ 'ಇ' ಕಾರವು ಗಾನದಲ್ಲಿ 'ಏ' ಕಾರವಾಗಿದೆ. ಸಾ.ತ.೧೧೫೩-೧೧೭೬ ||

**ಐ ಭಾವ** - 'ಏ' ಕಾರಾದಿ ವರ್ಣಗಳು ಗಾನದಲ್ಲಿ 'ಐ' ಕಾರ ವಾಗುವುದನ್ನು 'ಐ' ಭಾವವೆನ್ನುತ್ತಾರೆ - ಏಹೀ ಯ ಉಚ್ಚಾರಣೆ ಗಾನದಲ್ಲಿ **'ಐಹೀ'** ಎಂದಾಗುತ್ತದೆ. ಸಾ.ತ.೧೧೩೭-೧೧೫೨ ||

**ಓ ಭಾವ** - ಪ್ರಕೃತಿಭಾವದಿಂದ ಪ್ರಾಪ್ತವಾದ 'ಓ' ಗಾನದಲ್ಲಿಯೂ 'ಓ' ಎಂದು ಅದೇ ಪ್ರಕಾರವಾಗಿಯೇ ಗಾನವಾಗುವುದು. 'ಓಭಾವ' ವೆನಿಸುತ್ತದೆ - ಶೂರಃ+ಅಗ್ರೇ ಸಂಧಿಯಿಂದ ಋಕ್‌ಗತ **ಶೂರೋ ಅಗ್ರೇ** ಪದದಗಾನ ಸನ್ಧಿಜವಾಗಿದ್ದು ಇದರ ಗಾನವು :
೧ ೦ ೨ ೩ ೨ ೩ ೨ ೩ ೨ ೧ ೨
**ಶೂರೋ ಆ೭೩** ಆಗುತ್ತದೆ. **ಉಕ್ಥೇಭಿರ್ಮನ್ದಿಷ್ಠೋ - ಭಿರ್ಮಾನ್ದಾ ಇಷ್ಠೋ೭೩ ।** ಗ್ರಾಮ.೩೬೯ || ಅ ಆ ಆದಿಗಳು ಸನ್ಧಿಜವಾಗದೆ ಗಾನಕ್ಕೆ ಕಾರಣವಾಗಿದ್ದು, ಗಾನದಲ್ಲಿ 'ಓ' ಎಂದು ವಿಕಾರವಾಗುವುದನ್ನೂ 'ಓ ಭಾವ' ವೆಂದೇ ಗಣಿಸಲಾಗಿದೆ. ಅಷ್ಟಾಃ

೧ ರ
ಪದವು **ಆಶ್ವೋದದಾ** ಆಗಿದೆ. ಸಾ.ತ.೧೧೧೬-೧೧೩೬ ॥

**ಔ ಭಾವ** - ಅಕಾರಾದಿ ವರ್ಣಗಳು ಗಾನದಲ್ಲಿ - ಔ ಆಗಿ ಪರಿಣತವಾಗುವುದು,
೨ ೧
**ಔ ಭಾವ** ವೆನಿಸುತ್ತದೆ. ವರುಣಸ್ಯ - **ವರೌಹೋೱ೨** । ಆಗುತ್ತದೆ ಪು.ಸೂ.೯.೪ ॥

**ಕರ್ಷಣ :** ಒಂದು ಸ್ವರ ಒಂದೇ ಅಕ್ಷರದಲ್ಲಿ ಮತ್ತೊಂದು ಅನ್ಯ ಸ್ವರವನ್ನು ಪಡೆ
೧
ದಾಗ ಕರ್ಷಣವೆನಿಸುತ್ತದೆ **ಓೱ೨೩೪೫** ॥ ಇಲ್ಲಿ 'ಓ' ನ ಪ್ರಥಮಸ್ವರವು. ದ್ವಿತೀಯ ನಂತರ ತೃತೀಯ ನಂತರ ಚತುರ್ಥ ನಂತರ ಮನ್ದ್ರಸ್ವರವನ್ನು ಪಡೆದಿರುವುದೇ ಕರ್ಷಣ - ಸಾ.ತ.೭೭, ಇದನ್ನು **ನತಿ** - ಭಾವವೆಂದಿದೆ. ಮಾತ್ರಾಲಕ್ಷಣದಲ್ಲಿ ಕರ್ಷಣವನ್ನು ವಿಸ್ವರದ ಅನ್ತರ್ಗತವೆಂದು ಗಣಿಸಿದೆ. ಗಾನದಲ್ಲಿ ಯಾವುದಾದರೂ ಸ್ವರವು ಸ್ವರಾನ್ತರವನ್ನು ಹೊಂದಿದರೆ ಆ ಸ್ವರವು **ವಿಸ್ವರ** ವೆನಿಸುತ್ತದೆ. ವಿಸ್ವರವು ಪ್ರತ್ಯುತ್ಕ್ರಮ ಅತಿಕ್ರಮ ಕರ್ಷಣ ಅತಿಸ್ವಾರ ಎಂಬ ನಾಲ್ಕು ಅವಸ್ಥೆಗಳಲ್ಲಿ ಮತ್ತೊಂದು ಅನ್ಯಸ್ವರವನ್ನು ಹೊಂದುತ್ತದೆ. ವಿಸ್ವರದ ಗಾನವು ತ್ರಿಮಾತ್ರಾ ಕಾಲದ್ದಾಗಿರುತ್ತದೆ. ವಿಸ್ವರಮಕ್ಷರಂ ಸ್ವರೇ ತ್ರಿಮಾತ್ರಂ ಭವತಿ । ಮಾ.ಲ.೧.೧೬ ॥ ಆ ದ್ವಿತೀಯ ಕರ್ಷಣಮಾತೃತೀಯ ಕರ್ಷಣಮಾ ಚತುರ್ಥಕರ್ಷಣ ಮಾಮನ್ದ್ರಕರ್ಷಣಮ್ । ಮನ್ದ್ರಶ್ಚಾತಿಸ್ವಾರ್ಯಾತ್ ಕೃಷ್ಯತೇ । ಮಾ.ಲ.೧.೩೨ ॥ ಈ ಐದು ಬಗೆಯ ಕರ್ಷಣಗಳ ಉದಾಹರಣೆಗಳನ್ನು 'ಸ್ವರಸಂಕೇತ' ತಲೆಬರಹದಲ್ಲಿ ಕೊಟ್ಟಿದೆ.

**'ಗತ'** - **'ಹಾಇ'** ಹಾಗೂ **'ಹಾಉ'** ಇವು ಗಾನಕ್ಕೆ ಗತಿಯನ್ನು ನೀಡುವುದರಿಂದ **'ಗತ'** ಅಥವಾ **'ಗತಿ'** ಎನಿಸಿಕೊಂಡಿವೆ.

**ದೀರ್ಘಭಾವ** - ಋಗ್ಗತ ದೀರ್ಘಾಕ್ಷರಗಳು ಹೇಗಿವೆಯೋ ಹಾಗೆಯೇ ಗಾನದಲ್ಲಿ ಬಳಕೆಯಾದಾಗ ಅದರ ಮೇಲೆ 'ರ' ಎಂದು ಗುರುತಿಸಿರುತ್ತದೆ. ಇದು ಆ ವರ್ಣದ ದೀರ್ಘಭಾವವನ್ನು ಸೂಚಿಸುತ್ತದೆ. 'ವೃದ್ಧಿ' ಇದ್ದಾಗ 'ರ' ಸೂಚಿಸಿರುವುದಿಲ್ಲ - ಪು.ಸೂ.೯.೩

**ಧಾರ್ಯ** - ಪಂಚಸ್ವರೈರ್ಯುಕ್ತಂ ಧಾರ್ಯಮ್ - ಮಾ.ಲ.೨.೧೩ ॥ ಸಾಮಗಾನದಲ್ಲಿ ಗಾನಾನುಕೂಲವಾಗುವಂತೆ ಅಕ್ಷರಗಳ ಮೇಲೆ ಪ್ರಥಮಾದಿ ಸ್ವರಸಂಖ್ಯೆಗಳನ್ನು ಅಂಕಿತಮಾಡಿರುತ್ತದೆ. ಈ ಸ್ವರಸಂಖ್ಯೆಯನ್ನು ಅಂಕಿತಮಾಡದಿರುವ ಅಕ್ಷರಗಳು ಪೂರ್ವಾಕ್ಷರಗಳ ಸ್ವರವನ್ನೇ ಅನುಸರಿಸುತ್ತವೆ. ಈ ರೀತಿ ಪೂರ್ವಾಕ್ಷರಗಳ ಸ್ವರವನ್ನು ಗ್ರಹಣ ಮಾಡುವುದೇ 'ಧಾರ್ಯ' ವೆನಿಸುತ್ತದೆ. ಈ ಧಾರ್ಯವು ಪಂಚಸ್ವರಯುಕ್ತವಾಗಿರುತ್ತದೆ

೧ ೦ ೦
-ಗ್ರಾಮ ೩ರಲ್ಲಿನ **ಗೃಣಾನೋಹ** ದಲ್ಲಿ ಗೃ ಮೇಲಿನ ಧಾರ್ಯವಾದ ಪ್ರಥಮಸ್ವರವನ್ನು ಣ ಗ್ರಹಿಸುತ್ತದೆಯಾಗಿ ಣ ಪ್ರಥಮ ಸ್ವರಧಾರ್ಯವಾಗಿದೆ. ಗ್ರಾಮ ೬ರಲ್ಲಿನ
೨ ೧ ೨೧ ವಿ
**ದ್ರವಿಣಸ್ಯುರ್ವಿಪನ್ಯಯಾಽ೨** । ದ್ರ ಮೇಲಿನ ಧಾರ್ಯವಾದ ದ್ವಿತೀಯಸ್ವರವನ್ನು ವಿ ಮತ್ತು ಣ ಗ್ರಹಿಸುತ್ತವೆಯಾಗಿ ವಿ ಮತ್ತು ಣ ದ್ವಿತೀಯಸ್ವರಧಾರ್ಯಗಳಾಗಿವೆ. ಗ್ರಾಮ
೨ ೩೦ ೦ ೨
೧೫೫ ರಲ್ಲಿನ **ವಿಪಾಂಜ್ಯೋತಾಇ** । ಪಾ ಮೇಲಿನ ಧಾರ್ಯವಾದ ತೃತೀಯಸ್ವರವನ್ನು ಜ್ಯೋ ಗ್ರಹಿಸುತ್ತದೆಯಾಗಿ ಜ್ಯೋ ತೃತೀಯ ಸ್ವರಧಾರ್ಯವಾಗಿದೆ. ಗ್ರಾಮ ೩೪ರಲ್ಲಿನ
೪೦ ೦ ೪
**ಆದಿತ್ಪ್ರತ್ನಾಽಶಿಸ್ಯರೇತಸಾಃ** ॥ ಆ ಮೇಲಿನ ಧಾರ್ಯವಾದ ಚತುರ್ಥಸ್ವರವನ್ನು ದಿತ್ಪ್ರತ್ನಾ ಗ್ರಹಿಸುತ್ತವೆಯಾಗಿ ಆದಿತ್ಪ್ರತ್ನಾ ಚತುರ್ಥಸ್ವರಧಾರ್ಯವಾಗಿವೆ. ಗ್ರಾಮ ೩೫ರಲ್ಲಿನ
೫ ೦ ೪ ೫
**ಅಗ್ನಿಂ ವೋ ವೃಧಾನ್ತಾಮ್** । ಅ ಮೇಲಿನ ಧಾರ್ಯವಾದ ಪಂಚಮ ಸ್ವರವನ್ನು ಗ್ನಿಂ **ಪೋ ವೃ** ಗ್ರಹಿಸುತ್ತವೆಯಾಗಿ ಇವು ಮನ್ದ್ರಸ್ವರಯುಕ್ತವಾದ ಧಾರ್ಯವಾಗಿವೆ.

**ನಿಘಾತ** - ಋಕ್‌ನಲ್ಲಿನ ಉದಾತ್ತವು ಗಾನದಲ್ಲಿ ಅನುದಾತ್ತವಾದಾಗ ಆಗುವ
೨೦ ೧ ೨೦
ನೀಚತ್ವವು ನಿಘಾತಭಾವ ವೆನಿಸುತ್ತದೆ. ಗ್ರಾಮ ೧೧೧೨ರಲ್ಲಿನ **ಕ್ರೇಯದೃತ್ಯೈಃ** । ಉದಾತ್ತವಾಗಿದ್ದತ್ಯೈಃ ಅನುದಾತ್ತವಾಗಿದೆ. ಸಾ.ತ.೭೭೭ ॥

**'ನು'ಭಾವ** - ಸಾಮಗಾನಾವಸರದಲ್ಲಿ ಯಾವುದೇ ಸ್ವರದ ನಿಕಟವರ್ತಿ ಉಚ್ಚಸ್ವರದ ಗಾನವಾಗಿ ಪುನಃ ಮೂಲಸ್ವರಕ್ಕೆ ಬರುವುದು **'ನು'ಭಾವ** ವೆನಿಸುತ್ತದೆ. ಗ್ರಾಮ. ೪೬೧.
೫೦ ೫
**ಶ್ರಾಯನ್ತ ಇವಸೂಽಳರಾಯಾಮ್** ॥ ನಲ್ಲಿ 'ಶ್ರಾಯನ್ತಇವಸೂ' ಮನ್ದ್ರಸ್ವರದಲ್ಲಿ ಗಾನವಾದ ನಂತರ ೪ ಚತುರ್ಥಸ್ವರದ ಗಾನ ಮಾಡಿ ಪುನಃ ಮನ್ದ್ರಸ್ವರದಲ್ಲಿ ಗಾನಮಾಡಲಾಗುತ್ತದೆ. ಹೀಗೆ ನೀಚಸ್ವರದಿಂದ ಉಚ್ಚಸ್ವರದಲ್ಲಿ ಗಾನವಾಗಿ ಪುನಃ ನೀಚಸ್ವರದಲ್ಲಿ ಗಾನವಾಗುವುದರಿಂದ ಇಲ್ಲಿ ಮನ್ದ್ರಸ್ವರದ ಮೂಲಕ ಚತುರ್ಥಸ್ವರದ ಪ್ರತ್ಯುತ್ಕ್ರಮವಾಗಿದ್ದು 'ನು'ಭಾವ ಬಂದಿದೆ. ಈ **'ನು'ಭಾವ** ವನ್ನು ಮಾ.ಲ.ದಲ್ಲಿ **ಪ್ರತ್ಯುತ್ಕ್ರಮವೆಂದು** ಹೆಸರಿಸಿದೆ. ಇದು ಎಂಟು ಬಗೆಯೆಂದು ಮಾ.ಲ.ದ ಗ್ರಂಥವೂ ಒಂಬತ್ತು ಬಗೆಯೆಂದು ಸಾ.ತ. ಗ್ರಂಥವೂ ತಿಳಿಸುತ್ತವೆ. ಇವುಗಳ ಉದಾಹರಣೆಗಳನ್ನು 'ಸ್ವರ ಸಂಕೇತ' ಗಳಡಿಯಲ್ಲಿ ಕೊಟ್ಟಿದೆ.

**ಪರಿಸ್ವಾರ ಭಾವ** - ಮನ್ದ್ರವು ಅತಿಸ್ವಾರ್ಯವನ್ನು ಪಡೆದಾಗ ಪರಿಸ್ವಾರವೆನಿಸುತ್ತದೆ.

೨
**ಓಽಇ೨ಇಳಿಶಿವಾಽ೬ಶಿ೬** । ಇಲ್ಲಿ ವಕಾರದ ಮನ್ದ್ರವು ಪರಿಸ್ವಾರವಾಗಿದೆ. ಸಾ.ತ.೨೮೨-೨೮೭।

**ಪ್ರಕೃತಿ ಭಾವ** - ಅಕ್ಷರಗಳು ವೃದ್ಧಿಯನ್ನು ಪಡೆದಾಗ ಅವುಗಳ ಆ ಇ ಭಾವವು ವಿಕಾರ ವಾಗದೆ ಪ್ರಕೃತಿವತ್ ಮೂರು ಮಾತ್ರೆಗಳಲ್ಲಿ ಗಾನವಾಗುವುದು 'ಪ್ರಕೃತಿ ಭಾವ' ವೆನಿಸುತ್ತದೆ

೨ ೫
ಯೌಧಾಜಯ ಸಾಮಹ ದೇವ ಶಬ್ದ. **ದೇಽಇವಾ** । ಗಾನದಲ್ಲಿ ವಿಕಾರವಾಗದಿರುವುದು ಉದಾಹರಣೆಯಾಗಿದೆ - ಪು.ಸೂ. ೯.೬.

**ಪ್ರಣತ** - ದ್ವಿತೀಯ ಸ್ವರವು ತೃತೀಯ ಸ್ವರವನ್ನು ಪಡೆದಾಗ ಈ ಎರಡೂ ಸ್ವರಗಳು

೨ ೦
ಪ್ರಣತ ಭಾವವನ್ನು ಪಡೆಯುತ್ತದೆ. **ಪ್ರಣೇತಽಇಃ** । ದ್ವಿತೀಯಾದಿ ತೃತೀಯಾನ್ತಮ್ ಪ್ರಣತಮ್ । ಸಂ.ಉ.ಬ್ರಾ.೨.೧೦ ॥

**ಪ್ರಶ್ಲೇಷ** - ಋಕ್‌ನಲ್ಲಿರುವ ಪೂರ್ವರೂಪವೇ ಗಾನದಲ್ಲೂ ಅದೇ ರೂಪದಲ್ಲಿರು

೩ ೧ ೨ ೩ ೧ ೨ ೩ ೨೦ ೧
ವುದು ಪ್ರಶ್ಲೇಷವೆನಿಸುತ್ತದೆ. **ನೂನಂ ಪುನಾನೋಽವಿಭಿಃ** ೧೩೧೪ಋಕ್‌ನ **ನೂನಂ**

೨೦ ೧೦ ೨
**ಪುನಾನೋಽವಿಭಿಃ** । ಊಹ ೧೮೩ರಲ್ಲಿ ನೂನಂಪುನಾನೋದಿಃ - ಒಂದೇ ರೂಪದಲ್ಲಿದೆ.

ಪ್ರೇಙ್ಖ - ಉಯ್ಯಾಲೆ, ಪರಮ ಗನ್ತವ್ಯ ಪದ. ಪ್ರ - ಚೆನ್ನಾಗಿ ಈಙ್ಖತೇ - ಸಂಚರಿಸುವವನು. ವಾಯು ಶಬ್ದ ವಾಚ್ಯವಾಗಿದೆ. ಯಜ್ಞದಲ್ಲಿ ಹೋತೃವು ಅತ್ತಿಮರದ ಎರಡು ಹಲಗೆಗಳಿಂದ ಮಾಡಿರುವ ಉಯ್ಯಾಲೆಯಲ್ಲಿ ಕುಳಿತು ತೂಗಿಕೊಳ್ಳುತ್ತಾ ನಿಷ್ಕೇವಲ್ಯ ಶಸ್ತ್ರ ಮನ್ತ್ರವನ್ನು ಪಠಿಸುವನು. ಭೂಮಿ ಮತ್ತು ಸ್ವರ್ಗದ ಸಂಕೇತವಾದ ಈ ಔದುಂಬರದ ಎರಡು ಹಲಗೆಯ ಉಯ್ಯಾಲೆಗೆ **ಪ್ರೇಙ್ಖವೆಂದು** ಹೆಸರು ಔದುಂಬರದ ಮರದ - ಅತ್ತಿಯ ಹಣ್ಣೂ ರಸವೂ ಮಧುರವಾಗಿದ್ದು ಸೇವಿಸಲು ಯೋಗ್ಯವಾಗಿರುವುದು ಯಜ್ಞಮಾಡುವ ಯಜಮಾನನಿಗೆ ಭೋಗಭಾಗ್ಯವನ್ನು ಒದಗಿಸುವ ಸಂಕೇತವಾಗಿದೆ. ಈ ಉಯ್ಯಾಲೆಯ ಹಗ್ಗವು ಪವಿತ್ರ ದರ್ಭೆಯ ಮೂರು ಹುರಿಗಳಿಂದ ಮಾಡಿದುದಾಗಿರುತ್ತದೆ - ಐ.ಆರ.೧.೨.೩. ದಿವಿ 'ಪ್ರೇಙ್ಖಂ' ಹಿರಣ್ಯಯಂ ಶುಭೇಕಂ ಋ.೭.೮೭.೫. ಉಯ್ಯಾಲೆಯಂತೆ ಎರಡೂ ದಿಕ್ಕುಗಳಿಗೂ ಆಂದೋಲನ ಮಾಡುವವನಾದ ಸೂರ್ಯನನ್ನು ಪ್ರೇಙ್ಖ ಸಂಕೇತಿಸುತ್ತಿದೆ. ಪ್ರಪ್ರೇಙ್ಖ ಈಂಖಯಾವಹೈ ಶುಭೇಕಮ್ ಋ.೭.೮೮.೩.

ಪ್ರೇಙ್ಖೇ ನೌಕಾರೂಪವಾದ ಉಯ್ಯಾಲೆಯಲ್ಲಿ ಈಂಖಯಾವಹೈ. ಕ್ರೀಡಾರ್ಥವಾದ ಆಂದೋಲನ ಮಾಡುತ್ತೇವೆ. ದೇವಸ್ಥಾನಗಳಲ್ಲಿ ಈಗಲೂ ನಡೆಯುತ್ತಿರುವ ಉಯ್ಯಾಲೋತ್ಸವ. ಆಂದೋಲನೋತ್ಸವ ಡೋಲೋತ್ಸವಗಳು. ಈ ಮೇಲಿನ ಅರ್ಥಗಳ ಚಾಕ್ಷುಷ ರೂಪವಾಗಿವೆ - ಗ್ರಾಂ.೧೧೫೬,೧೧೫೭ ಸಾಮಗಾನಗಳಿಗೆ ಪ್ರೇಙ್ಖ ಎಂದೇ ಹೆಸರಿದೆ. - ಇದು ಎರಡು ಬಗೆಯಾಗಿದ್ದು ಸ್ವರಸಂಖ್ಯೆಯ ಮೇಲೆ ಅಡ್ಡಗೆರೆಯಿಂದ ಸಂಕೇತಿಸಿದೆ. ಪ್ರಥಮಸ್ವರದ ಆದಿಯಲ್ಲಿರುವುದು. **ತೋಯಾ೨೩ಇ** । ದ್ವಿತೀಯಸ್ವರದಲ್ಲಿರುವುದು - **ಮತೌ೨೨** ॥

**ಯಭಾವ** - ಋಕ್‌ನಲ್ಲಿ ಪಠಿತವಾಗದ 'ಯ' ಕಾರವು ಗಾನದಲ್ಲಿ ಪಠಿತವಾಗುವುದು 'ಯ' ಭಾವವೆನಿಸುತ್ತದೆ. ಇನೀಮಸೀ ಋಕ್‌ಪದದಲ್ಲಿಲ್ಲದ ಯಕಾರವು **ಮಾಸೀ೨೩ಯಾ** ಗಾನದಲ್ಲಿ ಪಠಿತವಾಗಿದೆ.

**ರೇಫತ್ವ** - ಋಗ್ಗತ ರೇಫವು ಲುಪ್ತವಾಗದೆ ಗಾನದಲ್ಲಿಯೂ ಪಠಿತವಾಗಿರುವುದು. ೨೩೩ನೆಯ ಋಕ್‌ನ ಸ್ವರ್ದೃಶಮ್ ರೇಫವು. ಗ್ರಾಮ ೩೭೮ರಲ್ಲಿ **ಸುವಾ೨ರ್ದೃ೨೩೪ಶಾಮ್** ॥ ಲುಪ್ತವಾಗದೆ. ಅದೇ ರೀತಿ ಪಠಿತವಾಗಿದೆ.

**ರೇಫಲೋಪ** - ಋಗ್ಗತ ರೇಫವು ಗಾನದಲ್ಲಿ ಲೋಪವಾಗುವುದು. ರೇಫಲೋಪ ಭಾವವೆನಿಸುತ್ತದೆ. ಋ ೧ರಲ್ಲಿನ **ಸತ್ಸಿಬರ್ಹಿಷಿ** ಯಲ್ಲಿನ ರೇಫವು ಗ್ರಾಮ ೩ನೆಯ ಗಾನದಲ್ಲಿ **ತ್ಸಾ೨೩ಇಬಾ೨೩** । **ಹಾ೨೩೪ಇಷೋ೬ಹಾಇ** ॥ ರೇಫವು ಲೋಪವಾಗಿದೆ.

**ಲೋಪಭಾವ** - ಋಕ್‌ನಲ್ಲಿ ಪಠಿತವಾಗಿರುವ ವಿಸರ್ಗವು ಗಾನದಲ್ಲಿ ಲೋಪವಾಗಿರುವುದು ಲೋಪಭಾವವೆನಿಸುತ್ತದೆ. ಸ್ವಃ ಶಬ್ದದಲ್ಲಿನ ವಿಸರ್ಗಕ್ಕೆ **ತಂಗೂರ್ಧರಾ ಸ್ವಾಹೋರ್ಣಾರಾ** ದಲ್ಲಿ ಸ್ವಃ ದಲ್ಲಿನ ವಿಸರ್ಗಕ್ಕೆ ಔಹೋ ಪರವಾಗಿದ್ದು ವಿಸರ್ಗ ಲೋಪವಾಗಿದೆ.

**ವನ್ತವಿಧಿಭಾವ** - ಋಗ್ಗತ 'ಹ' ಕಾರವು ಗಾನದಲ್ಲಿ 'ಡ' ಕಾರವಾಗುವುದು ವನ್ತವಿಧಿಭಾವವಾಗಿದೆ. ಸಾ.ತ.೧೦೮೯-೧೧೦೭ ॥

**ವಿಕರ್ಷ** - ಸಂಯುಕ್ತಾಕ್ಷರಗಳ ಗಾನದಲ್ಲಿ 'ಅಚ್'ನ ಅನ್ತರ್ಭಾವವಾಗುವುದು ವಿಕರ್ಷ
೩ ೧ ೨ ೩ ೨ ೨ ೧೧ ೨೧ ೧
ವೆನಿಸುತ್ತದೆ. ಋಕ್ ೪೭೭ರಲ್ಲಿನ **ವ್ರತಾನ್ಯಾದಧುಃ** ಗ್ರಾಮ ೮೩ರಲ್ಲಿನ **ವ್ರತಾನಿಯಾದಧುಃ**
**ವಿಕರ್ಷಭಾವ** - ಛನ್ದಸ್ಸಿನಲ್ಲಿ ಒಂದೆರಡು ವರ್ಣಗಳ ಕೊರತೆಯಾದಾಗ ಅದನ್ನು ಪೂರ್ತಿ ಮಾಡಲು ಆ ಶಬ್ದವನ್ನು **ವ್ಯೂಹಂ** ಮಾಡುವುದೇ **ವಿಕರ್ಷ**ವೆನಿಸುತ್ತದೆ. ಋ ೫೨೪ರ
೧ ೨೧ ೩ ೨ ೧೧
**ಪ್ರಕಾವ್ಯಮ್** ಗ್ರಾಮ ೧೦೯ ಗಾನದಲ್ಲಿ **ಪ್ರಕಾವಿಯಾಮ್ ।** ಪಠಿತವಾಗಿರುವುದು ವಿಕರ್ಷಭಾವವಾಗಿದೆ.

**ವಿಕಲ್ಪ** - ಒಂದೇ ಪರ್ವದಲ್ಲಿ ಎರಡು ಪ್ರಕಾರದ ಗಾನವಿರುವಾಗ ಇಚ್ಛಾನುಸಾರ ಯಾವುದೇ ಒಂದು ಪ್ರಕಾರದ ಗಾನ ಮಾಡುವುದು ವಿಕಲ್ಪವೆನಿಸುತ್ತದೆ - ನೇಮಿನ್ತಷ್ಟೇ ವಸೂ೨೧೩ಹಾಇ । ಹಾಗೂ ನೇಮಿನ್ತಷ್ಟೇವಸಾ೨೨೩೮ಉಹಾಇ ॥ **ವಿನತ** - ಪ್ರಥಮಸ್ವರದ ಆದಿಯಿಂದ ದ್ವಿತೀಯಸ್ವರದ ಅನ್ತ್ಯದವರೆಗಿನದಕ್ಕೆ ವಿನತ ಭಾವವೆನ್ನುತ್ತಾರೆ. ಸಾ.ತ.ದಲ್ಲಿ
೧ ವಿ
'ಮಿನ್' ಭಾವವೆಂದಿದೆ. ಈ ಭಾವದ ಸಂಕೇತ ಚಿಹ್ನೆ 'ವಿ' - ಇದನ್ನೇ **ಅಗ್ನಿನೋ೨೨ ।** ದಲ್ಲಿ ನೋ೯ ಅಕ್ಷರದ ಮೇಲೆ ಪ್ರಥಮ ಸ್ವರವಿದ್ದು ನಂತರ ದ್ವಿತೀಯ ಸ್ವರವಿದೆ - ಆದುದರಿಂದ ಈ ಎರಡೂ ವಿನತವಾಗಿದ್ದು ನೋ೯ ಮೇಲೆ ವಿ ಚಿಹ್ನೆ ಇದೆ. **ವೃದ್ಧ** - ಮೂರುಮಾತ್ರಾಯುಕ್ತ ಅಕ್ಷರ ವೃದ್ಧವೆನಿಸುತ್ತದೆ. ಗಾನದಲ್ಲಿ ಹ್ರಸ್ವ ಅಥವಾ ದೀರ್ಘಾಕ್ಷರವನ್ನು ಮೂರುಮಾತ್ರೆಗಳಲ್ಲಿ ಗಾನಮಾಡುವುದೇ ವೃದ್ಧಭಾವವಾಗಿ ರುತ್ತದೆ. **ಅತನ್ವದ**
೧ ೨೧
ಅಕಾರವು **ಆತನ್ವಾ೩** ಆಗುತ್ತದೆ. 'ಇ'ಕಾರವು '**ಆಇ**' ಎಂದೂ, 'ಉ' ಕಾರವು 'ಓ' ಎಂದೂ 'ಔ' ಕಾರವು ವೃದ್ಧವಾಗಿ 'ಆಇ' ರೂಪವಾಗಿ ಪರಿಣತವಾಗುತ್ತವೆ. '**ಶತಕ್ರತೋ**' ಪದ ವೃದ್ಧವಾದಾಗ ಶತಕ್ರತಾಇ ಆಗುತ್ತದೆ. ಸಾ.ತ.೧೬೭-೧೮೧ ॥

**ಸನ್ಧ್ಯಗೀತ** - ಋಗ್ಗತ ಸ್ವರಸನ್ಧಿಯುಕ್ತಪದ ಅದೇ ರೀತಿ ಗಾನವಾಗುವುದು ಸನ್ಧ್ಯ
೧ ೨ ೩ ೩ ೪ ೫೧
ಗೀತ ಭಾವವೆನಿಸುತ್ತದೆ. ಋ ೯೫ರಲ್ಲಿನ **ಪ್ರತ್ಯಗ್ನೇ** ಗ್ರಾಮ ೧೪೭ರಲ್ಲಿ **ಪ್ರತ್ಯಗ್ನೇ** ಎಂದೇ. ಪ್ರತಿ+ಅಗ್ನೇ ಸ್ವರಸನ್ಧಿಯುಕ್ತವಾಗಿಯೇ ಪಠಿತವಾಗಿದೆ. ಇದನ್ನು 'ಸನ್ಧಿವತ್' ಎಂದು ಪು.ಸೂ.ವೂ. ಸನ್ಧಿಕರಣ ಎಂದು ಸಂ.ಉ.ಬ್ರಾ. ಗುರುತಿಸಿವೆ. '**ಸ್ವರಿತಭಾವ**' - ಋಕ್ ನಲ್ಲಿನ ಉಚ್ಚಸ್ವರವು ಗಾನದಲ್ಲಿ ತಗ್ಗಿನ ಸ್ವರವಾಗಿ ಪಠಿತವಾಗುವುದು ಸ್ವರಿತ ಭಾವವೆನಿಸುತ್ತದೆ. ಮಾ.ಲ. ಇದನ್ನು ಉತ್ಸ್ವರಿತವೆಂದೂ ಪು.ಸೂ. ನೀಚ ಭಾವವೆಂದೂ ಗುರುತಿಸಿವೆ.

೩ ೫
ಹೀಷೀಭಾವ - ಗ್ರಾ.ರ.೧. ಹೀಽ೨೩ಳಿಷೀ । ಈ ತೆರನಸ್ವರವು ಯಾವುದೇ ಪರ್ವದಲ್ಲಿ ಪಠಿತವಾಗಿದ್ದರೂ ಅದು ಹೀಷೀಭಾವವೆನಿಸುತ್ತದೆ. ಗ್ರಾ. ೧೫೯ ಋಕ್‌ನ ಪಿಬ ಗ್ರಾ.೨೭೫
೩ ೫
ರಲ್ಲಿ ಪೀಽ೨೩ಳಬಾ ॥ ಎಂದು ಪಠಿತವಾಗಿರುವುದು ಹೀಷೀಭಾವವಾಗಿದೆ.

ಹ್ರಸ್ವಭಾವ - ಋಗಾಕ್ಷರವು ದೀರ್ಘವಿದ್ದಾನ ಗಾನದಲ್ಲಿ ಹ್ರಸ್ವವಾಗಿ
೩ಕ ೨ರ
ಪಠಿತವಾಗುವುದು ಹ್ರಸ್ವಭಾವವೆನಿಸುತ್ತದೆ. ಋಕ್ ೫೬ರಲ್ಲಿ ದೇವ್ಯೇತು ದೇವೀ+ಏತು ವೀ
೨೧ ೨
ದೀರ್ಘಾಕ್ಷರವು ಗ್ರಾಮ. ೯೫ರಲ್ಲಿ ಪ್ರದಾಇವಿಯೇ 'ವಿ' ಎಂದು ಹ್ರಸ್ವವಾಗಿ ಪಠಿತವಾಗಿದೆ.

**ಬಾಹ್ಯವಿಕಾರಃ ಸ್ತೋಭಃ :-**

ಸಾಮಗಾನಾವಸರದಲ್ಲಿ ಗಾನಸಾಧನವಾಗಿಯೂ ಸಾಮಘಟಕವಾಗಿಯೂ ಋಗ್ವ್ಯತಿರಿಕ್ತವಾಗಿಯೂ ಇರುವ ಅಧಿಕ ವರ್ಣ ಶಬ್ದ ವಾಕ್ಯಗಳ ಆಗಮನದಿಂದಾಗುವ ಪರಿವರ್ತನೆಗಳು ಬಾಹ್ಯವಿಕಾರ ಅಥವಾ ಸ್ತೋಭಗಳೆನಿಸುತ್ತವೆ. ಸ್ತೋಭ ಎಂಬ ಸ್ತುತ್ಯರ್ಥಕವಾದ ಧಾತುವಿನಿಂದಾಗಿರುವ ಸ್ತುಭಃ ಸ್ತುಭಾ ಪದಗಳು - ಸ ಸುಷ್ಟುಭಾ ಸ ಋಕ್ವತಾ .... । ಋ.ಸಂ. *೪.೫೦.೫* ॥ ಸ ಸುಷ್ಟುಭಾ ಸಸ್ತುಭಾ ಸಪ್ತವಿಪ್ರೈಃ ಸ್ವರೇಣಾದ್ರಿಂ ಸ್ವರ್ಯೋನವಗ್ವೈಃ । ಋ.ಸಂ. *೧.೬೨.೪* ॥ ಸ್ವರಕ್ಕೆ ವಿಶೇಷಣವಾಗಿದ್ದು ಸ್ತೋಭ ಶಬ್ದದ ಮೂಲರೂಪವಾಗಿರುತ್ತದೆ. **'ಅನೃಗಾಪ್ಯಕ್ಷರಮ್'** ೧.೧.೧. ರಲ್ಲಿ ಅಕ್ಷರತನ್ತ್ರವು 'ಸ್ತೋಭ' ಪದಕ್ಕೆ 'ಅಕ್ಷರ' ಎಂದು ನಾಮಕರಣ ಮಾಡಿ ವಿವರಗಳನ್ನು ತಿಳಿಸುತ್ತದೆ. **'ಅಧಿಕತ್ವೇ ಸತಿ ಋಗ್ವಿಲಕ್ಷಣಃ ವರ್ಣಃ ಸ್ತೋಭಃ'** ॥ *ಜೈ.ನ್ಯಾ.ವಿ.೯.೨.೧೧* ॥ ಅಧಿಕಶ್ಚ ವಿವರ್ಣಶ್ಚ ಜೈಮಿನಿಃ ಸ್ತೋಭ ಶಬ್ದತ್ವಾತ್ ಇತಿ ಋಗಕ್ಷರೇಭ್ಯಃ । ಋಗರ್ಥಾಭಿಧಾನೋಪಯೋಗಿಭ್ಯಃ ಅಧಿಕಂ ಋಗಾಕ್ಷರಂ ವಿಲಕ್ಷಣಂ ಚ ತಾದೃಶ ವರ್ಣಂ ಸ್ತೋಭ ಶಬ್ದ ವಾಚ್ಯಃ ಜೈಮಿನಿ ಮನ್ಯತೇ ॥ ಅಭಿಯುಕ್ತರಾದ ಸಾಮಗಾಯಕರು ಯಾವುದನ್ನು ಸ್ತೋಭವೆಂದು ವ್ಯವಹರಿಸುವರೋ ಅದೇ ಸ್ತೋಭವೆಂಬುದು ನೂತನ ಮೀಮಾಂಸಕರ ಅಭಿಪ್ರಾಯ. ಸ್ತೋಭಗಳು ಸಾರ್ಥಕ ಅಥವಾ ವ್ಯಕ್ತಾರ್ಥವುಳ್ಳವು ಮತ್ತು ಅವ್ಯಕ್ತಾರ್ಥವುಳ್ಳವು ಎಂದು ಎರಡು ಬಗೆಯಾಗಿವೆ. ಅವ್ಯಕ್ತಾರ್ಥದ ಈ ಸ್ತೋಭಗಳನ್ನು ನಿರರ್ಥಕಸ್ತೋಭಗಳೆಂದು ಕೆಲವೆಡೆಗಳಲ್ಲಿ ಪ್ರಸ್ತಾಪವಾಗಿರುವುದು ವಿಮರ್ಶಾರ್ಹವಾದುದಾಗಿದೆ.

**ಸಾರ್ಥಕ ಸ್ತೋಭಗಳು :** 'ನೃಮ್ಣೇ' ನಿಧೀಮಹಿ, ಅಗ್ನಿಷ್ಪತಿ, ಅಧಿಪತಾ ಇ ಇತ್ಯಾದಿ ಶಬ್ದಗಳು ಋಕ್‌ನಲ್ಲಿಲ್ಲವಾದರೂ ವ್ಯಕ್ತಾರ್ಥಸಹಿತವಾದ ಸ್ತೋಭ ಪದಗಳಾಗಿದ್ದು, ಇವುಗಳ ಆಧಾರದ ಮೇಲೆ ಅನೇಕ ಸಾಮಗಳಿವೆ. ಋಕ್‌ನಲ್ಲಿಲ್ಲದ ಭ್ರಾಜ ಪದವು ಅರ.೨೫೫ರಲ್ಲಿ ಅನೇಕಬಾರಿ ಆವೃತ್ತಿಯಾಗಿದ್ದು **'ಭ್ರಾಜಮ್'** ಸಾಮವೆಂದೇ ಹೆಸರು ಪಡೆದಿದೆ.

**ಅವ್ಯಕ್ತಾರ್ಥಸ್ತೋಭಗಳು :** ಬ್ರಹ್ಮಕ್ಕಿರುವುದು ಎರಡೇ ರೂಪವೆಂದು ಶ್ರುತಿ ಬೃ.ಉ.೨.೩ ತಿಳಿಸುತ್ತಿರುವುದಾಗಿ ಲಲಿತಾಂಬೆಯನ್ನು 'ವ್ಯಕ್ತಾವ್ಯಕ್ತ ಸ್ವರೂಪಿಣಿ' ಲ.ಸ. ೩೯೯, ಎಂದು ಅರ್ಚಿಸುತ್ತಿದ್ದೇವೆ. ವ್ಯಕ್ತಾರ್ಥಸ್ತೋಭಗಳಿಂದಲೂ ಅಲಂಕೃತವಾದ ಅವ್ಯಕ್ತಾರ್ಥ ಸ್ತೋಭಗಳಿಂದಲೂ ಶೋಭಾಯಮಾನವಾದಳು. ಸಾಮಗಾನಗಳನ್ನು ನಾಲಿಗೆಯಿಂದ ಉಚ್ಚರಿಸಿ ಕಿವಿಯಿಂದ ಕೇಳಿ ಮನ್ತ್ರ ಧ್ವನಿಸಿ ಸಂಕೇತಿಸುವ ನಿರಾಕಾರವಾದ ಅಮೂರ್ತವಾದ ಪರಾರೂಪವನ್ನು ವೇದ್ಯವಲ್ಲದ್ದನ್ನು, ವಾಸನಾತ್ಮಕವಾಗಿ ಮನಸ್ಸಿನ ಪರಿಧಿಗೆ ತರಬಹುದಾದ ಸಾಧ್ಯತೆಯ ಅಂತಿಮ ಹಂತವಾಗಿರುವುದು. ಈ ಹಂತವನ್ನು ತಲುಪುವುದು ಸಾಮಗಾನದಿಂದ ಸುಲಭಸಾಧ್ಯವಾಗಿರುವುದರಿಂದಲೇ ದೇವವ್ರತ ನಾಮಕ ಋಗ್‌ರಹಿತವಾದ ಸ್ತೋಭಮಯ ವಾದ ಮೂರು ಸಾಮಗಾನಗಳನ್ನೇ ಅರ.೨೧೨-೨೧೪ ॥ **ತ್ರಿಸಾಮಾ ಸಾಮಗಃ ಸಾಮ** - ವಿ.ಸ.೫೭೪-೫೭೬ ॥ ಎಂದು ನಿರ್ದೇಶಿಸಲ್ಪಟ್ಟು ಸರ್ವ ವ್ಯಾಪಕನಾದ ವಿಷ್ಣುವನ್ನು ಸ್ತುತಿ ಸುತ್ತಿರುವುದರಿಂದಲೇ **ವೇದಾನಾಂ ಸಾಮವೇದೋಽಸ್ಮಿ** - ಭ.ಗೀ.೧೦.೨೨ ಎಂದು ಭಗವಂತ ಅಪ್ಪಣೆ ಮಾಡಿರುವುದು ಸಾರ್ಥಕವೆನಿಸುತ್ತದೆ.

ಸ್ತೋಭಾಕ್ಷರವಾದ ಹಿಂಕಾರವನ್ನೇ **ಬ್ರಹ್ಮವೈ ಹಿಂಕಾರೋ ....ಯ ದೇವ ಹಿಂಕಾರೇಣ ಪ್ರತಿಪದ್ಯತಾ೩ಇ ವೃಷಾ ವೈ ಹಿಂಕಾರೋ ಯೋಽಷರ್ಕ್ ತನ್ಮಿಥುನಂ, ಮಿಥುನಮೇವ ತದುಕ್ಥಮುಖೇ ಕರೋತಿ ಪ್ರಜಾತ್ಯೈ ಪ್ರಜಾಯತೇ ಪಶುಭಿರ್ಯ ಏವಂ ವೇದ ॥** ಐ.ಆರ.೧.೩.೧. ॥ ಬ್ರಹ್ಮದೊಂದಿಗೆ ಹಿಂಕಾರದ ತಾದಾತ್ಮ್ಯವನ್ನು ಹೇಳಿ, ಹಿಂಕಾರ ಗೂಳಿ ಋಕ್, ಯೋನಿಯಾಗಿದ್ದು, ಈ ಮಿಥುನದ ಅರಿವಿನಮೂಲಕ ಮಾಡುವ ಉಪಾ ಸನೆಯಿಂದ ಸಂತಾನೋತ್ಪತ್ತಿಯೂ ಪಶುಸಮೃದ್ಧಿಯೂ ಆಗುತ್ತದೆಂದು ದೃಷ್ಟಫಲವನ್ನು ತಿಳಿಸುತ್ತಿದೆ. ಛಾಂ.ಉ.೧.೧೩ ಸ್ತೋಭಾಕ್ಷರಗಳು ಅಂದರೆ ಹಾಉ, ಹಾಇ, ಇತ್ಯಾದಿಗಳ ಉಪಾಸನಾದೃಷ್ಟಿಯನ್ನೂ ಮುಂದೆಕೊಟ್ಟಿರುವ ಕ್ರಮವನ್ನೂ ಪದಕದಲ್ಲಿರುವಂತೆ ತಿಳಿಸು ತ್ತಿದೆ. ಶ್ರುತಿ ಬೋಧಿಸುತ್ತಿರುವ ತತ್ತ್ವದ ಸಾಕ್ಷಾತ್ಕಾರಕ್ಕೆ ಆಲಂಬನವಾಗಿರುವ ಈ ಸ್ತೋಭಾ ಕ್ಷರಗಳು ಅಮೃತಸ್ವರೂಪವನ್ನು ಸಂಕೇತಿಸುವ ಅವ್ಯಕ್ತಾರ್ಥವನ್ನು ಧ್ವನಿಸುವ ದಿವ್ಯಪ್ರತೀಕ ಗಳೇ ಆಗಿರುವುದರಿಂದ ಈ ಸ್ತೋಭಾಕ್ಷರಗಳು ನಿರರ್ಥಕವಲ್ಲ. ವಾಕ್ಕು ವಿಕಾರವನ್ನು ತಿಳಿಸುವ ಕೇವಲ ಹೆಸರು ಮಾತ್ರವಾಗಿರುತ್ತದೆ. ಅದು ಸತ್ಯವಲ್ಲ. ವಾಚಾರಂಭಣಂ

ವಿಕಾರೋ ನಾಮಧೇಯಮ್ - ಛಾಂ.ಉ.೬.೧.೪., ಎಂದು ಶ್ರುತಿ ತಿಳಿಸುತ್ತಿದೆ. ಆತ್ಮನು ಅಭಿಧಾನಾಭಿಧೇಯಗಳನ್ನು ಮೀರಿರುವುದರಿಂದ ಯಾವ ಶಬ್ದಕ್ಕೂ ವಿಷಯವಾಗಿಲ್ಲ - ಛಾಂ.ಉ.೭.೧.೩. ಧ್ವನಿಮಾತ್ರ ವಾದ ಅವ್ಯಕ್ತಾರ್ಥ ಸ್ತೋಭಗಳು ಭಗವಂತನನ್ನು ಸಂಕೇತಿಸುವ ವಾಹಕಗಳಾಗಿ ಮೈದಳೆದು ದೈವೀಗಾನದ ಆನಂದಕ್ಕೆ ಕಾರಣವಾಗಿವೆ. ಗಾನ ವನ್ನು ಸಂಗೀತವನ್ನು ಕೇಳಿ ಆನಂದಾನು ಭವವನ್ನು ಹೊಂದಲು ಭಾಷೆಯ ನಿರ್ಬಂಧ ವಿಲ್ಲವೆಂಬ ಲಕ್ಷಣೆಯಿಂದ ಧ್ವನ್ಯಾತ್ಮಕ ನಾದರೂಪ ನಿತ್ಯವಾದುದೆಂಬುದನ್ನು ಸೂಚಿಸುತ್ತದೆ. ಅಂದರೆ ಅವ್ಯಕ್ತಾರ್ಥ ಸ್ತೋಭಗಳು ನಿತ್ಯವಾದ ಧ್ವನ್ಯಾತ್ಮಕ ನಾದರೂಪಗಳು.

ಆದರೆ ಸಾಮಗಾನಾವಸರದಲ್ಲಿ ಋಕ್‌ನಲ್ಲಿಲ್ಲದ ಗಾನದಲ್ಲಿರುವ ಏ ಇ ಉ ಹಾಉ ಇಯಾ ಹಾಇ ಔಹೋಯಿ ಔಹೋವಾ ಇತ್ಯಾದಿ ಅವ್ಯಕ್ತ ಭಾವನೆಗಳ ಧ್ವನಿ ಸಂಕೇತವೇ ಸಂಗೀತದ ಮೂಲವೆಂದು ಕೆಲವರ ಅಭಿಪ್ರಾಯವಾಗಿದೆ. ಇದರ ಸಾಮಾನ್ಯವಾದ ವ್ಯಾವಹಾರಿಕವಾದ ವಿಶಿಷ್ಟವಾದ ಅರ್ಥಗಳು ಶಬ್ದರೂಪದಲ್ಲಿ ವ್ಯಕ್ತವಾಗಲಾದುದರಿಂದ ಅವ್ಯಕ್ತಾರ್ಥ ಸ್ತೋಭಗಳೆನಿಸಿವೆ. ಸಾಮಗಾನದ ಅಂತಃಸತ್ವವಾದ ಈ ಸ್ತೋಭಗಳ ಉದ್ದೇಶ ವಿಶಿಷ್ಟ ಧ್ವನಿಗಳಿಂದ ಅವ್ಯಕ್ತವನ್ನು ಸಂಕೇತಿಸಿ ಈ ದೈವೀ ಗಾನವು ಪ್ರಭಾವಶಾಲಿಯಾಗು ವಂತೆ ಮನಮುಟ್ಟುವಂತೆ ಮಾಡುವುದೇ ಆಗಿದೆ ಎಂಬುದನ್ನು ಮರೆಯಲಾಗದು. ಗ್ರಾಮ ೧೦೫೧ರಲ್ಲಿರುವ ಅಯೋಹಾಇ, ಇಹೋ ಇಯಾ, ಈಯಾ, ಔಹೋವಾ ಹಾಗೂ ಏ ಇದಕ್ಕೆ ಉದಾಹರಣೆಗಳಾಗಿವೆ.

ಇನ್ನೊಂದು ದೃಷ್ಟಿಯಿಂದ ಸ್ತೋಭದ ಈ ಮೂರು ಪ್ರಕಾರಗಳನ್ನು ಗಮನಿಸ ಬಹುದು 'ಛನ್ನ' - ಸಾಮಯೋನಿ ಋಗಾಶ್ರಯವಿಲ್ಲದೆ ಕೇವಲ ಸ್ತೋಭಗಳಿಂದಾಗಿರುವ ಗಾನಗಳು 'ಛನ್ನಗಾನ' ವೆನಿಸುತ್ತವೆ. ಇವುಗಳಲ್ಲಿ ಪ್ರಸ್ತಾವದಿಂದ ನಿಧನದವರೆಗಿನ ಎಲ್ಲಾ **'ಭಕ್ತಿ'** ಗಳೂ ಸ್ತೋಭಮಯವಾಗಿರುತ್ತವೆ. **ಕೇಷುಚಿತ್‌ಸಾಮಸು ಋಕ್‌ಪದ ಧರ್ಮಾ ಅಪಿ ಪ್ರಸ್ತಾವಾದಾರಭ್ಯ ನಿಧನಾವಸಾನಂ ಯಾವತ್ ಸ್ತೋಭಪದ ವಿಶೇಷೈರೇವ ಭವನ್ತಿ** - *ಸಂ.ಉ. ಬ್ರಾ.೨.೩ ಸಾಯಣ ಭಾಷ್ಯ, ಅರ.೩೯,* ಅರ್ಕಗ್ರೀವ ಸಾಮಕ್ಕೆ ಸಾರ್ಥಕ ಸ್ತೋಭಗಳೇ ಆಧಾರವಾಗಿವೆ. ಅರ.೨೦೭ ಅಗ್ನೇರಿಲಾಂದಂ ಸಾಮಕ್ಕೆ **ಅವ್ಯಕ್ತಾರ್ಥ ಸ್ತೋಭಗಳೇ** ಆಧಾರ ವಾಗಿದ್ದು **ಇಡೀ ಸಾಮಗಾನ ಸಂಹಿತೆಯಲ್ಲಿ** ಈ ತೆರನ ಸಾಮ **ಇದೊಂದೇ** ಆಗಿದೆ.

**ಲೇಶ** - ಋಗಕ್ಷರಗಳ ಜೊತೆಯಲ್ಲೇ ಅರ್ಥಸಹಿತ ಹಾಗೂ ಅವ್ಯಕ್ತಾರ್ಥ ಸ್ತೋಭ ಗಳ ಗಾನವಾಗುವ ಬಗೆಯು ಲೇಶವೆನಿಸುತ್ತದೆ. ಕೆಲವು ಸಾಮಗಳಲ್ಲಿ ಒಂದು ಅಥವಾ ಅನೇಕ ಪದಗಳೊಂದಿಗೆ ಸ್ತೋಭಗಳ ಗಾನವಾಗುತ್ತವೆ. ಕೆಲವು ಸಾಮಗಳಲ್ಲಿ ಪ್ರತ್ಯೇಕ ಪಾದಗಳಲ್ಲಿ ಸ್ತೋಭದ ಗಾನವಾಗುತ್ತದೆ - ಕುತ್ರಚಿತ್ ಸಾಮವಿಶೇಷೇಷು ಸರ್ವತ್ರ ಪ್ರವೃತ್ತಾ ಭವನ್ತಿ ॥ *ಸಂ.ಉ.ಬ್ರಾ.೨.೩* ॥ ಹೀಗೆ ಲೇಶಗಾನದಲ್ಲಿ **ಪದಸ್ತೋಭವೆಂದೂ**

ಪಾದಸ್ತೋಭವೆಂದೂ ಎರಡು ಬಗೆಗಳಿವೆ. **ಪದಸ್ತೋಭ** - ಗಾನವಾಗುವಾಗ ಋಕ್‌ನ ಒಂದು ಎರಡು ಅಥವಾ ಪ್ರತ್ಯೇಕಪದದ ಹಿಂದೆ ಅಥವಾ ಮುಂದೆ ಋಗ್ವ್ಯತಿರಿಕ್ತ ಸಾರ್ಥಕ ಅಥವಾ ಅವ್ಯಕ್ತಾರ್ಥ ಸ್ತೋಭ ಪಠಿತವಾಗಿರುವುದು **ಪದಸ್ತೋಭವೆನಿಸುತ್ತದೆ.** ಗ್ರಾಮ ೪೪೬ರಲ್ಲಿ, 'ಇನ್ದ್ರ' ಪದದ ನಂತರ ಔಹೋ, ಕ್ರತುಂ ನಂತರ ಆ ಭರ ಪಿತಾ ನಂತರ ಔಹೋ, ಪುತ್ರೇಭ್ಯೋ ಹಾಗೂ ಶಿಕ್ಷಾ ಪದಗಳ ನಂತರ ಔಹೋ, ಣೋಅಸ್ಮಿನ್‌ಪುರುಹೂತ ಯಾಮಾನಿ ಜೀವಃ ನಂತರ ಔಹೋವಾ ಸ್ತೋಭವಿರುವುದು ಪದಸ್ತೋಭದ ಉದಾಹರಣೆಯಾಗಿದೆ. **'ಪಾದಸ್ತೋಭ'** - ಸಾಮಗಾನದಲ್ಲಿ ಋಕ್‌ನಲ್ಲಿರುವ ಒಂದು ಪಾದಕ್ಕೆ ಮೊದಲು ಅಥವಾ ಅನಂತರ ಸಾರ್ಥಕ ಅಥವಾ ಅವ್ಯಕ್ತಾರ್ಥ ಸ್ತೋಭಗಳ ಗಾನವಾಗುವುದು **ಪಾದಸ್ತೋಭವೆನಿಸುತ್ತದೆ** - ಗ್ರಾಮ.೩೭೭ರಲ್ಲಿ ಪ್ರತ್ಯೇಕ ಪಾದಾನಂತರ ಆ । ಔಹೋವಾ ಹಾಉವಾ । ಊಪಾ ॥ ಸ್ತೋಭ ಪಠಿತವಾಗುತ್ತದೆ.

ಈ ಪದ ಮತ್ತು ಪಾದಸ್ತೋಭಗಳಲ್ಲಿ ಪುನಃ ಪ್ರತ್ಯೇಕವಾಗಿ ಎರಡು ಭೇದಗಳಿವೆ. **ಅನ್ವಯೀ ಚಾನುಷಂಗೀ ಚ ದ್ವೌಸ್ತೋಭೌ ಅನುಕೀರ್ತಿತೌ ॥** *ಸ್ತೋ.ಸಂ. ೩ ॥* **ಅನ್ವಯೀ** - ಪದ ಅಥವಾ ಪಾದಕ್ಕೆ ಮುಂಚೆ ಗಾನವಾಗುವ ಸ್ತೋಭ 'ಅನ್ವಯೀ' ಎನಿಸುತ್ತದೆ - ಅನ್ವಯೀ ತು ಪದಾದೌ । ಗ್ರಾ.ಸಾ. ೧೦೩೦ರಲ್ಲಿ ಹೋ । ಹೋಇ ಸ್ತೋಭಗಳು ಪ್ರತಿ ಪಾದದ ಆದಿಯಲ್ಲೇ ಪಠಿತವಾಗಿರುವುದರಿಂದ **ಅನ್ವಯೀ** ಎನಿಸಿದೆ **'ಅನುಷಂಗೀ'** ಋಕ್‌ನ ಪಾದ, ಪದ ಅಥವಾ ವರ್ಣಾನಂತರ ಪಠಿತವಾಗಿರುವ ಸ್ತೋಭ 'ಅನುಷಂಗೀ' ಎನಿಸುತ್ತದೆ. ಸ್ಯಾದನುಷಂಗೀ ಪದಾತ್ಪರಃ । ಸ್ತೋಭಾನು ೩ ॥ ಗ್ರಾಮ ೬೨೧ರಲ್ಲಿ ಪ್ರತ್ಯೇಕ **ಪದದನಂತರ** 'ಏ' ಸ್ತೋಭ ಪಠಿತವಾಗಿರುವುದು ಅನುಷಂಗೀ ಪದ ಸ್ತೋಭದ ಉದಾಹರಣೆಯಾಗಿದೆ. ಗ್ರಾಮ ೩೬೩ರಲ್ಲಿ ಪ್ರತ್ಯೇಕ **ಪಾದಾನಂತರ** ಔಹೋವಾ ಸ್ತೋಭದ ಪಠಿತವಾಗಿರುವುದು. ಅನುಷಂಗೀ ಪಾದಸ್ತೋಭಯುಕ್ತ ಸಾಮದ ಉದಾಹರಣೆಯಾಗಿರುತ್ತದೆ.

ಸಾಮಗಾನಗಳಲ್ಲಿ ಕೆಲವು ಋಗಾಶ್ರಯವಾಗಿಯೂ ಕೆಲವು ಸ್ತೋಭಮಯವಾಗಿಯೂ ಕೆಲವು ಋಕ್ ಮತ್ತು ಸ್ತೋಭಗಳಿಂದ ಕೂಡಿದ ಉಭಯ ವಿಧವಾಗಿಯೂ ಇರುತ್ತವೆ. ಋಗಾಶ್ರಯವಾದ ಸಾಮಗಾನವು **ಆರ್ಚಿಕಸಾಮವೆನಿಸುತ್ತದೆ.** ಸ್ತೋಭರಹಿತವಾಗಿ ಕೇವಲ ಸಾಮಯೋನಿ ಋಕ್‌ನಿಂದಲೇ ಉದಯವಾಗಿರುವ ಈ ತೆರನ ಗಾನಗಳಿಗೆ **ಆವಿಃ** ಅಥವಾ **ಆವಿರ್ಗಾನವೆಂದೂ** ಹೆಸರಿದೆ. ಉದಾ : ಆವೋ ರಾಜಾ ಗ್ರಾಮ.೧೧೩ ॥ ಕೇವಲ ಸ್ತೋಭಮಯವಾಗಿದ್ದು **ಸ್ತೌಭಿಕವೆನಿಸಿರುವ** ಸಾಮ ಗಳಿಗೆ ಉದಾ - ದೇವವ್ರತ ಸಾಮಗಳು *ಅರ.೨೧೨-೨೧೪.* ಋಕ್ ಮತ್ತು ಸ್ತೋಭಯುಕ್ತ ವಾಗಿ ಉಭಯ ವಿಧಸಾಮಗಳಿಗೆ ಉದಾ ಮಾರ್ಗೀಯವಮ್ ಮತ್ತು ರೌದ್ರಂ - *ಗ್ರಾಮ.೧೮೧-೧೮೩ ॥*

ಈ ಸ್ತೋಭಗಳನ್ನು ರೂಪಾನುಗುಣವಾಗಿಯೂ ವಿಂಗಡಿಸಲಾಗಿದೆ. ಸ ಚ ಸ್ತೋಭಃ ತ್ರಿವಿಧಃ । ವರ್ಣಸ್ತೋಭಃ ಪದಸ್ತೋಭಃ ವಾಕ್ಯಸ್ತೋಭಶ್ಚೇತಿ । ಕಾ.ಶ್ರೌ.ಸೂ. ವಿದ್ಯಾಧರ ॥ **ವರ್ಣಸ್ತೋಭ** - ತತ್ರ ವರ್ಣಸ್ತೋಭ ಇಕಾರಾದಿ । ಗಾನದಲ್ಲಿರುವ ಅ ಇ ಏ ಉ ಓ ಮುಂತಾದವು ಗ್ರಾಮ ೬೨೧ರಲ್ಲಿ ಪ್ರತ್ಯೇಕಪಾದದಲ್ಲಿ ಪಠಿತವಾಗಿರುವ 'ಏ' ಅವ್ಯಕ್ತಾರ್ಥ ವರ್ಣಸ್ತೋಭದ ಉದಾಹರಣೆಯಾಗಿದೆ. **'ಪದಸ್ತೋಭ'** ಸಾರ್ಥಕ ಅಥವಾ ಅವ್ಯಕ್ತಾರ್ಥ ಸ್ತೋಭಗಳು ಪದರೂಪದಲ್ಲಿ ಪಠಿತವಾಗುವುದು ಪದಸ್ತೋಭವೆನಿ ಸುತ್ತದೆ. ಪದಸ್ತೋಭ ಹಾಇ ಹಾಉ ಆದಿ ಕಾ.ಶ್ರೌ.ಸೂ. ॥ ಹಾಇ ಹಾಉ ಔಹೋಇ ಆದಿ ಅವ್ಯಕ್ತಾರ್ಥ ಪದಸ್ತೋಭಗಳು. ಚನ್ದ್ರ ಸೂರ್ಯ ಭ್ರಾಜ ಇತ್ಯಾದಿ ಸಾರ್ಥಕ ಪದಸ್ತೋಭಗಳು ಪರ್ಕ ಸಾಮ ಗ್ರಾಮ ೩ರಲ್ಲಿ ಔಹೋವಾ, ಓಇ ಅವ್ಯಕ್ತಾರ್ಥ ಪದಸ್ತೋಭಗಳು. **'ವಾಕ್ಯ ಸ್ತೋಭ'** - ಅಶಸ್ತಿ ಸ್ತುತಿ ಸಂಖ್ಯಾನಮ್ ಪ್ರಲಯ ಪರಿದೇವನ ಪ್ರೈಷ ಅನ್ವೇಷಣಮ್ ಸೃಷ್ಟಿಃ ಆಖ್ಯಾನಮಿತಿ ವಾಕ್ಯಸ್ತೋಭೋನವವಿಧಃ ಎಂದು ಸ್ತೋ.ಸಂ. ಗ್ರಂಥವು ವಿವರಿಸುತ್ತದೆ. ವಿಭಿನ್ನ ಅರ್ಥ ಮತ್ತು ಮಾನವೀಯ ಭಾವಗಳಿಂದೊಡಗೂಡಿದ ಈ ವಾಕ್ಯಸ್ತೋಭಗಳು ಸಾರ್ಥಕವಾಗಿದ್ದು ವ್ಯಕ್ತಪಡಿಸುವ ವಿಷಯಗಳು ಹೀಗಿವೆ - **ಅಶಸ್ತಿ** - ನಿಂದಿತ ವ್ಯಕ್ತಿ, ದುಷ್ಟ ಉಚ್ಚೃಂಕಲ **ಸ್ತುತಿ** - ಪ್ರಶಂಸೆ ಸ್ತೋತ್ರ ಹೊಗಳಿಕೆ. **ಸಂಖ್ಯಾನ** - ಸಂಖ್ಯೆ ಪ್ರಕಾಶ, **ಪ್ರಲಯ** - ನಾಶ, ಅಳಿವು, ಮರಣ, ಜಗತ್ತಿನ ನಾಶದ ಕಾಲ, ಕಲ್ಪದ ಕೊನೆಯಕಾಲ **'ಪರಿದೇವನ'** - ಪ್ರಲಾಪ ಗೋಳಾಟ, **ಪ್ರೈಷ** - ಕಳುಹಿಸುವುದು. **'ಕ್ಲೇಶ'** ಪೀಡೆ ಮರ್ದನ ಉನ್ಮಾದ. **'ಅನ್ವೇಷಣ'** - ಹುಡುಕು ಧ್ಯಾನ ಚಿಂತನೆ. **'ಸೃಷ್ಟಿ'** - ನಿರ್ಮಾಣ ಉತ್ಪತ್ತಿ ಸ್ವಭಾವ ಜಗತ್ ಸೃಷ್ಟಿಕ್ರಮ. **ಆಖ್ಯಾನ** - ಹೇಳುವುದು. ಪೂರ್ವಕಥೆ, ಕಲ್ಪಿತ ಕಥೆ ಹೇಳುವುದು.

ಋಕ್‌ಗಳ ಆಧಾರವಿಲ್ಲದೆ ಕೇವಲ ಸ್ತೋಭಗಳಿಂದಲೇ ಮೈದಳೆದಿರುವ ಸಾಮಗಾನಗಳು ಅನರ್ಚವೆಂದೂ ಸ್ತೌಭಿಕ ಸಾಮಗಾನಗಳೆಂದೂ ಗುರುತಿಸಲ್ಪಟ್ಟು - ಗ್ರಾಮಗೇಯದಲ್ಲಿ ಒಂದು ಅರಣ್ಯಗೇಯದಲ್ಲಿ ಇಪ್ಪತ್ತಾರು ಸಾಮಗಾನಗಳೂ, ಊಹ ಗಾನದಲ್ಲಿ ಇಪ್ಪತ್ತಾರು ಸಾಮಗಾನಗಳೂ ಸೇರಿ ಸಾಮಗಾನ ಸಂಹಿತೆಯಲ್ಲಿ - ಒಟ್ಟು ಮೂವತ್ತೆರಡು ಸಾಮಗಾನಗಳಿವೆ.

**ಸರ್ವತ್ರಗತಾಃ** - ಸರ್ವಾಸು ದೇವತಾಸು ಗತಾ ವ್ಯಾಪ್ತಾಃ ಸ್ತೋಭಾಃ । ಆರ್ಚಿಕ ಸಂಹಿತಾಯಾಂ **ಸರ್ವತ್ರ ನಿವೃತ್ತಾಃ** ಸನ್ತಃ ಅತ್ರ ಗಾನ ವಿಧೌ **ಸರ್ವತ್ರ ಪ್ರವೃತ್ತಾ** ಭವನ್ತಿ । ಅಥವಾ । **ಸರ್ವತ್ರ ನಿವೃತ್ತಾ** ಇತಿ ಘೋಷಣಾಧ್ಯಯನವಿಧೌ ಸರ್ವೇಭ್ಯಃ ಪಾದೇಭ್ಯಃ ನಿವೃತ್ತಾ ಆದ್ಯನ್ತಾ ಏವ ದರ್ಶಿತಾಃ । ತೇ ಪ್ರಯೋಗಕಾಲೇ ಸರ್ವೇಷು ಪಾದೇಷು ಪ್ರವೃತ್ತಾ ಭವನ್ತಿ ॥ ಸಂ.ಉ.ಬ್ರಾ. ೨.೩ ಸಾಯಣಭಾಷ್ಯ. ಸಮಸ್ತ ದೇವತೋದ್ದೇಶವಾದ ಸಮಸ್ತ ಸಾಮಗಾನಗಳಲ್ಲೂ ಸ್ತೋಭಗಳು ವ್ಯಾಪ್ತವಾಗಿರುವುದರಿಂದಲೇ ಸ್ತೋಭಗಳಿಗೆ ಸಮಸ್ತ

ದೇವತಾ ವ್ಯಾಪ್ತಿಯ ಹಿರಿಮೆ ಗರಿಮೆ ಮಹಿಮೆಗಳಿರುವುದರಿಂದಲೇ ಇದನ್ನು ಉಪಾಸನೆಯ ಶ್ರೇಷ್ಠ ಆಲಂಬನೆಯಾಗಿ ಛಾಂ.ಉ. ಸ್ವೀಕರಿಸಿದೆ. ಆಲಾಪನೆಯೇ ಇಲ್ಲದ ಲೌಕಿಕವಾದ ಸಂಗೀತದ ಗೇಯವು ಅಚೇತನವಾದ ಶಬ್ದದ ಆಕೃತಿಮಾತ್ರವಾಗಿರು ವಂತೆಯೇ ಸ್ತೋಭವಿಲ್ಲದ ಸಾಮಗಾನವೂ ಆಹ್ಲಾದಕರವಲ್ಲದ ನಿರ್ಜೀವ ಶಬ್ದಮಾತ್ರವಾಗಿರುತ್ತದೆ. ಸ್ತೋಭಗಳ ಕಾರಣದಿಮದಲೇ ಸಾಮಗಾನಗಳು ದೇವತೆಗಳನ್ನೇ ಆಹ್ಲಾದ ಗೊಳಿಸಿ ಮಾಡಿ ಸಾಮಗಾಯಕನನ್ನು ದೇವತೆಗಳ ಪ್ರೀತಿಪಾತ್ರನನ್ನಾಗಿಸುತ್ತವೆ.

## ಸ್ತೋಭೋಪಾಸನೆ - ಛಾಂ. ಉ. ೧. ೧೩. ೩

| ಸ್ತೋಭ | ಉಪಾಸನೆ | ಪ್ರಸಿದ್ಧಿ - ಸಾಮ | ದೃಷ್ಟಿ |
|---|---|---|---|
| ಹಾಉ | ಈ ಲೋಕ | ರಥನ್ತರಸಾಮ | ಪೃಥಿವೀ |
| ಹಾಇ | ವಾಯು | ವಾಮದೇವ್ಯಸಾಮ | ವಾಯು, ನೀರು, ಸಂಬಂಧ |
| ಅಥ | ಚನ್ದ್ರ | ,, | ಚಂದ್ರ ಅನ್ನಾತ್ಮಕ |
| ಇಹ | ಪ್ರತ್ಯಕ್ಷ ಆತ್ಮ | ,, | ಆತ್ಮವೇ |
| ಈ | ಅಗ್ನಿ | ಈಕಾರದಲ್ಲಿ ಅಂತ್ಯವಾಗುವ ಆಗ್ನೇಯಸಾಮಗಳು | ಅಗ್ನಿ |
| ಊ | ಆದಿತ್ಯ | ಆದಿತ್ಯದೇವಾತ್ಮಕ ಸಾಮ | ಊರ್ಧ್ವ |
| ಏಹಿ | ಆಹ್ವಾನ | ,, | ನಿಹವ |
| ಔಹೋಯಿ | ವಿಶ್ವೇದೇವತೆಗಳು | ವೈಶ್ವದೇವ್ಯಸಾಮ | ವಿಶ್ವೇದೇವತೆಗಳು |
| ಹಿಂ | ಪ್ರಜಾಪತಿ | ,, | ಅನಿರುಕ್ತ / ಅವ್ಯಕ್ತ |
| ಸ್ವರ | ಪ್ರಾಣ | ,, | ಪ್ರಾಣ |
| ಯಾ | ಅನ್ನ | ,, | ಯಾತಿ ಅನ್ನದಿಂದ ಸಾಗುವ ಜಗತ್ತು |
| ವಿರಾಜ | ಅನ್ನ | ವೈರಾಜ ಸಾಮ | ಅನ್ನ |
| ಹುಂ | ಕಾರಣದೃಷ್ಟಿ ಯಿಂದ ಬ್ರಹ್ಮ | ,, ,, | ಅನಿರುಕ್ತ, ಅವ್ಯಕ್ತ ವಿಭಿನ್ನ ಸ್ತೋಭಾಕಾರದಲ್ಲಿ ಪರಿಣತವಾಗಿದೆ. |

ಸ್ತೋಭ ಗಾನೇನ್ನೈವ ಶ್ಲಕ್ಷಣತಾ ಶ್ರಾವ್ಯತಾ ಚ ತಸ್ಯ ಹವಾ ಏತಸ್ಯ ಸಾಮ್ನಃ ಋಗೇವಾಸ್ಥೀನಿ ಸ್ವರೋಮಾಂಸಾನಿ ಸ್ತೋಭಾ ಲೋಮಾನಿ ॥ ಸ್ತೋಭಾನಿ ಕೇಶಸದೃಶಮುಕ್ತಮ್ ॥ ಸಾಮ ಗಾನದ ಅಂದ ಚೆಂದ ಸೌಂದರ್ಯಾದಿಗಳೆಲ್ಲಾ - ಕೂದಲಿನ ವಿನ್ಯಾಸವೇ ಮನುಷ್ಯರಿಗೆ ಭೂಷಣವಾಗಿರುವಂತೆ - ಸ್ತೋಭಗಳಿಂದಲೇ ಪ್ರಾಪ್ತವಾಗಿದೆ. **ಕಲಾನಾಂ ಪೂರಣಂ ಮನ್ತ್ರ ಪದ್ಯೈಃ ಸ್ತೋಭಾಕ್ಷರೈರಪಿ ॥ ತಾನ್ಯತ್ರ ಬ್ರಹ್ಮಗೀತಾನಿ ನಿರ್ದೇಶ್ಯನ್ತೇಽಧುನಾ ಯಥಾ ॥** *ಶಾರ್ಙ್ಗದೇವ* // ಸ್ತೋಭಗಳು ನಾದ ಮಾಧುರ್ಯದಿಂದಲೂ ಗಾನದ ಸೊಗಸಿನಿಂದಲೂ ಇಂಪಿನಿಂದಲೂ ಮನ್ತ್ರವಿದ್ಯೆಯ ಮೋಡಿಯಿಂದಲೂ ದೇವತೆಗಳು ಸುಪ್ರೀತರಾಗುವಂತೆ ಮಾಡುತ್ತವೆ. ಸಾಮಗಾನದಲ್ಲಿ ಅಳವಡಿಸಲ್ಪಟ್ಟಿರುವ **ಹಾಉ .... ಹಿಂ** ಇತ್ಯಾದಿ ಸಾಮಗಾನಾವಯವಗಳಾದ ತ್ರಯೋದಶ ಸ್ತೋಭಗಳ ಮಹಿಮೆಯನ್ನೂ, ಲೋಕದೃಷ್ಟಿಯಿಂದ ಮಾಡಬಹುದಾದ ಉಪಾಸನೆಯ ಕ್ರಮವನ್ನೂ - *ಛಾಂ. ೧.೧೩.೩.* ಹಾಗೂ ೨ನೆಯ ಅಧ್ಯಾಯ ವಿವರವಾಗಿ ತಿಳಿಸಿ ಸ್ತೋಭಾಕ್ಷರ ಉಪಾಸಕನು ಸಾಮಗಳ ದರ್ಶನ ಪಡೆದು ವಾಗ್ಮಿಯೂ ಅನ್ನವಂತನೂ ಅನ್ನಾದನೂ ಆಗುವನೆಂದಿದೆ. ಋಕ್ ರಹಿತವಾದ ಸಾಮಗಳ ಮಹಿಮೆಯನ್ನೂ ಇದರ ಉಪಾಸನೆಯಿಂದ ಸ್ವರ್ಗಾದಿ ಕಾಮನೆಗಳನ್ನು ಈಡೇರಿಸಿಕೊಂಡಿರುವವರ ವಿವರಗಳನ್ನೂ ಜೈ. ಉ. ಬ್ರಾ. ಬಗೆಬಗೆಯಾಗಿ ವರ್ಣಿಸಿದೆ.

**ಸಾಮವೇದ ಗಾನಗ್ರಂಥಗಳಲ್ಲಿ ಅನುಸರಿಸಿರುವ ಸ್ವರಸಂಕೇತಗಳು :**

**ಆರ್ಚಿಕ ಸ್ವರಗಳು :**

ಉಚ್ಚೈರುದಾತ್ತಃ - ೧ - ಅಂಗುಷ್ಠ । ನೀಚೈರನುದಾತ್ತಃ - ೩ - ಮಧ್ಯಮ । ಸಮಾಹಾರಃ ಸ್ವರಿತಃ - ೨ - ತರ್ಜನಿ ।

೨ ೩ ೧ ೨ ೩ ೧ ೨
**ಉದಾ : ಅಗ್ನ ಆಯಾಹಿ ವೀತಯೇ ॥ ಋ.** *೧ //*

ಶಿವಕೋದಾತ್ತ - ೨ಉ

೩ ೩ ೨ ೩ ೨ಉ . ೩ ೨
**ಉದಾ : ಆದಿತ್ಪ್ರತ್ನಸ್ಯ -** *ಋ. ೨೦ //* **ಉದ್ಘೇದಭಿ -** *ಋ. ೧೨೫ //*

**ಕಠಿಣತಯಾ ಉಚ್ಚಾರಣಂ :** ದ್ವಿತೀಯ ಸ್ವರಃ ಸ್ವರಿತಃ - **೨೦**

೨೦ ೨೦
**ಉದಾ : ನಿಹೋತಾ -** ಋ. ೧. / **ನಶಜ್‌ಸಿಷಮ್ -** *ಋ. ೩೫. /*

ಉಚ್ಚರಿತಃ - **ಕ೨ರ**

೨ರ ೩ಕ ೨ರ ೨ ೩ಕ ೨ರ

ಉದಾ : **ವಾಜಂ ವಾಜ್ಯಕ್ರಮೀತ್** - ಋ. *೬೫೫* ॥ **ವರ್ಧಸ್ವರತನ್ವಾ** - ಋ. *೫೨* ॥

ಕಮ್ಪಃ - **೨ಕ೩**

೧ ೨ ೩ ೨ಕ ೨ ೩

ಉದಾ : **ಮಾನ ಇನ್ದ್ರಾಭ್ಯಾ೩ದಿಶಃ** - ಋ. *೧೨೮* ।

ಎರಡು ಉದಾತ್ತ ಬಂದಾಗ ಮೊದಲನೆಯದು - **೨ಉ** ನಂತರದ್ದು ೩ ।

೨ಉ ೩ ೨ ೩ ೩ ೨ಉ ೩ ೧ ೨

ಉದಾ : **ಆದಿತ್ಪ್ರನ್ನಸ್ಯ** - ಋ. *೨೦* ॥ **ಪರೋೀಯದಿಧ್ಯತೇ** ॥ ಋ. *೨೦* ॥

**ಪದಪಾಠದ ಸ್ವರಗಳು :**

೨ ೧ ೨ರ ೩ ೨ ೩ ೧ ೨

ಉದಾತ್ತಃ**ತ್ವಂ**। ಆದ್ಯುದಾತ್ತಃ**ಅಗ್ನೇ**। ಅನ್ತೋದಾತ್ತಃ**ಗೃಣಾನಃ**। ಮಧ್ಯೋದಾತ್ತಃ**ವೀತಯೇ**

೨ ೩ರ ೧ ೨ ೨ರ ೩ ೨ರ ೩

ದ್ವಯ್ಯುದಾತ್ತಃ **ಅವರಿತಿ** । ಸ್ವರಿತಃ **ಸ್ವಃ** । ನೀಚಸ್ವರಿತಃ **ವೀರ್ಯಮ್** । ಅನುದಾತ್ತಃ **ಪ್ರೇಷ್ಠಂ ವಃ**

೩

ಸರ್ವಾನುದಾತ್ತಃ **ಅಮಂಥತ** ॥

**ಸಾಮಗಾನ ಸಂಹಿತೆಯಲ್ಲಿ ಉಪಯೋಗಿಸಿರುವ ಚಿಹ್ನೆಗಳು :**

**ನ** - ಶುದ್ಧ ಪ್ರಥಮಸ್ವರದ ಉಚ್ಚಾರಣೆಯು ಶುದ್ಧ ದ್ವಿತೀಯ ಸ್ವರದವರೆಗೆ ಆಗುವುದನ್ನು ನಮನ ಎಂದು ಹೆಸರಿಸಿ ಆಯಾ ವರ್ಣದ ಮೇಲೆ 'ನ' ಅಕ್ಷರವನ್ನು
೧ನ ೨
ಬರೆದು ಸೂಚಿಸಲಾಗುತ್ತದೆ. **ಆಮೋ೭೩ವಾ** ॥ **ವಿ** - ಶುದ್ಧಪ್ರಥಮಸ್ವರದ ಉಚ್ಚಾರಣೆಯು ದ್ವಿತೀಯ ಸ್ವರದವರೆಗೆ ಆಗುವುದನ್ನು '**ವಿನತ**' ಎಂದು ಹೆಸರಿಸಿ ಆ ವರ್ಣದ ಮೇಲೆ
೧ ವಿ
'ವಿ' ಅಕ್ಷರವನ್ನು ಬರೆದು ಸೂಚಿಸಲಾಗುತ್ತದೆ. **ಅಗ್ನಿರ್ನೋ೭೨** । ನಮನ ವಿನತಗಳೆರಡೂ ಪ್ರಥಮಾದಿ ದ್ವಿತೀಯಾನ್ತ ಸ್ವರಗಳಾದರೂ ನಮನದಲ್ಲಿ ಪ್ರಥಮಸ್ವರವು ದ್ವಿತೀಯಸ್ವರವನ್ನತಿಕ್ರಮಿಸಿ ತೃತೀಯವನ್ನು ತಲುಪಿದ ನಂತರ ಶುದ್ಧ ದ್ವಿತೀಯ ಸ್ವರವನ್ನು ಪಡೆಯುತ್ತದೆ. ವಿನತದಲ್ಲಿ ಪ್ರಥಮ ಶುದ್ಧಸ್ವರದಿಂದ ನೇರವಾಗಿ ವರ್ಣ ಮಧ್ಯದಲ್ಲಿನ ದ್ವಿತೀಯ ಸ್ವರವನ್ನು

ಪಡೆಯುತ್ತದೆ. ವಿನತ ಯಾವಾಗಲೂ ದ್ವಿತೀಯ ಸ್ವರದಲ್ಲೇ ಇರುತ್ತದೆ. **ರ** - ಸಾಮ ಯೋನಿಯ ಋಗ್ಗತ ದೀರ್ಘ ಅಕ್ಷರವು ಸಾಮಗಾನದಲ್ಲೂ ದೀರ್ಘಾಕ್ಷರವಾಗಿದ್ದು ಅದರಲ್ಲಿ ವೃದ್ಧಿ ಇಲ್ಲದಿದ್ದರೆ ಆ ವರ್ಣದ ಮೇಲೆ ರ ಅಂಕಿತವಾಗಿರುತ್ತದೆ. **ಪ್ರೇಙ್ಖ** ವೆಂದೆನಿಸುವ - ಈ ಅಡ್ಡಗೆರೆಯು ಪೂರ್ವವರ್ತಿಯಾದ ಪ್ರಥಮಸ್ವರವು ದ್ವಿತೀಯಸ್ವರದ ವರೆಗೆ ವೃದ್ಧಿಯಾಗುವುದನ್ನು ಸೂಚಿಸುತ್ತದೆ - ಈ ಚಿಹ್ನೆ ಯನ್ನು ದ್ವಿತೀಯ ಸ್ವರದ ಮೇಲೆ

೨ ೧ —

ತೋರಿಸಲಾಗುತ್ತದೆ. ಉದಾ : **ತು ಇನ್ದ್ರಾವಾऽ೨ಃ ।**

ऽ : **ಅವಗ್ರಹ**ವೆಂದೆನಿಸಿರುವ ಈ ಚಿಹ್ನೆಯು ಪೂರ್ವ ವರ್ತೀ ವರ್ಣದ ಸ್ವರವು ಮುಂದುವರೆಯುತ್ತಿದೆಂಬುದನ್ನು ಸೂಚಿಸುತ್ತದೆ. **ಅಗ್ನಿರ್ಮಹೋऽ೨೩ನಾऽ೩ಮ್ ।** ಈ ^ ವಕ್ರಚಿಹ್ನೆಯು ಪೂರ್ವವರ್ತೀ ವರ್ಣದ ಸ್ವರವು ಮುಂದಿನ ವರ್ಣದವರೆಗೆ ಮುಂದು

೧ ^

ವರೆಯುತ್ತಿರುವುದನ್ನು ಸೂಚಿಸುತ್ತದೆ. **ಪಾऽ೨ಘೂ ॥** ಕೆಲವು ಸಂದರ್ಭಗಳಲ್ಲಿ ಪೂರ್ವ ಅವಗ್ರಹವಿಲ್ಲದೆಡೆ ಅಕ್ಷರದ ಮೇಲೆ ಪೂರ್ವವರ್ತಿ ಸ್ವರವೇ ಮುಂದುವರೆ

೨ ೨ ^

ಯುತ್ತಿದೆಯೆಂಬುದನ್ನು ತೋರಿಸಲು ಈ ಚಿಹ್ನೆಯನ್ನು ಹಾಕಿರುತ್ತದೆ. **ದ್ರಾऽ೩ತಾ೩ ।** ಈ ವಕ್ರಚಿಹ್ನೆಯನ್ನು ವರ್ಣ ವರ್ಣದ ಮಧ್ಯದ ಅಂಕೆಯ ಮೇಲೂ ಅವಗ್ರಹದ ಮೇಲೂ ತೋರಿಸಿರುತ್ತಾರೆ.

**ಸಾಮಗಾನದ ಸ್ವರಗಳು ಅಂಕಿತವಾಗಿರುವ ಬಗೆಗಳು :-**

೧ ೨ ೩ ೪

**ಏಕಸ್ವರಾಃ :-** ಉದಾ : **ತದ್ವಿವಿಡ್ಢಾ೩, ಇನ್ದ್ರ೦ ವಿಶ್ವಾ೩ಃ, ಇ, ಹಿಂತಾಃ,**

೫ ೦

**ಅಗ್ನಿಂ ದೂತಾಮ್ ಇತ್ಯಾದಿ**

**ಅನೇಕಸ್ವರಾಃ :-** ಮೂರು ವಿಧ : **ಅನುಲೋಮಗೀತಮ್ :- ಅವರೋಹ ಕ್ರಮೇ**

೧ ೨ ೨ ೩ ೪ ೫ ೧ ೨ ೨

**ಣಉಚ್ಚಾದಿ ನೀಚಾನ್ತಂ - ಆನ್ಧಾಃ, ಏऽ೩, ಹಙ್ऽ೪, ಜಾರಾ, ಸಮಾಯೇ೩, ತಾऽ೨**

೨ ೩ ೪ ೫ ೧

**೩೪ಮ್, ಊತಏಕಾನ್, ಓऽ೨೩೪೫೩, ಇತ್ಯಾದಿ ॥ ಪ್ರತಿಲೋಮಗೀತಮ್ :-**

೨೧ ೩೦ ೨ ೪ ೫೪
ಆರೋಹ ಕ್ರಮೇಣ ನೀಚಾದಿ । ಉಚ್ಚಾನ್ತಂ – ನನ್ದಾಇ, ಏಹಿಯಾ, ಹಾಽ೩ಇ, ಪುರೂ
೩ ೦ ೨ ೧ ೫ ೦ ೩೦ ೨೧
ನುಷೇಜನಾ ಸಹೋವಾನನ್ತಾ ॥ ಉಭಯ ವಿಧಗೀತಮ್ :- ಎರಡು ಬಗೆ – ಉಚ್ಚಾ
೧ ೨೧ ೧ ೩ ೨೧ ೨ ೩ ೨ ೪೦ ೫ ೪
ದಿ ಉಚ್ಚಾನ್ತಮ್ : ವಾಇಶ್ವತಾಇ, ಚಾಽ೨ದಕ್ಷಸಾಇ ಹಜ್‌ಸಿಯಾ, ಪ್ರೇಷ್ಠಂ ವಾಃ –
೨೦ ೧ ೨೦ ೩೦ ೨ ೫ ೪
ಇತ್ಯಾದಿ ॥ ನೀಚಾದಿ ನೀಚಾನ್ತಮ್ :- ಗ್ನೇಮಹೋಭಿಃ, ಸೋಮಾಽ೩ಇ, ನಶ್ಚಾಽ೩ಇ
೨ ೪೦ ೫
ತ್ರಾಽ೩ಇ ಆಭುವಾತ್ – ಇತ್ಯಾದಿ ॥

**ವಿಸ್ವರಮ್** :- ವಿಸ್ವರಮಕ್ಷರಮ್ । ಸ್ವರೇಸ್ವರೇ ತ್ರಿಮಾತ್ರಂ ಭವತಿ – 'ಪ್ರತ್ಯುತ್ಕ್ರಮ', 'ಅತಿಕ್ರಮ', 'ಕರ್ಷಣ' ಸ್ವಾರೇಷು । ಏಕ ಏವ ಸ್ವರಃ ಕ್ರುಷ್ಟಃ ಸನ್ ಯದಿ
೧
ಸ್ವರಾನ್ತರಂ ಪ್ರಾಪ್ನೋತಿ ತದಾ ತಸ್ಯ ವಿಸ್ವರಃ ಇತಿ ಸಂಜ್ಞಾ । ಯಥಾ – ಓಽ೨೩೪೫ಇ ।
ಅತ್ರ 'ಓ'ಕಾರಃ ಪ್ರಥಮಸ್ವರಸ್ಥಃ ಮನ್ದ್ರಾನ್ತಂ ಇತಿ ವಿಸ್ವರಃ ॥

**ಪ್ರತ್ಯುತ್ಕ್ರಮಃ ಅಷ್ಟವಿಧಃ** : ಮಾತ್ರಾಲಕ್ಷಣ ೧.೧೮-೨೬ ॥ ಅತಿಸ್ವಾರೋ ಮನ್ದ್ರಂ
೩ ೨ ೪ ೫
ಪ್ರತ್ಯುತ್ಕ್ರಾಮತಿ ಪರಿಸ್ವಾರೇ – ಕಯಾಽ೩ಇಸ್ಥಾಽ೫ಇರಾಽ೬೫೬ನ್ ॥ ಗ್ರಾ.೨೨ ॥ ಮನ್ದ್ರಶ್ಚತು
೩೦ ೫
ರ್ಥಂ ಪ್ರತ್ಯುತ್ಕ್ರಾಮತಿ – ಶ್ರಾಯನ್ತ ಇವಸೂಽ೪ರಾಯಾಮ್ ॥ ಗ್ರಾ. ೪೬೧ ॥ ಚತುರ್ಥ
೫೦ ೪ ೨ ೪ ೫೦
ಸ್ತೃತೀಯಮ್ – ದೂತಾಽಂವೋಽ೩ಇ ವಿಶ್ವವೇದಸಾಮ್ ॥ ಗ್ರಾ.೨೧ ॥ ತೃತೀಯೋ ದ್ವಿತೀ
೩ ೫ ೨೦
ಯಮ್ – ಹೀಽ೨೩೪ಷೀ ॥ ಗ್ರಾ.೧. ॥ ದ್ವಿತೀಯಃ ಪ್ರಥಮಮ್ – ಔಹೋಽ೧ಇ । ಅಗ್ನೇ
ರಾಥಾಽ೨೩ಮ್ ॥ ಗ್ರಾ.೧೦ ॥ ಮನ್ದ್ರಶ್ಚತುರ್ಥಮ್ ಅತಿಕ್ರಮ್ಯ ತೃತೀಯೇ ಪ್ರತ್ಯುತ್ಕ್ರಾಮತಿ –
೪ ೩೦ ೪ ೫೦ ೦ ೩೦ ೨ ೩ ೫
ಸುನೋತಸೋಮಪಾ ಆವ್ವಾಓಽ೨೩೪ವಾ ॥ ಗ್ರಾ. ೯೯೪ ॥ ಮನ್ದ್ರಃ ಚತುರ್ಥತೃತೀಯಾ
೪ ೫ ೧ ೧ ೧
ವತಿಕ್ರಮ್ಯ ದ್ವಿತೀಯಂ ಪ್ರತ್ಯುತ್ಕ್ರಾಮತಿ – ಷಿಭಾಽ೨ಉ, । ವಾಽ೩೪೫ ॥ ಗ್ರಾ.೧೧೧೦ ॥

೩ ೨
ತೃತೀಯೋ ದ್ವಿತೀಯಮತಿಕ್ರಮ್ಯ ಪ್ರಥಮಂ ಪ್ರತ್ಯುತ್ಕ್ರಾಮತಿ - **ಪುನಾಽ೩೧** ॥ *ಗ್ರಾ. ೯೫೩* ॥

೧
**ಅತಿಕ್ರಮಃ ಚತುರ್ವಿಧಃ :-** ಮಾಲ *೧.೨೮.೩೧* ॥ ಕೃಷ್ಟಃ ಪ್ರಥಮಮತಿಕ್ರಾಮತಿ - **ಊಽ೨ -**

೩ ೫ ೧೦ ನ
**ನ ಆಗಾಽ೨೩೪ಹೋ** । *ಗ್ರಾ. ೪೯೨* ॥ ಪ್ರಥಮೋ ದ್ವಿತೀಯಮ್ ಅತಿಕ್ರಾಮತಿ - **ಆರೋಽ೩**

೨
**ಹಾನ್** । ಅತ್ರ 'ನ' ಇತಿ ಚಿಹ್ನಮ್ ನಮನಮ್ ಇತಿ ವ್ಯವಹ್ರಿಯತೇ । ಲಕ್ಷಣಗ್ರನ್ಥೇಷು 'ಅಭಿಗೀತ' 'ವಿನತ' 'ಪ್ರಣತಾ'ದಿ ಸ್ವರಾಣಾಂ ನಿರ್ದೇಶೋ ಭವತಿ । 'ನಮನಸ್ಯ' ನ ಪ್ರೇಙ್ಖ್ಯಸ್ಯ - ತು ಏತನ್ನಾಮ್ನಾ ನಿರ್ದೇಶೋ ನ ದೃಶ್ಯತೇ ॥ ತೃತೀಯಶ್ಚತುರ್ಥಮ್ ಅತಿಕ್ರಾಮತಿ - **ಯಜ್ಞಾಽ೫**

೪ ೩
೪ ೧ ೧ ೨೦ ೩೦ ೨
**ಯ** ॥ *ಗ್ರಾ. ೫೯* ॥ ಪ್ರಥಮಃ ತ್ರೀನತಿಕ್ರಾಮತಿ - **ಈಽ೫ಹೋಹೋಹೋಹೋಹಿ** ॥ *ಆರ. ೧೮೦* ॥

**ಕರ್ಷಣಮ್ ಪಂಚ ವಿಧಮ್ :-** ಮಾ. ಲ. *೧.೩೨* ॥ ಆದ್ವಿತೀಯಕರ್ಷಣಮ್ -

೧ ೧ ೨
**ಬೋಧಾಽ೨** । *ಗ್ರಾ. ೧೫* ॥ ಆತೃತೀಯಕರ್ಷಣಮ್ - **ಆಽ೨೩ಇನ್ದ್ರಃ** । *ಗ್ರಾ. ೪೭೬* ॥

೧
ಆಚತುರ್ಥಕರ್ಷಣಮ್ - **ಸ್ನಾಽ೨೩೪ಭಾಇ** । *ಗ್ರಾ. ೧೩೭* ॥ ಆಮನ್ದ್ರಕರ್ಷಣಮ್ -

೧ ೫ ೫
**ಓಽ೨೩೪೫ಇ** । *ಗ್ರಾ. ೫* ॥ ಮನ್ದ್ರಶ್ಚ ಅತಿಸ್ವಾರ್ಯಾತ್ ಕೃಷ್ಯತೇ - **ತ್ವನ್ನ್ವಾಽ೬ಮೇ** । *ಗ್ರಾ. ೭೨* ॥

೨
**ಸ್ವಾರಃ ತ್ರಿವಿಧಃ :-** ಮಾ. ಲ. *೨.೧-೪* ॥ ಪ್ರಥಮಾದಿರ್ನವಮಾತ್ರಃ - **ಹರೀ೩ -**

೧ ೧೧೧ ೨ ೧೧೧
**ಶ್ರೀಽ೨೩೪೫ಃ** । *ಗ್ರಾ. ೩೩೭* ॥ ದ್ವಿತೀಯಾದಿ ಷಣ್ಮಾತ್ರಃ - **ಆಽ೩೪೫** । ತೃತೀಯಾದಿ

೩ ೧೧೧
ಅಷ್ಟಮಾತ್ರಃ - **ಈಽ೨೩೪೫** । *ಆರ. ೪೭* ॥

ಏಷು ಸ್ವಾರೇಷು ತೃತೀಯ ಚತುರ್ಥ ಮನ್ದ್ರಸ್ವರಾಣಾಮುಪರಿ ನಿರ್ದಿಷ್ಟಃ ಪ್ರಥಮೋಙ್ಕಃ ಏಕಮಾತ್ರಿಕಸ್ಯ ಬೋಧಕಃ । ಸ್ವಾರೇ ತ್ರಯೋನ್ಯಾಃ ಪೃಥಕ್ ಏಕಮಾತ್ರಾಃ । ಯತ್ ಮನ್ದ್ರ ತೃತೀಯ ದ್ವಿತೀಯೈಃ ಸ್ವರೈಃ ವರ್ತಮಾನಂ ಅಕೃಷ್ಟಂ ಪ್ರತ್ಯುತ್ಕ್ರಾಮತಿ ಅನನ್ತರ ಸ್ವರೇ ಉಚ್ಚೇ

೫೦ ೫
ಪ್ರತ್ಯಯೇ ॥ ತತ್ ದ್ವಿಮಾತ್ರಾದಿಃ ಯಥಾ - **ಶ್ರಾಯನ್ತ ಇವ ಸೂಽಳರಾಯಾಮ್ ।**

೩ ೫
*ಗ್ರಾ. ೪೬೧* ॥ ಅತ್ರ ಸೂಕಾರಃ । ದ್ವಿಮಾತ್ರಿಕಃ ॥ **ಹೀಽ೨೩ಳಷೀ । ಅತ ಹೀಕಾರಃ ದ್ವಿಮಾ ತ್ರಿಕಃ ।**
೨೦
**ಔಹೋಽ೧ಇ ।** *ಗ್ರಾ.೧೦* ॥ ಅತ್ರ 'ಹೋ'ಕಾರಃ ದ್ವಿಮಾತ್ರಿಕಃ ॥ ಜಿಹ್ವಾಮೂಲೀಯ

ಪ್ರಯೋಜಕಂ । ಅರ್ಚಿಕೋ ಅಕ್ಷರ ಕಾಲಃ .... ಮಾತ್ರಾಲಕ್ಷಣ ೩.೩.೮ ॥

೨ ೧ ವಿ
**ವಿನತಮ್** - ಪ್ರಥಮಾದಿಃ ದ್ವಿತೀಯಾನ್ತಮ್ ॥ **ಅಗ್ನಿರ್ನೋಽ೨ - ವಿ** ॥ **ಪ್ರಣತಮ್**

೨ ೦ ೧ ೨
- ದ್ವಿತೀಯಾದಿಃ ತೃತೀಯಾನ್ತಮ್ ॥ **ರಮ್ಮನ್ಯೇಽ೩ದಾಸ್ವನ್ತಮ್ - ಪ್ರ** ॥

ವಿನತ ಪ್ರಣತಯೋಃ ಅನ್ತ್ಯೇ ಅರ್ಧಮಾತ್ರಾ ನೀಚೇನ ಸ್ವರೇಣ ಭವತಿ । ಯದಿ ದೀರ್ಘಾಕ್ಷರಂ ಸ್ಯಾತ್ ತರ್ಹಿ ಉಚ್ಚೇ ಅಧ್ಯರ್ಧಾಭವತಿ । ಯದಿ ಹ್ರಸ್ವಮ್ ತರ್ಹಿ ಉಚ್ಚೇ ಅರ್ಧಮ್ ಭವತಿ ॥

೫ ೪೦ ೪
'ಉತ್ಸ್ವರಿತಮ್' - ಚತುರ್ಥಾದಿ ಮನ್ದ್ರಾನ್ತಮ್ । **ಮನುಷ್ಯೇಽ೫ಭಿರಗ್ನಿಃ ।** ಅತ್ರ ಚತುರ್ಥೇ ಅರ್ಧಮಾತ್ರಾ, ಮನ್ದ್ರೇ ಅಧ್ಯರ್ಧಾ ॥

**ಅಭಿಗೀತಮ್** ಅಬಿಗೀತೇ ದ್ವಿಮಾತ್ರಾದ್ವಿತೀಯೇ ಪ್ರಥಮೇದ್ಯರ್ಧಾ ಇತಿ । ದ್ವಿತೀ

೧೦ ಅ ೪
ಯಾದಿ ಪ್ರಥಮಾನ್ತಮ್ ॥ ಸಂ. ಉ. ಬ್ರಾ ॥ ೩.೯,೧೦ ॥ **ಸ್ತೋಮಾಜ್ ರುದ್ರಾಽ೨೩ಯಾ ।**
೧ ಅ ೧೧೧
**ಪಾಇನ್ವೋ.ಅರ್ಕಾಽ೨೩ಳ೫ಇಃ ।** ಅತ್ರ ಅರ್ಧಮಾತ್ರಾ, ದ್ವಿತೀಯೇ ಪ್ರಥಮೇ ಅಧ್ಯರ್ಧಾ ಭವತಿ ॥

೪ ೫೦ ೦ ೨ ೧
**ಸಪ್ತವಿಧಾ ಅರ್ಧಮಾತ್ರಾಃ :-** ಓಗ್ನಾಇ ॥ **ಪ್ರೇಷ್ಠಂವೋಹಾಉ** ॥ **ಷುಪ್ರಾ**

೧ ಅ ೧ ___ ೩ ೨
**ವೋಽ೨೩ಚಾಽ೩ಳ೩ಃ** ॥ **ನಾಯಕ್ರಮೀಽ೨ಕ** ॥ **ವೋಅಗ್ನಾಯಾಽ೨ಇ** ॥ **ತಿಯಾಽ೩**

೪ ೫೦ ೦ ೦ ೫
**ಇಷ್ಕಾಽ೫ರಾ೬೫೬ನ್** ॥ **ವಿಶೋ ವಿಶೋಹಿಮ್ಸ್ಥಿವೋಽ೬ಅತಿಥಾಇಮ್** ॥ ಏಷು

ಸಪ್ತಸು ಅನ್ತಿಮೇ ವರ್ತಮಾನಾನಿ ಇ ಉ ತ್ ಇ ನ್ ಮ್ ಇತ್ಯಾದೀನಿ ಅಕ್ಷರಾಣಿ ಅರ್ಧಮಾತ್ರಿಕಾಣಿ ॥

**ಪಂಚ ವಿಧಾಶ್ರುತಯಃ :-**

**ದೀಪ್ತಾ -** ಕ್ರುಷ್ಟಾತ್ ಅಥವಾ ಪ್ರಥಮಸ್ವರಾತ್ ಪರೀಭೂತೇ ದ್ವಿತೀಯ ಸ್ವರೇ ವಿರತೇ

॥ ಪ ೨ ೧ ೨ ಪ

ದ್ವಿತೀಯ ಸ್ವರೇ ಪರತಃ ದೀಪ್ತಾಶ್ರುತಿಃ ಭವತಿಃ - **ಊಽ೨ ॥ ತೃಮ್ಪಾವಾಽ೧ಯಾಽ೨ ॥** ಇತ್ಯಾದಿ ॥

**ಆಯತಾ -** ನೀಚೇ ತೃತೀಯಸ್ವರಂ ಪರತ ಸ್ಥಿತೇ ದ್ವಿತೀಯ ಸ್ವರಸ್ಯ ಆಯತಾಶ್ರುತಿಃ

೨ ೩ ೪ ೫ ೧ ^ ೨ ^ ೩

**ಊತಏಕಾಮ್ ॥ ತ್ವಾಽ೨ಇ ॥ ವಾರಾವಾಽ೨೩೪ಸ್ತಾನ್ ॥**

**ಮೃದುಭೂತಾ -** ವಿಪರ್ಯಯೇ ಅನ್ಯಸ್ವರೇ ಚತುರ್ಥಸ್ವರೇ ಪರಭೂತೇ ಮೃದು

೦ ೦ ೨

ಭೂತಾ - **ಉದ್ಘೇದಭಿಶ್ರುತಾಮಾಽ೩ಘಾಮ್ ॥** ಊಹ. ೫೪೮ ॥ ಅತ್ರ **ಘಾ**ಮಿತಿ ದ್ವಿತೀಯ ಸ್ವರಾತ್ಪರಾಶ್ಚತುರ್ಥಸ್ವರಃ ತತ್ರ ಮೃದುಭೂತಾ ॥

೧ ಪ

**ಮಧ್ಯಮಾ -** ಸ್ವೇಸ್ವರೇ ಸ್ವರಾನ್ತರೇ **ಅ** ಪರಭೂತೇ ಮಧ್ಯಮಾ ಶ್ರುತಿಃ ॥ **ವಾಽ೨**

೨

**ತೋ೯ೞಽ೩೫ಹಾಇ ॥** *ಪ್ರ. ೩೦೬ //* **ತೋ** ಇತಿ ಸಮಾನಸ್ವರೇ ಮಧ್ಯಮಾ ಶ್ರುತಿಃ ಇತಿ ಜ್ಞೇಯಮ್ ॥

೧ ::

**ಕರುಣಾ -** ಕ್ರುಷ್ಟೇ ತು ಕರುಣಾ ಶ್ರುತಿಃ ಹಾಽ೨ಊ ಊವಾಽ೨ಇ । **ಊ** । ಆರಾತ್ತಾ

೧ :: ಪ

ದಾಸ ಧಮಾದಾಽಮ್ । ಹಾ೨ಊ ಊವಾ೨ಇ । **ಊಽ೨** । ದೀಪ್ತಾದಿ ಚಿಹ್ನಂ ಪ್ರಾಚೀನ ಪುಸ್ತಕೇ ದೃಶ್ಯತೇ । ಅಧ್ಯಯನ ಪ್ರಕಾರಶ್ಚ ತಥೈವ ನ ತು ಸ್ವರಾನ್ತರೇಷು ದೀಪ್ತಾದಿ ಚಿಹ್ನಮ್ ॥

**ಸಾಮಗಾನದಲ್ಲಿ ಭಕ್ತಿಗಳು :**

ಭಕ್ತಿ ಶಬ್ದವು ಭಜ್‌ಧಾತುವಿಗೆ ಕ್ತಿನ್ ಪ್ರತ್ಯಯವು ಯೋಗವಾಗಿ ರೂಪಗೊಂಡಿದ್ದು 'ವಿಭಾಗ' ಎಂಬರ್ಥದಲ್ಲಿ ಪ್ರಯೋಗವಾಗಿದೆ. ಪರ್ವಗಳು ಪಾರಿಭಾಷಿಕವಾಗಿ ವಿರಾಮ

ವೆಂದು । ಗೆರೆಯಿಂದ ಗುರುತಿಸಿಕೊಂಡು ಸ್ವರಗಳ ವಿನ್ಯಾಸಾನುಗುಣವಾಗಿ ವಿಂಗಡವಾಗಿ ರುವ ಲಘುತಮ ವಿಭಾಗಗಳಾಗಿದ್ದರೆ ಉದ್ಗಾತೃವರ್ಗದ ಋತ್ವಿಜರು ಗಾನಮಾಡಬೇಕಾದ ಅನಿವಾರ್ಯಗಳಿಗನುಗುಣವಾಗಿ ಪ್ರತಿಸಾಮದ ಗಾನದ ಭಾಗಗಳನ್ನು ಅಥವಾ ಅವಯವ ಗಳನ್ನು ಸಮಷ್ಟಿಯಾಗಿ ಭಕ್ತಿಯೆಂದು ಕರೆದು ಖಚಿತವಾಗಿ ವಿಂಗಡಿಸಿ । ಗೆರೆಗಳಿಂದ ಗುರುತಿಸಿ ಯಾವ ಭಕ್ತಿಯೆಂದು ನಿಶ್ಚಯಿಸಿ ಹೆಸರಿಸಲಾಗಿದೆ. ಸಾಮಗಾನದಲ್ಲಿ ಭಕ್ತಿಗಳ ಸಂಖ್ಯೆ ನಿರ್ಧಾರಿಸಲ್ಪಟ್ಟಿದ್ದರೂ, ಯಾವುದೇ ಭಕ್ತಿಯಲ್ಲಿ ಇಷ್ಟೇ ಪರ್ವಗಳಿರಬೇಕೆಂಬ ನಿಯಮವೇನಿಲ್ಲ. ಒಂದದ ರಿಂದ ಇಪ್ಪತ್ತೈದು ಪರ್ವಗಳವರೆಗಿರುವುದನ್ನು ನೋಡ ಬಹುದು. ಸಾಧಾರಣವಾಗಿ ಪೂರ್ಣ ಪರ್ವಗಳೇ ಪ್ರತಿಭಕ್ತಿಯಲ್ಲಿ ಸಮಾವೇಶವಾಗಿದ್ದರೂ ಕೆಲವು ಗಾನಗಳಲ್ಲಿ ಉದಾ ಇಡಾ ಎಂಬ ನಿಧನದ 'ಇ' ಪೂರ್ವಪರ್ವದ ಭಾಗವಾಗಿಯೂ 'ಡಾ' ಉತ್ತರಪರ್ವದ ಭಾಗವಾಗಿ ಯೂ ಇರುವುದನ್ನು ಕಾಣಬಹುದು. ಪ್ರತಿ.ಸೂ. ೧.೧೦ ಮತ್ತು ೧.೧೧ ಹಾಗೂ ಲಾ.ಶ್ರೌ. ಸೂ.೭.೫.೨.೧ ಅನುಸರಿಸಿ ಭಕ್ತಿಗಳ ವಿಂಗಡಣೆಯನ್ನು ಹೀಗೆ ಮಾಡಲಾಗಿದೆ..




**ಸಮವಿಭಾಗ್ಯ :-** ಸಾಮದಲ್ಲಿನ ಎಲ್ಲಾ ಪರ್ವಗಳ ಎಲ್ಲಾ ಪಾದಗಳೂ ಸಮಾನಸ್ವರಗಳಲ್ಲಿ ಗಾನ ಮಾಡಲ್ಪಡುತ್ತದೆ. ಋ.೫೫೭ ರಿಂದ ಉದಯವಾಗಿರುವ ೧೧೦ಳ 'ಪ್ರವದ್ಭಾರ್ಗವ' ಸಾಮ ದಲ್ಲಿ ಮೂರು ಪರ್ವಗಳ ನಾಲ್ಕು ಪಾದಗಳಿದ್ದು ಪ್ರಥಮಪಾದದ ಪ್ರಥಮಪರ್ವಗಾನ ೨ ಮತ್ತು ೧ನೆಯ ಸ್ವರದಲ್ಲಾಗಿರುವಂತೆಯೇ ಉಳಿದೆಲ್ಲಾ ಪರ್ವಗಳಲ್ಲೂ ಎಲ್ಲಾ ಪಾದ ಗಳಲ್ಲೂ ೨ ಮತ್ತು ೧ನೆಯ ಸ್ವರದಲ್ಲೇ ಗಾನವಾಗುತ್ತವೆ.

ಇದರಲ್ಲಿ ಪ್ರಥಮಪಾದ **ಪ್ರಸ್ತಾವ,** ದ್ವಿತೀಯ ಪಾದ **ಉದ್ಗೀಥ** ತೃತೀಯ ಪಾದ **ಪ್ರತಿಹಾರ** ಚತುರ್ಥಪಾದ **ಉಪದ್ರವ**ಭಕ್ತಿಗಳಾಗಿದ್ದು ಅನ್ತಿಮ 'ವಾಽ೨೩೪೫' । ಒಂದು ಪರ್ವ **ನಿಧನ** ಭಕ್ತಿಯಾಗಿದೆ. ಹೀಗೆ ಈ ಸಾಮದಲ್ಲಿ ಭಕ್ತಿಗಳ ವಿಭಜನೆ ಸಮಾನರೂಪದಲ್ಲಾಗಿದೆ.

**ವಿಭಾಗ್ಯಸಾಮ :-** ಮೂರು ಬಗೆಯಾಗಿದ್ದು ವಿವರಗಳು ಹೀಗಿವೆ. **ಪದವಿಭಾಗ್ಯ** ಸಾಮ - ಪರ್ವ ಪದ ಮತ್ತು ಪಾದದಲ್ಲಿ ಸ್ವರಗಳು ಒಂದೇ ತೆರನಾಗಿದ್ದು ಗಾನದಲ್ಲಿ ಭಕ್ತಿಗಳು ನಾಲ್ಕು ಪಾದಗಳಲ್ಲಿ ಸಮನಾಗಿ ವಿಭಕ್ತವಾಗಿ ಅನ್ತಿಮ ಪರ್ವ 'ವಾಽ೨೩೫' ನಿಧನವಾಗಿರುವುದನ್ನೂ ಪರ್ವ ಮತ್ತು ಪಾದಗಳೂ ಇದೇ ರೀತಿ ವಿಭಕ್ತವಾಗಿರುವುದನ್ನೂ ಮೇಲೆ ಉದಾಹರಿಸುವ ೧೧೦೪ ಪ್ರವದ್ಭಾರ್ಗವ ಸಾಮದಲ್ಲಿ ಕಾಣಬಹುದು. **ಸ್ತೋಭವಿಭಾಗ್ಯ -** ಸಾಮದಲ್ಲಿ ಪ್ರತಿಪರ್ವದಲ್ಲೂ ಪ್ರತಿಪಾದದಲ್ಲೂ ಗಾನವಾಗುವ ಸ್ತೋಭಗಳ ಸ್ವರಗಳ ನಮೂನೆ ಒಂದೇ ತೆರನಾಗಿದ್ದು ಎಲ್ಲಾ ಭಕ್ತಿಗಳಲ್ಲೂ ಸಮಾನರೂಪವು ಕಂಡುಬರುತ್ತದೆ. ಉದಾ : ವಾಸಿಷ್ಠಸಾಮ - ಗ್ರಾ.೪೩೦. ವೈಶ್ವಜ್ಯೋತಿಸಾಮ - ಗ್ರಾ.೧೧೪. **ಪದಸ್ತೋಭ ವಿಭಾಗ್ಯ :-** ಸಾಮದಲ್ಲಿ ಸ್ತೋಭಸಹಿತ ಎಲ್ಲಾ ಪರ್ವ ಅಥವಾ ಪಾದಗಳಲ್ಲಿ ಒಂದೇ ನಮೂನೆಯ ಸ್ವರಗಳಿರುತ್ತವೆ. ಅಂದರೆ ಸ್ತೋಭಸಹಿತ ಒಂದು ಪಾದದಲ್ಲಿರುವ ತೆರನಸ್ವರಗಳೇ ಸ್ತೋಭಸಹಿತ ಒಂದು-ಎರಡು ಮೂರು ನಾಲ್ಕನೆಯ ಪಾದಗಳಲ್ಲೂ ಇರುವುದರಿಂದ ಸ್ತೋಭಸಹಿತ ಒಂದೊಂದು ಪಾದವೂ ಒಂದೊಂದು ಭಕ್ತಿಯ ರೂಪದಲ್ಲೇ ಮಾನ್ಯವಾಗಿರುತ್ತದೆ. ಉದಾ : ವಾತ್ಸಪ್ರಸಾಮ - ಗ್ರಾ.೫೩೭.

**ಅವಿಭಾಗ್ಯ ಅಥವಾ ವಿಷಮಭಕ್ತಿಸಾಮ :** ಈ ತೆರನಗಾನಗಳಲ್ಲಿ ಪ್ರತಿ ಪರ್ವ ಅಥವಾ ಪಾದವೂ ಭಿನ್ನಭಿನ್ನಸ್ವರಗಳಿಂದ ಮೈದಳೆದಿದ್ದು ಭಕ್ತಿಗಳೂ ಸಮಾನರೂಪದಲ್ಲಿ ವಿಭಾಗವಾಗಿರದೆ ಅಕ್ಷರಗಳ ಸಂಖ್ಯೆ ಭಿನ್ನಭಿನ್ನವಾಗಿ ಒಂದರಲ್ಲಿ ನಾಲ್ಕು, ಇನ್ನೊಂದರಲ್ಲಿ ಎಂಟು, ಮತ್ತೊಂದರಲ್ಲಿ ಹದಿನೈದು ಅಕ್ಷರಗಳನ್ನು ಒಳಗೊಂಡಿರುವುದನ್ನು ನೋಡಬಹುದಾಗಿದೆ.

೨೦ ೦ ೦೧ ೨ ೩ ೫ ೨ ೦
ತರೋಽಭಿರ್ವಾ ಔಹೋಽಹಾಇ ॥ ವಾಇದದ್ವಾಽ೨೩೪ಸೂಮ್ । ಇನ್ದ್ರಜ್ಸಬಾ

೦ ೧ ೫ ೧ ೦ ೦ ೦ ೦೨ ೩೦ ೪೦
ಧಲೂತಾಯೋಽ೨೩೪ಹಾಇ । ಬೃಹದ್ಗಾಯನ್ತಸ್ಸುತಸೋಽಮೇ ಅಧ್ವಾಽ೩೪ । ಔಹೋ

೫ ೧೩ ೫ ೨ ೩ ೫ ೨೧೦ ೨ ೧೮೦ ೨
ವಾ । ಇಹಾಽ೨೩೪ಹಾಇ । ಉಹುವಾಽ೨೩೪ರಾಇ । ಹುವೇಭ । ರಾನ್ನಕಾರಾಽ೩೪ ।

೩೦ ೪೦ ೫ ೧೩ ೫ ೩೦೨ ೫೦ ೨
ಔಹೋವಾ ॥ ಇಹಾ೭೨೩ಳಹಾಇ । ಔಹೋ೭೩೧೨೩ಳ । ಣಾಮ್ । ಏಹಿಯಾ೭೬ಹಾ ॥

.... ಊಹ ೩೮೯ ॥ ಈ ಸಾಮಗಾನದಲ್ಲಿರುವ ಪ್ರತಿಪರ್ವದ ಸ್ವರಗಳೂ ಬೇರೆಬೇರೆ ತೆರನಾಗಿರುವುದನ್ನು ಗಮನಿಸಬೇಕಾದುದಾಗಿದೆ.

ಸಾಮಗಾನದ ಅವಯವಗಳಿಗೆ 'ಭಕ್ತಿ' ಎನ್ನುತ್ತಾರೆ. ಏಕೈಕಸ್ಯ ಸಾಮ್ನಾ ಪಂಚಭಕ್ತಯಃ । ಹಿಂಕಾರ ಪ್ರಸ್ತಾವೋದ್ಗೀಥ ಪ್ರತಿಹಾರೋಪದ್ರವ ನಿಧನಾಖ್ಯಃ ॥ ಹಿಂಕಾರ ಪ್ರಸ್ತಾವ ಉದ್ಗೀಥ ಪ್ರತಿಹಾರ ಉಪದ್ರವ ನಿಧನ ಎಂದು ಸಾಮಗಾನದಲ್ಲಿ ಐದು ಭಕ್ತಿಗಳಿರುತ್ತವೆ. ಯಜ್ಞದಲ್ಲಿ ನಾಲ್ಕೂ ವೇದಗಳ ನಾಲ್ಕು ನಾಲ್ಕು ಋತ್ವಿಜರು ಭಾಗವಹಿಸುತ್ತಾರಷ್ಟೆ. ಅದರಲ್ಲಿ ಸಾಮವೇದ ಕರ್ಮಾನುಷ್ಠಾನದಲ್ಲಿ ಭಾಗವಹಿಸುವ ನಾಲ್ಕು ಜನ ಸಾಮವೇದೀಯ ಋತ್ವಿಜರಿಗೆ ಸಾಮವೇದೀಯಾಃ ಉದ್ಗಾತೃಗಣ ಎನ್ನುತ್ತಾರೆ. ಇವರು ನೆರವೇರಿಸಬೇಕಾದ ಅನುಷ್ಠಾನವನ್ನು ಅನುಸರಿಸಿ ಕ್ರಮವಾಗಿ ಉದ್ಗಾತಾ ಪ್ರಸ್ತೋತಾ ಪ್ರತಿಹರ್ತಾ ಸುಬ್ರಹ್ಮಣ್ಯ ಎಂಬ ಹೆಸರುಗಳಿಂದ ವ್ಯವಹರಿಸಲಾಗುತ್ತದೆ. ಇವರ ಕರ್ತವ್ಯ - ಪ್ರಸ್ತಾವೋದ್ಗೀಥ ಪ್ರತಿಹಾರೋಪದ್ರವ ಭಕ್ತಯಃ ಪಂಚವಿಧಿತ್ವಾ ನಿಧನಾ ಕರ್ತವ್ಯಃ ॥ ಪಂಚ ಭಕ್ತಯಃ ಅಧ್ಯಯನಾದಿಷು ಪ್ರಸ್ತಾವಾತ್ಪೂರ್ವಂ ಹಿಂಕಾರಂ ಉದ್ಗೀಥಾತ್ಪೂರ್ವಂ ಓಂಕಾರಂ ಚ ಗಾತವ್ಯಮ್ ॥ ಅತಃ ಸಪ್ತಭಕ್ತಯಃ ಇತಿ ವ್ಯವಹಾರಃ । ಸಪ್ತಭಕ್ತಯಃ ಯಜ್ಞೇಷು ಪ್ರಯೋಗ ಕಾಲೇ ॥ ಹೀಗೆ ಸಾಮಗಾನದ ಅಧ್ಯಯನದಲ್ಲಿ ಪ್ರಸ್ತಾವಾದಿ ಪಂಚಭಕ್ತಿಗಳೇ ಪ್ರಧಾನವಾಗಿದ್ದರೂ ಯಜ್ಞದಲ್ಲಿ ಪ್ರಯೋಗವಾಗುವ 'ಹಿಂ'ಕಾರ 'ಓಂ'ಕಾರಗಳೂ ಸೇರಿ ಏಳು ಭಕ್ತಿಗಳಾಗಿದ್ದು ಅವುಗಳ ಪರಿಚಯ ಹೀಗಿದೆ -

ತಸ್ಮಾ ಉಷಾ ಹಿಙ್ಕೃಣೋತಿ ಸವಿತಾ ಪ್ರಸ್ತೌತಿ । ಬೃಹಸ್ಪತಿರೂರ್ಜಯೋದ್ಗಾಯತಿ ತ್ವಷ್ಟಾ ಪುಷ್ಟ್ಯಾ ಪ್ರತಿ ಹರತಿ ವಿಶ್ವೇದೇವಾ ನಿಧನಮ್ । ನಿಧನಮ್ ಭೃತ್ಯಾಃ ಪ್ರಜಾಯಾಃ ಪಶೂನಾಂ ಭವತಿ ಯ ಏವಂ ವೇದ ॥ ತಸ್ಮಾ ಉದ್ಯನ್ಸೂರ್ಯೋ ಹಿಙ್ಕೃಣೋತಿ ಸಂಗವಃ ಪ್ರಸ್ತೌತಿ । ಮಧ್ಯನ್ದಿನ ಉದ್ಗಾಯತ್ಯಪರಾಹ್ಣಃ ಪ್ರತಿಹರತ್ಯಸ್ತಂ ಯನ್ನಿಧನಮ್ ॥ ತಸ್ಮಾ ಅಭ್ರೋಭವನ್ ಹಿಙ್ಕೃಣೋತಿಸ್ತನಯನ್ ಪ್ರಸ್ತೌತಿ । ವಿದ್ಯೋತಮಾನಃ ಪ್ರತಿಹರತಿ ವರ್ಷನ್ನುದ್ಗಾಯತ್ಯುದ್ಗೃಹಣನ್ ನಿಧನಮ್ ॥ ಅತಿಥೀನ್ ಪ್ರತಿ ಪಶ್ಯತಿ ಹಿಙ್ಕೃಣೋತ್ಯಭಿವದತಿ ಪ್ರಸ್ತೌತ್ಯುದಕಂ ಯಾಚತ್ಯುದ್ಗಾಯತಿ ಉಪಹರತಿ ಪ್ರತಿಹರತ್ಯುಚ್ಛಿಷ್ಟಂ ನಿಧನಮ್ ॥ *ಅಥರ್ವ ೯.೬.೧-೯ ॥*
ಅತಿಥಿಗಾಗಿ ಉಷಾ ಹಿಂಕಾರವನ್ನೂ ಸವಿತಾ ಪ್ರಸ್ತಾವ ಭಕ್ತಿಯನ್ನೂ ಬೃಹಸ್ಪತಿಯು

ಶಕ್ತಿಯುತವಾಗಿ ಉದ್ಗೀಥವನ್ನೂ ತ್ವಷ್ಟಾಪುಷ್ಟಿಯುತವಾಗಿ ಪ್ರತಿಹಾರ ಭಕ್ತಿಯನ್ನೂ ಎಲ್ಲರೂ ಒಟ್ಟಾಗಿ ನಿಧನಭಕ್ತಿಯನ್ನೂ ಗಾನಮಾಡುತ್ತಾರೆ. ಈ ತಥ್ಯ ತಿಳಿದವರಿಗೆ ಐಶ್ವರ್ಯ ಸಂತಾನ ಪಶು ಆದಿ ಭೋಗಭಾಗ್ಯಗಳು ಒದಗುತ್ತವೆ. ಅತಿಥಿಗಾಗಿ ಸೂರ್ಯನು ಉದಯವಾಗುವಾಗ ಹಿಂಕಾರವನ್ನೂ ಪೂರ್ವಾಹ್ನದಲ್ಲಿ ಪ್ರಸ್ತಾವವನ್ನೂ ಮಧ್ಯಾಹ್ನದಲ್ಲಿ ಉದ್ಗೀಥವನ್ನೂ ಸಾಯಾಹ್ನದಲ್ಲಿ ಪ್ರತಿಹಾರವನ್ನೂ ಅಸ್ತಂಗತನಾಗುವಾಗ ನಿಧನವನ್ನೂ ಗಾನ ಮಾಡುತ್ತಾರೆ. ಅತಿಥಿಗಾಗಿ ಮೇಘವು ಹಿಂಕಾರವನ್ನೂ ಗುಡುಗು ಪ್ರಸ್ತಾವವನ್ನೂ ಹೊಳೆಯುವ ಮಿಂಚು ಪ್ರತಿಹಾರವನ್ನೂ ಹುಯ್ಯುತ್ತಿರುವ ಮಳೆ ಉದ್ಗೀಥವನ್ನೂ ಮಳೆಯ ಸಮಾಪ್ತಿಯು ನಿಧನ ಭಕ್ತಿಯನ್ನೂ ಗಾನ ಮಾಡುತ್ತವೆ. ಹೀಗೆ ಪ್ರಕೃತಿಯೇ ಸ್ವಭಾವತಃ ಕ್ರಿಯಾಶೀಲವಾಗಿ ಸಾಮ ಗಾನದಲ್ಲೇ ತಲ್ಲೀನವಾಗಿರುವ ಚಿತ್ರವನ್ನು ಶ್ರುತಿ ನಮ್ಮ ಕಣ್ಮುಂದೆ ಭವ್ಯವಾಗಿ ಚಿತ್ರಿಸುತ್ತಿದೆ.

**ಪಂಚಕೃತ್ವಃ ಪ್ರಸ್ತೌತಿ ಪಂಚಕೃತ್ವ ಉದ್ಗಾಯತಿ ಪಂಚಕೃತ್ವಃ ಪ್ರತಿಹರತಿ ಪಂಚಕೃತ್ವ ಉಪದ್ರವತಿ ಪಂಚಕೃತ್ವೋ ನಿಧನಮುಪಯನ್ತಿ ತತ್ ಸ್ತೋಭ ಸಹಸ್ರಂ ಭವತಿ ॥** ಐ. ಆ. ೨. ೩. ೪ ॥ ಪಂಚವಿಧತ್ವ ಧ್ಯಾನವನ್ನು ವಿವರಿಸುವ ಸಂದರ್ಭದಲ್ಲಿ ಇದನ್ನು ಪಠಿಸಲಾಗಿದೆ. ಮಹಾವ್ರತದಲ್ಲಿ ಸಾಮಗಾಯಕರು 'ರಾಜನ'ಸಾಮದಿಂದ ರಹ.೬೬. ಸ್ತುತಿಸುವಾಗ ಪ್ರಸ್ತೋತೃವು ಪ್ರಸ್ತಾವ ಭಕ್ತಿಯನ್ನು ಐದು ಬಾರಿಯೂ, ಉದ್ಗಾತೃ ಉದ್ಗೀಥ ಭಕ್ತಿ ಯನ್ನು ಐದು ಬಾರಿಯೂ ಪ್ರತಿಹರ್ತೃ ಪ್ರತಿಹಾರ ಭಕ್ತಿಯನ್ನು ಐದು ಬಾರಿಯೂ ಇತರ ಋತ್ವಿಜರಿಲ್ಲದುದರಿಂದ ಉದ್ಗಾತೃವೇ ಉಪದ್ರವ ಭಕ್ತಿಯನ್ನು ಐದು ಬಾರಿಯೂ ಈ ಎಲ್ಲಾ ಋತ್ವಿಜರೂ ಒಟ್ಟಿಗೆ ನಿಧನಭಕ್ತಿಯನ್ನು ಐದುಬಾರಿಯೂ ಗಾನ ಮಾಡುತ್ತಾ ಧ್ಯಾನ ಮಾಡ ಬೇಕು. ಈ ಕ್ರಮದಿಂದ ಸ್ತೋಭ ಸಹಸ್ರವನ್ನು ಸಾಧಿಸಿದಂತಾಗುತ್ತದೆ.

**ಹಿಮ್‌ಕಾರ : ಬ್ರಹ್ಮವೈ ಹಿಮ್‌ಕಾರೋ ಬ್ರಹ್ಮೈವ ತದಹರ್ಬ್ರಹ್ಮಣೈವ ತದ್ಬ್ರಹ್ಮಪ್ರತಿಪದ್ಯತೇ ಯ ಏವಂ ವೇದ ॥ .... ಯದೇವ ಹಿಮ್‌ಕಾರೇಣ ಪ್ರತಿಪದ್ಯತಾ .... ಮಾನುಷೀಂ ಚ ॥** ಐ. ಆ. ೧. ೩. ೧ ಖಂಡ ಪೂರ್ತಿಯಾಗಿ ಹಿಮ್‌ಕಾರದ ಮಹಿಮೆಯನ್ನು ತಿಳಿಸುತ್ತಿದೆ. '**ಹಿಮ್‌ಕಾರವು ಪರಬ್ರಹ್ಮ ಸ್ವರೂಪ**'ವೇ ಆಗಿದ್ದು ಈ ಮನ್ತ್ರವನ್ನು ಪಠಿಸುವ ದಿನವೂ ಪರಬ್ರಹ್ಮಸ್ವರೂಪವೆಂದು ಅರಿಯುವವನಿಗೆ ಬ್ರಹ್ಮಪ್ರಾಪ್ತಿಯಾಗುತ್ತದೆ. ಶಸ್ತ್ರಮನ್ತ್ರವನ್ನು ಪಠಿಸುವ ಪ್ರಾರಂಭದಲ್ಲೇ ಉಚ್ಚಾರವಾಗುವ '**ಹಿಮ್**' ಪುಲ್ಲಿಂಗ ಋಕ್ಕುಗಳು ಸ್ತ್ರೀಲಿಂಗ ಇವೆರಡರ ಮಿಥುನದಿಂದ ಸಂತಾನೋತ್ಪತ್ತಿಯೂ ಪಶುಸಂಪತ್ತೂ ಲಭಿಸುವುದು. ಭೂಮಿಯಲ್ಲಿ ಹುದುಗಿರುವ ಚಿನ್ನ ವಜ್ರ ಆದಿ ಅಮೂಲ್ಯ ಖನಿಜ ಸಂಪತ್ತನ್ನು ಗುದ್ದ

ಲಿಯಿಂದ ಅಗೆದು ಪಡೆಯುವಂತೆ. ಶಸ್ತ್ರಮಂತ್ರಗಳ ಪ್ರಾರಂಭದಲ್ಲೇ ಪಠಿಸುವ **ಹಿಮ್‌ಕಾರ** ವೆಂಬ ಗುದ್ದಲಿಯಿಂದ ವೇದಗಳಲ್ಲಿ ಸಾರಭೂತವಾಗಿರುವ ಪರಬ್ರಹ್ಮಸ್ವರೂಪವನ್ನು ತಮ್ಮದಾಗಿಸಿಕೊಳ್ಳುವರು. ಹಿಮ್‌ಕಾರ ಗಾಯಕನು ಹಿಮ್‌ಕಾರ ಗಾನ ಮಾಡುತ್ತಲೇ ತನ್ನ ಬಯಕೆಯನ್ನೆಲ್ಲಾ ಈಡೇರಿಸಿಕೊಳ್ಳುವನು. ಹಿಮ್‌ಕಾರವು ವೇದವಾಕ್ಯಗಳೊಡನೆ ಸೇರಿಯೇ ಪಠಿಸಲ್ಪಡುವಂತಹದು.

ಹಿಮ್, ಹುಮ್, ಹುಮ್ ಆ, ಹುಮ್ ಬಾ ಹಾಗೂ ಹುಮ್ ಭಾ ಈ ಐದೂ 'ಹಿಮ್' ಕಾರದ ವಾಚಕಗಳೇ ಆಗಿವೆ. **ತತ್ರ ಹಿಮ್‌ಕಾರಸ್ತ್ರಿಭಿಃ ಕರ್ತವ್ಯಃ । ಪಂ.ವಿ.ಸೂ. ೨.೧.೧.ಸಾ.ಭಾ. ॥ ಹುಮ್ ೩೩ ॥ ಇತಿಹಿಮ್‌ಕಾರಃ ।** *ಲಾ.ಶ್ರೌ.೩.೧೧.೭ //* ಹುಮ್ ಆ, ಹುಮ್ ಬಾ, ಹುಮ್‌ಭಾ ವಾ - *ಗಾ.ವಿ.ಸೂ.೧.೨೫.//* ಪ್ರತ್ಯೇಕ ಸಾಮಗಾನದ ಪ್ರಾರಂಭ ದಲ್ಲಿ ಹಿಮ್‌ಕಾರವನ್ನು ಉಚ್ಚರಿಸಬೇಕು. **ಸಾಮ್ನೋ ಸಾಮ್ನೋ ಹಿಮ್‌ಕುರ್ಯುಃ ॥** *ಲಾ.ಶ್ರೌ.ಸೂ.೨.೧.೪ //* ಪ್ರತ್ಯೇಕ ಪರ್ಯಾಯದ ಪ್ರಾರಂಭದಲ್ಲೂ ಹಿಮ್‌ಕಾರ ಗಾನದ ವಿಧಾನವಿದೆ. **ಪರ್ಯಾಯಾದಿಷು ಹಿಮ್‌ಕಾರೇಣ ಸ್ತುವೀರನ್ ॥** *ಲಾ.ಶ್ರೌ.ಸೂ.೨.೬.೧೦ //* ಹಿಮ್‌ಕಾರವು ಸಾಮದ ರಸವಾಗಿದ್ದು ಪ್ರಸ್ತಾವ ಭಕ್ತಿಯಲ್ಲಿ ಗತಿಯನ್ನೂ ಓಜಸ್ಸನ್ನೂ ತಂದು ಕೊಡುತ್ತದೆ. ಏಷ ವೈ ಸಾಮ್ನಾಂ ರಸೋ ಯದ್ ಹಿಮ್‌ಕಾರೋ ಯದ್ ಹಿಮ್‌ಕೃತ್ಯ ಪ್ರಸ್ತೌತಿ ರಸೇನೈವೇತಾ ಅಭ್ಯುದ್ಯ ಪ್ರಸ್ತೌತಿ - *ತಾಂ.ಬ್ರಾ. ೬.೮.೭ //* ಸೋಮಯಾಗ ದಲ್ಲಿ ಬಹಿಷ್ಪವಮಾನ ಸ್ತೋತ್ರದ ಪ್ರಾರಂಭದಲ್ಲಿ ಸ್ವತನ್ತ್ರ ಭಕ್ತಿಯಾಗಿ ವಿನಿಯೋಗವಾಗಿದ್ದು ಪ್ರಸ್ತೋತಾ, ಉದ್ಗಾತಾ ಮತ್ತು ಪ್ರತಿಹರ್ತಾ. ಹೀಗೆ ಮೂರು ಜನ ಋತ್ವಿಜರೂ ಗಾನ ಮಾಡುತ್ತಾರೆ. ಹಿಮ್‌ಕಾರವು ಪ್ರತ್ಯೇಕ ಭಕ್ತಿಯೆಂದು ಮಾನ್ಯ ಮಾಡದಿರುವ ಸಂದರ್ಭದಲ್ಲಿ ಪ್ರಸ್ತಾವ ಭಕ್ತಿಯ ಅನ್ತರ್ಗತವಾದದ್ದು ಹಿಮ್‌ಕಾರ ಎಂದಾಗುತ್ತದೆ.

**ಪ್ರಸ್ತಾವಃ :- ಅವಸಾನಂ ಪೂರ್ವಂ ಪ್ರಸ್ತಾವ ಆದ್ಯೋತ್ಪತ್ತಿಷು ॥ ಅವಸಾನಂ ಪೂರ್ವ ವಿರಾಮ ಇತ್ಯರ್ಥಃ ॥** *ಪಂಚವಿಧಸೂತ್ರ. ೧.೧.೪ //* ಪ್ರಸ್ತಾವವೆಂಬ ಪ್ರಥಮ ಭಕ್ತಿಯನ್ನು ಪ್ರಸ್ತೋತೃ ಎಂಬ ಋತ್ವಿಜರು. ಗಾನ ಮಾಡಬೇಕಾದುದು. ಪ್ರಸ್ತಾವಕ್ಕೆ ಪೂರ್ವ ದಲ್ಲಿ ಹಿಮ್‌ಕಾರ. ಪ್ರಶಬ್ದ ಸಾಮಾನ್ಯದಿಂದ ಪ್ರಾಣವೇ ಪ್ರಸ್ತಾವ ಭಕ್ತಿಗೆ ದೇವತೆ - *ಛಾಂ.ಉ. ೨.೧೮ ಖಂಡ.* ಉದಯಿಸಿದ ಸೂರ್ಯನರೂಪವೇ ಪ್ರಸ್ತಾವ, ಮನುಷ್ಯರು, ಆದಿತ್ಯನೆಂಬ ಪ್ರಸ್ತಾವ ಭಕ್ತಿಯಲ್ಲಿ ಅನುಗತರಾಗಿ ಪ್ರಸ್ತಾವಕ್ಕೆ ಭಾಗಿಯಾಗಿರುವುದರಿಂದ ಪ್ರತ್ಯಕ್ಷವಾಗಿ ಯೂ ಪರೋಕ್ಷವಾಗಿಯೂ ಪ್ರಶಂಸಾಕಾಮರಾಗಿರುತ್ತಾರೆ - ಛಾಂ.ಉ.

೨.೯.೩. ಪ್ರಸ್ತೋತಾ ಸಾಮ ಪ್ರಸ್ತೌತಿ ಸ ಯತ್ರ ಪ್ರಸ್ತುಯಾತ್ ತದೇತಾನಿ ಜಪೇತ್ । ಅಸತೋ ಮಾ ಸದ್ಗಮಯ .... ಅಮೃತಂ ಗಮಯ ಇತಿ ॥ ಉಪಾಸಕನಾದ ಪ್ರಸ್ತೋತೃವು - ಅಸತೋ ಮಾ ಸದ್ಗಮಯ .... ಅಮೃತಂ ಗಮಯ - ದೇವತ್ವಕ್ಕೇರಿಸುವ ಅಭ್ಯಾರೋಹ ವೆಂಬ ಈ ಜಪವನ್ನು ಪವಮಾನದ ಮೊದಲನೆಯ ಸಾಮವನ್ನು ಪ್ರಾರಂಭಿಸುವಾಗ ನೆರ ವೇರಿಸಬೇಕು. ಈ ಜಪಕರ್ಮದಿಂದ ಸಾಯುಜ್ಯವು ತಪ್ಪದೆ ದೊರಕುವುದು - ಬೃ.ಉ.೧.೩.೨೮.

ವಿಭಾಗ್ಯ ಸಾಮದಲ್ಲಿ ಪ್ರಥಮ ವಿಭಾಗದಲ್ಲೂ ಪದವಿಭಾಗ್ಯ ಸಾಮದಲ್ಲಿ ಪ್ರಥಮ ಪಾದದಲ್ಲೂ ಸ್ತೋಭ ವಿಭಾಗ್ಯ ಸಾಮದಲ್ಲಿ ಪ್ರಥಮಸ್ತೋಭದಲ್ಲೂ ಪದಸ್ತೋಭವಿಭಾಗ್ಯ ಸಾಮದಲ್ಲಿ ಸ್ತೋಭಸಹಿತ ಪ್ರಥಮಪಾದದಲ್ಲೂ ಪ್ರಸ್ತಾವ ಭಕ್ತಿ ಇರುತ್ತದೆ - *ಪ್ರತಿ.ಸೂ.೧.೧೧.* ಅವಿಭಾಗ್ಯಸಾಮದ ಪ್ರಥಮಪರ್ವದಲ್ಲಿ ಪ್ರಸ್ತಾವ ಭಕ್ತಿ ಇರುತ್ತದೆ ಲಾ.ಶ್ರೌ.ಸೂ. ೬.೧೦.೧. ಪ್ರಥಮ ಪರ್ವದಲ್ಲಿರುವ ಅಕ್ಷರಗಳೆಲ್ಲಾ ಪ್ರಸ್ತಾವ ಭಕ್ತಿಯೇ ಆಗಿರುತ್ತದೆ. ಈ ಅಕ್ಷರ ಸಂಖ್ಯೆ ಸಾಮದಿಂದ ಸಾಮಕ್ಕೆ ಭಿನ್ನವಾಗಿದ್ದು, **'ಯಾಮ'** *ಗ್ರಾ.೧೧೭ ॥* ಸಾಮದಲ್ಲಿನಂತೆ ಒಂದೇ ಅಕ್ಷರದಿಂದ **'ರೈವತ'** ರಹ.೬೨ ॥ ಸಾಮದಲ್ಲಿನ ಮೂವತ್ತಾರು ಅಕ್ಷರದವರೆಗೂ ಇರಬಹುದು. **ಚ್ಯಾವನಸಾಮದಲ್ಲಿ** ಗ್ರಾ.೮೭೨. ಪ್ರಥಮ ಪರ್ವದ ನಂತರ ಬರುವ **ಹಾಉ** ಕಾರದ ಅಂತ್ಯದವರೆಗೂ *ಲಾ.ಶ್ರೌ.ಸೂ..೧೦.೪* **ವಾಮಸಾಮದಲ್ಲಿ** ವಾಕ್ ಶಬ್ದದ ಅಂತ್ಯದವರೆಗೂ *ಲಾ.ಶ್ರೌ.ಸೂ.೬.೧.೮* ಪ್ರಸ್ತಾವಭಕ್ತಿ ಇರುತ್ತದೆ. **'ಮಹಾನಾಮ್ನೀ'** ಮತ್ತು **'ಶಕ್ವರೀ'** ಸಾಮದಲ್ಲಿ ಎರಡು ಪ್ರಸ್ತಾವಗಳಿರುತ್ತವೆ - *ಪಂ.ವಿ.ಸೂ.೧.೧.೨೫,೨೬* ಪ್ರಸ್ತಾವದಲ್ಲಿಯೇ **'ಹಿಮ್'**ಕಾರವು ಅಂತರ್ಭಾವವಾಗಿದೆ ಯೆಂದು ಮಾನ್ಯಮಾಡುವವರ ದೃಷ್ಟಿಯಲ್ಲಿ ಪ್ರಸ್ತಾವವೇ ಪ್ರಥಮ ಭಕ್ತಿಯಾಗಿರುತ್ತದೆ.

**ಓಮ್‌ಕಾರ :** ಪ್ರಸ್ತಾವ ಭಕ್ತಿಯ ನಂತರ 'ಓಮ್‌ಕಾರ' ಭಕ್ತಿಯ ಗಾನವಾಗುತ್ತದೆ. ಛಾಂದೋಗ್ಯೋಪನಿಷತ್ತು. **'ಓಮ್'** ಕಾರವನ್ನು ಸ್ವತಂತ್ರ **'ಭಕ್ತಿ'** ಎಂದು ಗುರುತಿಸಿ ಓಮ್‌ಕಾರವನ್ನೇ ಉದ್ಗೀಥವೆಂದು ತಿಳಿಸುತ್ತಿದೆ. **ಓಮಿತ್ಯೇತದಕ್ಷರಮುದ್ಗೀಥಮುಪಾಸೀತ** - *ಛಾಂ.ಉ.೧.೧.೧ ॥* **ಓಮಿತ್ಯೇತದಕ್ಷರಮುದ್ಗೀಥಮುಪಾಸೀತೋಮಿತಿ ಹ್ಯುದ್ಗಾಯತಿ ....** *ಛಾಂ.ಉ. ೧.೪.೧. ॥* **ಯ ಉದ್ಗೀಥಃ ಸ ಪ್ರಣವೋ ಯಃ ಪ್ರಣವಃ ಸ ಉದ್ಗೀಥ ಇತಿ ....** । *ಛಾಂ.ಉ.೧.೫.೫ ॥* ಹೀಗೆ **'ಓಮ್'** ಅಕ್ಷರವನ್ನು ಉದ್ಗೀಥವೆಂದೇ ತಿಳಿಸುತ್ತಾ ಪ್ರಣವದಿಂದ ಅಭಿನ್ನವೆಂದು ಉದ್ಗೀಥವನ್ನು ಮಾನ್ಯಮಾಡಿ ಛಾಂ.ಉ. ಮತ್ತು

ಲಾ.ಶ್ರೌ.ಸೂ.ಗಳಲ್ಲಿ ಓಮ್‌ಕಾರ ಸಾಮದ ರಸವೆಂದು ಉದ್ಗೀಥಕ್ಕೆ ಮಹತ್ವವನ್ನು ನೀಡಿ ದೇವತ್ವಕ್ಕೇರಿಸಲಾಗಿದೆ. **ಸಾಮ್ನಾ ಉದ್ಗೀಥಾ ರಸಃ ।** *ಛಾಂ. ಉ.೧.೨.೩* / **ರಸೋ ವಾ ಏವ ಸಾಮ್ನಾಂ ಯದೋಂಕಾರಃ ।** *ಲಾ. ಶ್ರೌ. ಸೂ. ೬.೧೦.೧೫* // **ಸರ್ವೇಷಾಮೋಂಕಾರೇಣ ಉದ್ಗೀಥಾದಾನಮ್** - ಲಾ.ಶ್ರೌ.ಸೂ.೬.೧೦.೧೩ **ಆದಿತ್ಯ ಇತಿ ಹೋವಾ ಚ .... ಸೈಷಾದೇವತೋದ್ಗೀಥಮ್** - *ಛಾಂ. ಉ.೧.೧೧.೭* // **ತಸ್ಯರ್ಕ್ ಚ ಸಾಮ ಚ ಗೇಷ್ಣೌ ತಸ್ಮಾದುದ್ಗೀಥಸ್ತಸ್ಮಾತ್ತ್ವೇವೋದ್ಗಾತೈತಸ್ಯ ಹಿ ಗಾತಾ** - *ಛಾಂ. ಉ.೧.೬.೮*, ಓಮ್‌ಕಾರ ಗಾನವನ್ನು ಉದ್ಗಾತೃ ನೆರವೇರಿಸುತ್ತಾರೆ.

ಸಾಮಗಾನದಲ್ಲಿ ಪಂಚಭಕ್ತಿಗಳನ್ನು ಗಣಿಸುವಾಗ ಉದ್ಗೀಥಭಕ್ತಿಗೆ ಮುಂಚೆ ಓಮ್‌ಕಾರ ಗಾನವಾಗುತ್ತದೆ - **ಸರ್ವೇಷಾಮೋಂಕಾರೇಣ ಉದ್ಗೀಥಾದಾನಮ್** *ಲಾ. ಶ್ರೌ. ಸೂ. ೬.೧೦.೧೩* ಓಮ್‌ಕಾರದ ಗಾನಾನಂತರ ಉದ್ಗೀಥ ಭಕ್ತಿಯ ಪ್ರಥಮಾಕ್ಷರವನ್ನು ಲೋಪ ಮಾಡಿ ಗಾನಮಾಡಬೇಕೆಂದೂ ಇದರಿಂದ ಲಯಾತ್ಮಕತೆಯನ್ನು ಕಾಪಾಡಿದಂತಾಗುತ್ತದೆಂದು *ಲಾ. ಶ್ರೌ. ಸೂ. ೬.೧೦.೧೪*ರಲ್ಲಿ ಧನಂಜಯ ತಿಳಿಸಿದರೆ ಪ್ರಥಮ ಅಕ್ಷರ ಲೋಪವಾಗ ಬಾರದೆಂದು *ಲಾ. ಶ್ರೌ. ಸೂ. ೬.೧೦.೧೫*ರಲ್ಲಿ ಶಾಂಡಿಲ್ಯರು ಅಭಿಪ್ರಾಯ ಪಡುತ್ತಾರೆ. ಉದ್ಗೀಥ ಭಕ್ತಿಯಲ್ಲಿ ಸಾಮಗಾನದ ಆರಂಭಿಕ ಅಕ್ಷರ ಸ್ವರವಾಗಿದ್ದರೆ ಆ ಸ್ವರವನ್ನೇ ಓಂಕಾರ ರೂಪದಲ್ಲಿ ಗಾನ ಮಾಡಬೇಕೆಂದೂ, ಸಾಮದ ಆದ್ಯ ಅಕ್ಷರ ವ್ಯಂಜನವಾಗಿದ್ದರೆ ಓಂಕಾರ ವನ್ನು ಪ್ರತ್ಯೇಕವಾಗಿ ಆಗನ್ತುಕ ರೂಪದಲ್ಲಿ ಗಾನಮಾಡಬೇಕೆಂದೂ - *ಲಾ. ಶ್ರೌ. ೬.೧೦.೧೬, ೧೭* ಮತ್ತು *ದ್ರಾ. ಶ್ರೌ. ಸೂ. ೧೮.೩.೨* **ಸ್ವರಾದಿಷು ವಾ ತಮೇವ ಸ್ವರಮೋಙ್ಕಾರೀ ಕುರ್ಯಾದಾಗನ್ತುಮೋಂಕಾರಂವ್ಯಂ ಜನಾದಿಷು** - ತಿಳಿಸಲಾಗಿದೆ.

**ಉದ್ಗೀಥ :-** ಸಾಮವೇದದ ಉದ್ಗಾತೃ ಎಂಬ ಋತ್ವಿಜರು ಗಾನ ಮಾಡುವ ಸಾಮ ಗಾನದ ಎರಡನೆಯ ಭಕ್ತಿಯೇ ಉದ್ಗೀಥ. ಇದು **ಓಮ್** ನಿಂದಲೇ ಪ್ರಾರಂಭವಾಗುವುದ ರಿಂದಲೂ ಉದ್ಗಾತೃ. **ಓಮ್** ಎಂದೇ ಉದ್ಗಾನ ಮಾಡುವುದರಿಂದಲೂ ಋಗ್ವೇದೋಕ್ತ ಪ್ರಣವವೇ ಸಾಮವೇದದಲ್ಲಿ ಉದ್ಗೀಥವೆನಿಸಿದೆ. ಓಮ್ ವೇದ ವಿಹಿತ ಕರ್ಮಪ್ರವೃತ್ತ ವಾಗಿಯೂ ಸಮೃದ್ಧಿಗೆ ಕಾರಣವಾಗಿಯೂ ಅನುಮತಿ ಸೂಚಕವೂ ಆಗಿದೆ. ಓಮ್ ಅಕ್ಷರಾತ್ಮಕವೂ ಉದ್ಗೀಥ ಶಬ್ದವಾಚ್ಯವೂ ಭಗವಂತನ ಅತಿ ಸಮೀಪವಾದ ನಾಮವೂ ಅರ್ಹವಾದ ಪ್ರತೀಕವೂ ಆಗಿ ಬ್ರಹ್ಮೋಪಾಸನೆಯ ಅತಿ ಶ್ರೇಷ್ಠ ಸಾಧನೆಯಾಗಿದೆ. ಇದರಲ್ಲೇ ಸಮಸ್ತ ಭೂತಜಾತಗಳೂ ವೇದಗಳೂ ಎಲ್ಲಾ ವಾಕ್‌ನ ಎಲ್ಲಾ ಶಬ್ದಗಳೂ ಅಂತರ್ಗತವಾಗಿರುವುದರಿಂದ ರಸಗಳಿಗೆಲ್ಲಾ ಶ್ರೇಷ್ಠವಾದ ಸಾಮವೇದದ ರಸವಾಗಿದೆ.

**ಉದ್ಗೀಥಕ್ಕೆ ಅನುಗತದೇವತೆ ಆದಿತ್ಯ ॥** ಉದ್ಗೀಥವನ್ನು ಪ್ರಾಣನೆಂದು ಉಪಾಸನೆ ಮಾಡಿ **ಅಂಗೀರಸರು** ಅಂಗಗಳ ರಸವಾದರೆಂದೂ ಬೃಹಸ್ಪತಿ ವಾಕ್ಪತಿಯಾದರೆಂದೂ ದ್ಯುಲೋಕ ಆದಿತ್ಯ ವಾಕ್ ಅಂತರಿಕ್ಷ ವಾಯು ಪೃಥ್ವಿ ಅಗ್ನಿ ದೃಷ್ಟಿಯಲ್ಲಿ ಉದ್ಗೀಥೋಪಾಸನೆಯನ್ನು ಮಾಡುವ ಕ್ರಮ ಮತ್ತು ಪಡೆಯುವ ಫಲಗಳನ್ನು ತಿಳಿಸಿದೆ - *ಛಾಂ. ಉ. ೧.೧.೧೧.*

ಪ್ರಾತಃ ಕಾಲವೇ ಉದ್ಗೀಥಗಾನಕ್ಕೆ ಸುಸಮಯವಾಗಿದೆ - *ಛಾಂ. ಉ. ೧.೧೨.೪.* ಮಧ್ಯಾಹ್ನಕಾಲದಲ್ಲಿ ಆದಿತ್ಯನಿಗಿರುವ ರೂಪವೇ ಉದ್ಗೀಥವಾಗಿದೆ. ದ್ಯುತಿಮಂತರಾದ ದೇವತೆಗಳು ಅತಿಶಯ ದ್ಯುತಿಮಂತನಾದ ಆದಿತ್ಯನೆಂಬ ಉದ್ಗೀಥ ಭಕ್ತಿಯಲ್ಲಿ ಅನುಗತ ರಾಗಿರುವುದರಿಂದ ಉದ್ಗೀಥಭಕ್ತಿಯ ಭಾಗಿಗಳಾಗಿದ್ದು ಪ್ರಜಾಪತಿಯ ಸಂತಾನ ವರ್ಗದಲ್ಲಿ ಶ್ರೇಷ್ಠರಾಗಿದ್ದಾರೆ - *ಛಾಂ. ಉ. ೨.೯.೫.*

**ಉದ್ಗೀಥಮೇ ತತ್ಪರಮಂ ತು ಬ್ರಹ್ಮ ತಸ್ಮಿಂಸ್ತ್ರಯಂ ಸುಪ್ರತಿಷ್ಠಾಕ್ಷರಂ ಚ ।**
**ಅತ್ರಾನ್ತರಂ ಬ್ರಹ್ಮವಿದೋ ವಿದಿತ್ವಾ ಲೀನಾ ಬ್ರಹ್ಮಣಿ ತತ್ಪರಾ ಯೋನಿಮುಕ್ತಾ ॥**

ಎಂದು *ಶ್ವೇತಾಶ್ವೇತರ ೧.೭ರಲ್ಲೂ* **ಶಬ್ದಾತ್ಮಿಕಾ ಸುವಿಮಲರ್ಗ್ಯಜುಷಾಂ ನಿಧಾನಮುದ್ಗೀಥ ರಮ್ಯ ಪದಪಾಠವತಾಂ ಚ ಸಾಮ್ನಾಮ್ ।** *ದುರ್ಗಾಸಪ್ತಶತಿ ೪.೧೦ರಲ್ಲೂ ಪಠಿತವಾಗಿದ್ದು,* ಶ್ರುತಿಸ್ಮೃತಿ ಪುರಾಣ ಇತಿಹಾಸ ಮಹಾಕಾವ್ಯಗಳಲ್ಲಿ ಉದ್ಗೀಥ ಭಕ್ತಿಯ ಮಹಿಮೆಯನ್ನು ಕೊಂಡಾಡಲಾಗಿದೆ.

ವಿಭಾಗ್ಯ ಸಾಮಗಾನಗಳಲ್ಲಿ ದ್ವಿತೀಯ ವಿಭಾಗವೂ ಪದವಿಭಾಗ್ಯಸಾಮಗಳಲ್ಲಿ ದ್ವಿತೀಯ ಪದವೂ ಸ್ತೋಭವಿಭಾಗ್ಯಸಾಮಗಳಲ್ಲಿ ದ್ವಿತೀಯ ವಿಭಾಗವೂ ಪದಸ್ತೋಭ ವಿಭಾಗ್ಯಸಾಮಗಳಲ್ಲಿ ಸ್ತೋಭಸಹಿತ ದ್ವಿತೀಯ ವಿಭಾಗವೂ ಉದ್ಗೀಥಭಕ್ತಿಯಾಗಿರುತ್ತದೆ - ಪ್ರತಿ.ಸೂ.೧.೧೧. ಪ್ರಸ್ತಾವಭಕ್ತಿಯ ಅಕ್ಷರವು ವಿಭಿನ್ನ ಸಾಮಗಳಲ್ಲಿ ನಿಯತವಾಗಿರುವಂತೆ ಪ್ರತಿಹಾರ ಭಕ್ತಿಯ ಅಕ್ಷರವೂ ನಿಯತವಾಗಿರುವುದರಿಂದ ಇವೆರಡರ ನಡುವೆ ಇರುವ ಪರ್ವಗಳಲ್ಲಿರುವ ಅಕ್ಷರಗಳೆಲ್ಲಾ ಅಕ್ಷರಸಂಖ್ಯೆಯ ನಿಯತ ವಿಧಾನಕ್ಕೊಳಪಡದಿರುವ ಉದ್ಗೀಥ ಭಕ್ತಿಯ ಅನ್ತರ್ಗತವಾಗಿರುತ್ತವೆ. **ತತ್ರ ಪರಿಶೇಷ್ಯಾತ್ ಉದ್ಗೀಥೋಪದ್ರವ ಸಿದ್ಧಿರಿತಿ** - *ಪ್ರತಿ. ಸೂ. ೧.೧. ವರದರಾಜ ಭಾಷ್ಯ ॥*

**ಪ್ರತಿಹಾರ :-** ಈ ಮೂರನೆಯ ಭಕ್ತಿಯನ್ನು ಪ್ರತಿಹರ್ತೃ ಎಂಬ ಋತ್ವಿಜರು ಗಾನ ಮಾಡಬೇಕಾದುದು. **ಉತ್ತಮಂ ಪದಂ ಪ್ರತಿಹಾರ ಸ್ಥಾನಮ್ ॥ ತತ್ರ ಪದಸಂಖ್ಯಾನಾದೇಶೇ ಚತುರಕ್ಷರಯಾದ್ಯಮ್ ನ್ಯಾಯ್ಯಂ ಪ್ರತೀಯಾತ್ ॥ .... ಉತ್ತಮಪಾದಾದೌ ಚತುರಕ್ಷರಾಣಿ ॥**

ಪ್ರತಿಹಾರ ಸೂತ್ರ. ೧.೨,೩ ॥ ಪ್ರತಿಹಾರ ಭಕ್ತಿಯನ್ನು ಅನ್ನದ ದೃಷ್ಟಿಯಿಂದ ಉಪಾಸಿಸಬೇಕು. ಸಮಸ್ತ ಭೂತಗಳೂ ಅನ್ನವನ್ನು ಪಡೆದೇ ಜೀವಿಸುವುದರಿಂದ ಇದರ ಅನುಗತ ದೇವತೆ ಅನ್ನವಾಗಿದೆ - ಛಾಂ.ಉ.೧.೧೧.೯. ಈ ಉಪಾಸನೆಯಿಂದ ಕರ್ಮ ಸಮೃದ್ಧಿಯಾಗುತ್ತದೆ ಹಾಗೂ ಪ್ರಾಣಾದಿ ದೇವತೆಗಳ ಭಾವವನ್ನು ಪಡೆಯಬಹುದು. ಮಧ್ಯಾಹ್ನಾನಂತರ ಅಪರಾಹ್ಣಕ್ಕೆ ಮುಂಚೆ ಇರುವ ಆದಿತ್ಯನ ರೂಪವೇ ಪ್ರತಿಹಾರ. ಗರ್ಭಗಳು. ಆದಿತ್ಯನೆಂಬ ಪ್ರತಿಹಾರ ಭಕ್ತಿಯಲ್ಲಿ ಅನುಗತವಾಗಿದ್ದು ಸಾಮದ ಪ್ರತಿಹಾರಕ್ಕೆ ಭಾಗಿಗಳಾಗಿರುವುದರಿಂದ ಜರಾಯುವಿನಲ್ಲಿ ಆಕೃಷ್ಟವಾಗಿದ್ದು ಕೆಳಗೆ ಬೀಳುವುದಿಲ್ಲ - ಛಾಂ.ಉ. ೨.೯.೭.

ಪ್ರತಿಹಾರ ಎಂದರೆ ಎರಡು ಭಾಗಗಳನ್ನು ಜೋಡಿಸುವ ದ್ವಾರ/ ಬಾಗಿಲು ಎಂದರ್ಥ. ಕೆಲವು ಸಾಮಗಳಲ್ಲಿ ಒಂದಕ್ಕಿಂತ ಹೆಚ್ಚು ಪ್ರತಿಹಾರ ಭಕ್ತಿಗಳು ಕಂಡುಬರುತ್ತವೆ. ವಿಭಾಗ್ಯ ಸಾಮಗಳಲ್ಲಿ ಉಪೋತ್ತಮ ಪದದಲ್ಲಿ ಪ್ರತಿಹಾರಭಕ್ತಿ ಇರುತ್ತದೆ - ಪ್ರತಿ.ಸೂ.೧.೧೨. ನಾಲ್ಕು ಸಮಾನ ವಿಭಾಗಗಳಿರುವ ಸಾಮಗಳಲ್ಲಿ ಪದವಿಭಾಗ ಸಾಮಗಳ ತೃತೀಯ ಪದವೂ ಸ್ತೋಭ ವಿಭಾಗ್ಯ ಸಾಮಗಳಲ್ಲಿ ತೃತೀಯ ಸ್ತೋತ್ರವೂ ಪದಸ್ತೋಭ ವಿಭಾಗ ಸಾಮಗಳಲ್ಲಿ ಸ್ತೋಭ ಸಹಿತ ತೃತೀಯ ಪದವೂ ಪ್ರತಿಹಾರ ಭಕ್ತಿಯಾಗಿರುತ್ತದೆ. **ಉಪೋತ್ತಮಂ ಪ್ರತಿ ಹರ್ತುಃ । ಸ ನ್ಯಾಯ ಆ ಸಪ್ತ ಪದಾಭ್ಯಃ ।** ಪ್ರ.ಸೂ. ೧.೧೨,೧೩ ॥ ಪ್ರಕಾರ ನಾಲ್ಕು ಪಾದಗಳ ಋಕ್‌ನಲ್ಲಿ, ತೃತೀಯ ಪಾದವೂ ಐದು ಪಾದಗಳ ಋಕ್‌ನಲ್ಲಿ, ಚತುರ್ಥಪಾದವೂ ಆರು ಪಾದಗಳ ಋಕ್‌ನಲ್ಲಿ, ಪಂಚಮ ಪಾದವೂ ಏಳು ಪಾದಗಳ ಋಕ್‌ನಲ್ಲಿ, ಆರನೆಯ ಪಾದವೂ ಅಂದರೆ ಅಂತಿಮಪಾದದ ಹಿಂದಿನ ಪಾದವು ಪ್ರತಿಹಾರ ಭಕ್ತಿಯಲ್ಲಿರುತ್ತದೆ - ಲಾ.ಶ್ರೌ.ಸೂ. ೭.೫.೭೧ ॥ ಪ್ರತಿಹಾರ ಭಕ್ತಿಯು ಸರ್ವತ್ರ ತೃತೀಯ ಪಾದದಲ್ಲೇ ಇರುತ್ತದೆಂಬ ಅಭಿಪ್ರಾಯದ ಪಕ್ಷದಲ್ಲಿ ಉದ್ಗಾತೃವೇ ಉಳಿದ ಪಾದಗಳ ಗಾನ ಮಾಡುತ್ತಾರೆ - ಲಾ.ಶ್ರೌ.ಸೂ.೭.೫.೨೦॥

ವಿಷಮ ಭಕ್ತಿಸಾಮಗಳಲ್ಲಿ ಋಕ್‌ನ ಅಂತಿಮಪಾದದ ಚತುರಕ್ಷರಗಳಲ್ಲೇ ಪ್ರತಿಹಾರ ಭಕ್ತಿ ಎಂದು ಪ್ರತಿ.ಸೂ.೧.೨.೩, ಲಾ.ಶ್ರೌ.ಸೂ.೬.೧೦.೨೨,೨೩ ತಿಳಿಸುತ್ತವೆ. **ಸಂಖ್ಯಾ ವೃದ್ಧಿಹ್ರಾಸೌ ಚ** ಪ್ರತಿ.ಸೂ. ೧.೪ ॥ ಅಪವಾದ ರೂಪವಾಗಿ ಈ ಅಕ್ಷರಗಳು ಹೆಚ್ಚು ಕಡಿಮೆ ಇರುತ್ತವೆ - ಅಂದರೆ ವಿಭಿನ್ನ ಸಂಖ್ಯೆಯ ಅಕ್ಷರಗಳುಳ್ಳ ಪರ್ವಗಳು ಪ್ರತಿಹಾರವಾಗಬಹುದಾಗಿವೆ. ಇದಕ್ಕೆ ಒಂದರಿಂದ ಹದಿನೇಳು ಅಕ್ಷರಗಳವರೆಗೂ ಉದಾಹರಣೆಗಳಿವೆ. ಕೆಲವು ಸಾಮಗಳಲ್ಲಿ ಋಕ್‌ನ ತೃತೀಯ ಪಾದದ ಅನ್ತ್ಯ ಹಾಗೂ ಚತುರ್ಥ ಪಾದದ ಪ್ರಾರಂಭ ಎರಡರಲ್ಲೂ ಕೆಲವು ಸಾಮಗಳಲ್ಲಿ ಋಕ್‌ನ ಚತುರ್ಥಪಾದದ ಮಧ್ಯದಲ್ಲೂ ಕೆಲವು ಸಾಮಗಳ ಅಭ್ಯಾಸಪದಗಳಲ್ಲೂ ಕೆಲವು ಸಾಮಗಳಲ್ಲಿ ಅಭ್ಯಾಸಪದಗಳಿಗಿಂತ

ಮೊದಲೂ ಪ್ರತಿಹಾರ ಭಕ್ತಿ ಇರುತ್ತವೆ. ಕೆಲವು ಸಾಮಗಳಲ್ಲಿ ಒಂದಕ್ಕಿಂತ ಹೆಚ್ಚು ಪ್ರತಿಹಾರಭಕ್ತಿಗಳಿದ್ದರೆ ಕೆಲವು ಸಾಮಗಳಲ್ಲಿ ಪ್ರತಿಹಾರ ಭಕ್ತಿಯೇ ಇರುವುದಿಲ್ಲ. ಇವುಗಳ ಉದಾಹರಣ ಸಹಿತ ವಿವೇಚನೆಯನ್ನು ಪ್ರ.ಸೂ. ಹಾಗೂ ಲಾ.ಶ್ರೌ.ಸೂ.ಗಳಲ್ಲಿ ನೋಡಬಹುದು.

**ಉಪದ್ರವ :-** ಈ ನಾಲ್ಕನೆಯದಾದ ಭಕ್ತಿಯನ್ನು ಪ್ರಸ್ತೋತೃ ಗಾನಮಾಡಬೇಕೆಂದು ಪಂಚವಿಧಸೂತ್ರದಲ್ಲಿ ಸೂಚಿಸಿದ್ದರೂ - ದ್ರಾ.ಶ್ರೌ.ಸೂ. ೧೬೮೬ರ ವಿವರಣೆಯಲ್ಲಿ - **ಉಪ ದ್ರವಸ್ತು ಉದ್ಗಾತುರೇವ ॥ ಉದ್ಗಾತೈವ ಕುರ್ಯಾದನಾದೇಶೇ ಇತಿ ವಚನಾತ್** ಎಂದಿರುವುದ ರಿಂದ ಉದ್ಗಾತೃವೇ ಈ ಉಪದ್ರವ ಭಕ್ತಿಯನ್ನು ಗಾನ ಮಾಡುತ್ತಾರೆ. ಅಪರಾಹ್ಣಾನಂತರ ಅಸ್ತಮಾನ ಕಾಲದಲ್ಲಿ ಆದಿತ್ಯನು ದಿಗಂತದ ಕಡೆಗೆ ಹೋಗುವುದಕ್ಕೆ, ಉಪದ್ರವಣ ಮಾಡುವುದಕ್ಕೆ ಅಂದರೆ ಅಸ್ತಮಯಕ್ಕೆ ಮುಂಚೆ ಇರುವ ಆದಿತ್ಯನ ರೂಪವೇ **'ಉಪ ದ್ರವ'** - ಆರಣ್ಯ ಪಶುಗಳು ಆದಿತ್ಯನೆಂಬ **'ಉಪದ್ರವ'** ಭಕ್ತಿಯಲ್ಲಿ ಅನುಗತವಾಗಿದ್ದು ಸಾಮ ದ ಉಪದ್ರವ ಭಕ್ತಿಗೆ ಭಾಗಿಗಳಾಗಿರುವುದರಿಂದ ಮನುಷ್ಯನನ್ನು ನೋಡಿದಾಗ ಅರಣ್ಯವನ್ನು ಭಯಶೂನ್ಯ - ಉಪದ್ರವ ರಹಿತ ಪ್ರದೇಶವೆಂದರಿತು ಅರಣ್ಯದ ಕಡೆಗೆ ಓಡುತ್ತವೆ - *ಛಾಂ. ಉ. ೨.೯.೭.*

ವಿಭಾಗ್ಯಸಾಮಗಳಲ್ಲಿ ಚತುರ್ಥ ವಿಭಾಗವೂ ಪದವಿಭಾಗ್ಯಸಾಮಗಳಲ್ಲಿ ಚತುರ್ಥ ಪರ್ವ ಅಥವಾ ಪಾದವೂ ಸ್ತೋಭವಿಭಾಗ್ಯ ಸಾಮದಲ್ಲಿ ಚತುರ್ಥ ಸ್ತೋಭವೂ ಪದಸ್ತೋಭ ವಿಭಾಗ್ಯಸಾಮದಲ್ಲಿ ಸ್ತೋಭ ಸಹಿತ ಚತುರ್ಥಪಾದವೂ ಉಪದ್ರವ ಭಕ್ತಿಯಾಗಿರುತ್ತದೆ. ಪ್ರತಿ.ಸೂ.೧.೧೧ ಗಾಯತ್ರೀ ಛನ್ದಸ್ಸಿನ ಸಾಮಗಳಲ್ಲಿ ಪ್ರಥಮಪಾದ ಪ್ರಸ್ತಾವ, ದ್ವಿತೀಯ ಪಾದ ಉದ್ಗೀಥ, ತೃತೀಯ ಪಾದ ಪ್ರತಿಹಾರ, ಅಂತಿಮ ಸ್ತೋಭ ಉಪದ್ರವ ಭಕ್ತಿ ಎಂದು ಮಾನ್ಯ ಮಾಡಲಾಗಿದೆ. *ಉದಾ : ಸ್ವಾಶಿರಾಮರ್ಕ ಆರ.೩೦ ಅಗ್ನೇರರ್ಕ ಆರ.೩೪, ಪ್ರತಿ.ಸೂ.೧.೧೫* ಈ ಋಕ್ಕಿನ ತೃತೀಯ ಪಾದದಲ್ಲಿ ಪ್ರತಿಹಾರ ಭಕ್ತಿ ಇವೆ. ನಂತರದ
೧ ೨ ೨೦
**ಹಾಹೋವಾ.... ಏ ॥** ಈ ಸ್ತೋಭಗಳಲ್ಲಿ ಉಪದ್ರವ ಭಕ್ತಿಯ ಗಾನವಾಗುತ್ತದೆ. ತೃತೀಯ ಪಾದದನಂತರ ಸ್ತೋಭಗಳಿಲ್ಲದ ಸಾಮಗಳಲ್ಲಿ ತೃತೀಯ ಪಾದವು ಎರಡಾಗಿ ವಿಭಕ್ತ ಗೊಂಡು ಪ್ರಥಮ ಭಾಗಪ್ರತಿಹಾರವೂ ದ್ವಿತೀಯ ಭಾಗವು ಉಪದ್ರವವೂ ಆಗುತ್ತವೆ. **ಋಕ್ ಸಾಮೇ ದ್ವೈಧಂ ಬಹಿರ್ನಿಧನೇ** *ಪ್ರ.ತಿ.ಸೂ. ೧.೧೬* ॥ ಉದಾ : ೫೮೨ನೆಯ ಋಕ್ ಸಸು ನ್ವೇಯೋ ವಸೂನಾಂ ಋಕ್ ಮೇಲೆ ಗಾನ ಮಾಡುವ **'ದೀರ್ಘ'** ಸಾಮದಲ್ಲಿ ಗ್ರಾ.೧೧೮೫

೧೦ ೦ ೨ ೨ ೩ ೨೦೧ ೨ ೪
ತೃತೀಯ ಪಾದವು **ಸೋಮೋಯಸ್ತೂ೩ಹಾಉ** । ಮತ್ತು **ಕ್ಷಿತೀನಾಮ್** । **ಔ೩ಹೋವಾ** ಎಂಬೆರಡು ಭಾಗವಾಗಿ ವಿಭಕ್ತಗೊಂಡು ಮೊದಲನೆಯದು ಪ್ರತಿಹಾರ ಭಕ್ತಿಯಾಗಿಯೂ ಎರಡನೆಯದು ಉಪದ್ರವ ಭಕ್ತಿಯಾಗಿಯೂ ಆಗಿದೆ. ಈ ಸಾಮದಲ್ಲಿ 'ಇಡಾ' ನಿಧನ ವಾಗಿದೆ - **ತ್ರೈಧಮನ್ತರ್ನಿಧನೇ** । *ಪ್ರತಿ.ಸೂ. ೧.೧೮* ॥ ಅಂತರ್ನಿಧನವಿರುವ ಗಾಯತ್ರೀ ಛನ್ದಸ್ಸಿನ ವಿಭಾಗ್ಯ ಸಾಮದಲ್ಲಿ ಪ್ರತಿಹಾರ ಉಪದ್ರವ ಹಾಗೂ ನಿಧನ ಭಕ್ತಿಗಳು, ತೃತೀಯ ಪಾದದಲ್ಲೇ ಇರುತ್ತವೆ. ಈ ಸಂದರ್ಭದಲ್ಲಿ ತೃತೀಯ ಪಾದವು ಮೂರು ಭಾಗವಾಗಿ ಪ್ರಥಮದ್ದು ಪ್ರತಿಹಾರ ದ್ವಿತೀಯದ್ದು ಉಪದ್ರವ ತೃತೀಯದ್ದು ನಿಧನ ಭಕ್ತಿಯಾಗಿ ರುತ್ತದೆ, ಉದಾ : **ಗೋಷಾತಾ ಯಸ್ಯತೇ ಗಿರಃ** । *ಋ.೩೪* / **ಗೌರಾಂಗಿರಸ ಸಾಮವ** ಗ್ರಾ.೫೪ ತೃತೀಯ ಪಾದ

೧೦ ೨೦೦ ೧ ೧ ೩ ೫೦ ೦
ವಾಗಿದ್ದು - ಗ್ರಾ.೫೪. **ಗೋಷಾತಾಯಾ೨೩ ॥ ಸ್ಯಾ೨ತಾ೨೩೪ಔಹೋವಾ ॥**
೨ ೩ ೫
**ಉಪಗೀ೨೩೪ರಾಃ** ॥ ಎಂದು ವಿಭಕ್ತವಾಗಿದ್ದು ಪ್ರಥಮ ಭಾಗ ಪ್ರತಿಹಾರ, ದ್ವಿತೀಯ ಭಾಗ ಉಪದ್ರವ, ತೃತೀಯ ಭಾಗ ನಿಧನಭಕ್ತಿಯಾಗಿರುತ್ತದೆ - *ಪ್ರ.ಸೂ.೧.೧೯* ॥

ಅವಿಭಾಗ್ಯ ಸಾಮಗಳಲ್ಲಿ ಪ್ರತಿಹಾರ ಮತ್ತು ನಿಧನ ಭಕ್ತಿಗಳ ಅಕ್ಷರ ನಿಯತವಾಗಿದ್ದು ಸಾಮಗಾನದ ಪ್ರತಿಹಾರ ಭಕ್ತಿ ನಂತರ ನಿಧನ ಭಕ್ತಿಯ ಪೂರ್ವದ ಪರ್ವಗಳೂ ಅವುಗಳಲ್ಲಿ ರುವ ಅಕ್ಷರಗಳೂ ಉಪದ್ರವ ಭಕ್ತಿಗಳ ಅನ್ತರ್ಗತವಾಗಿರುತ್ತವೆ. ಇವುಗಳ ಗಾನವನ್ನು ಉದ್ಗಾತೃ ಮಾಡುತ್ತಾರೆ.

**ನಿಧನ :- ನಿಧನಂ ನಾಮ .... ಸಾಮ್ನಃ ಅನ್ತ್ಯೋ ಭಾಗಃ । ಸರ್ವತ್ರ ಸಾಮ್ನಾಂ ಚತುರ್ವಿಧಂ ನಿಧನಮ್ ಸ್ವರೋ ನಿಧನಮಿಡಾ ವಾಗಿತಿ । ತದೇತದೇವ ಅನ್ತೇ ನಿಧನಮನ್ತರ್ನಿಧನಮಿತಿ ದ್ವೇಧಾ ॥** ಪಂಚಭಕ್ತಿಯ ಅಥವಾ ಸಪ್ತಭಕ್ತಿಯ ಸಾಮಗಳಲ್ಲಿನ ಅನ್ತಿಮ ಭಾಗವು ಒಂದು ಪದ ಅಥವಾ ಒಂದೇ ಅಕ್ಷರವಾಗಿದ್ದರೂ ನಿಧನ ಭಕ್ತಿ ಎನಿಸಿಕೊಳ್ಳುತ್ತದೆ. ಇವು **ಸಾಮಾನ್ತಿಕ ನಿಧನ ಅನ್ತರ್ನಿಧನ** ಎಂದು ಎರಡುಬಗೆ. ಇವುಗಳಲ್ಲಿರುವ ಒಳ ಭೇದಗಳನ್ನು ಉದಾಹರಣೆ ಸಹಿತ ಮುಂದಿನ ಪುಟದ ಪದಕದಲ್ಲಿ ನಿರೂಪಿಸಲಾಗಿದೆ.

**ಸಾಮಾನ್ತ್ಯೇನ ನಿಧನೇನ ಸದೃಶಸ್ವರಂ ಯತ್ ತತ್ ಸಾಮಮಧ್ಯೇಽಪಿ ಗೀಯತೇ ।** *ಪಂ.ವಿ.ಸೂ. ೨.೬.೨* ॥ **....ಸುವಃ ಜ್ಯೋತಿಃ ಯಶೋ ಬೃಹತ್ ಸತ್ಯಮೋಜಃ ಯ ಏತೇ ವಾಗಾದಯ ಉಪಾಯಾಃ ಉಕ್ತ ಲಕ್ಷಣಾಃ ತೇಭ್ಯೋಽನನ್ತರಂ ಯದಾರ್ಚಿಕಂ ನಿಗದ ವರ್ತ್ತಿಂ ನಿಗದೇನ ಯಥರ್ಚಗೀತ್ಯಾ ವರ್ತತೇ ತದಪಿ ಅನಾದೇಶೇ ಪೂರ್ವೈಃ ಸಹ ನಿಧನತ್ವೇನ**

**ಗ್ರಾಹ್ಯಮಿತ್ಯರ್ಥಃ ॥** *ಪ್ರತಿ.ಸೂ. ಪಂಚಮಃ ಖಂಡಃ, ದೇ.ಬ್ರಾ. ಪ್ರಥಮ ಖಂಡಃ ॥* **....ನಿಧನ ಸಾಮಾನ್ಯಾದನ್ತಃ ಸಾಮಿಕಾನಿ ನಿಧನಾನಿ ಸಂಪ್ರಸಾರಯನ್ತಿ ॥....ಸಮ್ಯಕ್ ಪ್ರಕಾರೇ ವಿಸ್ತಾರಯನ್ತಿ । ನಾನಾ ಸ್ವರೇಷು ವಿಸ್ತರಣಂ ಸಂಪ್ರಸಾರಣಮ್ .... ॥ ಸಂ.ಉ.ಬ್ರಾ. ೩.೧ ॥**

ಸಾಮಾನ್ತಿಕ ನಿಧನ - ಹೆಸರೇ ಸೂಚಿಸುವಂತೆ ಸಾಮಗಾನದ ಉಪಸಂಹಾರವಾಗುವ ಅನ್ತಿಮ ಭಾಗವೇ ಆಗಿದೆ ಅದು ಒಂದು ಪಾದ ಅಥವಾ ಒಂದು ಪದ ಅಥವಾ ಒಂದು ಅಕ್ಷರವಾಗಿದ್ದರೂ ಸಾಮಾನ್ತಿಕ ನಿಧನವೆನಿಸುತ್ತದೆ. **ಅನ್ತರ್ನಿಧನಃ** ಇದನ್ನು **ಅನ್ತಃ ಸಾಮಿಕ** ನಿಧನವೆಂದೂ ಗುರುತಿಸಲಾಗುತ್ತವೆ. *ಪಂ.ವಿ.ಸೂ.೨.೬.೧.* ನಿಧನಪರ್ವ **ಸಾಮಾನ್ಯಮ್** ಎಂಬ ಲಕ್ಷಣವಿಲ್ಲವಾಗಿ ನಿಧನವೆನಿಸಿಕೊಳ್ಳದಿದ್ದರೂ ನಿಧನ ಸಾಮ್ಯವಿರುವುದರಿಂದಲೂ ಗಾನದ ಮಧ್ಯೆ ಬರುವುದರಿಂದಲೂ ಅನ್ಯಭಕ್ತಿಗಳೊಂದಿಗೆ ಸೇರಿ ಗಾನವಾಗುವುದರಿಂದಲೂ ಅನ್ತರ್ನಿಧನವೆನಿಸಿಕೊಂಡು ಮೂರು ಬಗೆಯಾಗಿದೆ.

ಇಹ, ಇಡಾ, ಅಥ ಇವುಗಳ ಅನ್ವದಲ್ಲಿ ವಾಕ್ ಶಬ್ದವಿದ್ದು ಪೂರ್ವಭಕ್ತಿಯ ಅಂಗವಾಗಿಲ್ಲದಿದ್ದರೆ, ಸ್ತೋಭಾನಂತರ ವೃದ್ಧ ಆಕಾರ/ ಸ್ವರಿತ/ ವೃದ್ಧ ಋಗಕ್ಷರವಿದ್ದರೆ ಅನ್ತರ್ನಿಧನವಾಗಿರುತ್ತದೆ. **ಸಾಮಾನ್ಯೇನ ನಿಧನೇನ ಸದೃಶಂ ಸ್ವರಂ ಯತ್ ಯತ್, ಸಾಮಮಧ್ಯೇಪಿ ಗೀಯತೇ ।** *ಪಂ.ವಿ.ಸೂ. ೨.೬.೨ ॥* ವಾಸ್ತವಿಕ ನಿಧನದ ನಮೂನೆಯನ್ನು ಹೊಂದಿರುವ ಸಾಮಗಾನದ ಮಧ್ಯಭಾಗವೂ ಅನ್ತರ್ನಿಧನವಾಗಿರುತ್ತದೆ. ಸಾ.ಋ.೧ ಅಗ್ನ ಆಯಾಹಿ ಋಕ್‌ನಿಂದ ಉದಯವಾಗಿರುವ ಪರ್ಕ ಗ್ರಾಮ ೧ ಸಾಮದ ಅನ್ತಿಮ ಪರ್ವ **'ಹೀಷೀ'** ಸ್ವರದಂತಹದೇ ಸ್ವರವು ಸಾಮಗಾನದ ಮಧ್ಯದಲ್ಲಿ ಬಂದಿದ್ದರೆ **'ದ್ವ್ಯಕ್ಷರ ಹೀಷೀ'** ಅನ್ತರ್ನಿಧನವೆನಿಸುತ್ತದೆ. ಅರಣ್ಯಗಾನದ ಸಾಮಗಾನಗಳ ಮಧ್ಯೆ ಗಾನವಾಗುವ **ಸುವಃ ಜ್ಯೋತಿ ಯಶೋ ಬೃಹತ್ ಸತ್ಯಮೋಜಃ** ಇತ್ಯಾದಿ ದೇವತಾ ಪ್ರತಿಪಾದಕ ಶಬ್ದಗಳು ಋಕ್‌ನ ಭಾಗವಲ್ಲದಿದ್ದರೂ ಅನ್ತಃಸಾಮಿಕ ನಿಧನವಾಗಿರುತ್ತವೆ. ಋಗಕ್ಷರಗಳಿಗೆ ಹೊಂದಿಕೊಂಡೇ ಅನ್ತಃಸಾಮಿಕ ನಿಧನಗಳಿರುವುದರಿಂದ ಋಗಕ್ಷರ ಗಾನವೇ ಇಲ್ಲದಾಗ ಇಹ ಅಥ ಇಡಾ ಅನ್ತರ್ನಿಧನವೆನಿಸಿಕೊಳ್ಳದೆ ಕೇವಲ ಸ್ತೋಭ ಮಾತ್ರವಾಗಿಯೇ ಇರುತ್ತವೆ.

**ಛನ್ನ ನಿಧನ :** ಗ್ರಾಮಗೇಯ ಅರಣ್ಯೇಗೇಯ ಗಾನಗಳಲ್ಲಿರುವ ನಿಧನಗಳು. ಮೂಲನಿಧನವೆಂದೂ ಇವು ಅಪೌರುಷೇಯವೆಂದೂ ಪರಿಗಣಿಸಲಾಗಿದ್ದು, ಇದರ ಖಚಿತ ಜ್ಞಾನವಿದ್ದರೆ ಮಾತ್ರ ವಷಟ್‌ಕಾರ ನಿಧನಾದಿಗಳನ್ನು ಗಾನಮಾಡಲು ಸಾಧ್ಯವೆಂದು ತಿಳಿಯಲಾಗಿದೆ. ಛನ್ನ ನಿಧನವು ಮೂಲ ನಿಧನದ ವಿಕಾರವೆನಿಸಿಕೊಳ್ಳುತ್ತದೆ. ಇವು ಪ್ರಕೃತಿ ಗಾನಗಳ ನಿಧನಗಳಿಂದ ಬೇರೆಯಾಗಿದ್ದು ಯಜ್ಞದ ಪ್ರಯೋಗಕಾಲದಲ್ಲಿ ಮಾತ್ರ ಗಾನಮಾಡಬೇಕಾದವುಗಳಾಗಿರುತ್ತವೆ. ಪ್ರತಿ.ಸೂ.೧೫.೨ರಂತೆ ಪ್ರಕೃತಿಗಾನದ ನಿಧನಗಳು ಛನ್ನಿಧನಗಳಾಗಿ

ರೂಪುಗೊಳ್ಳುತ್ತವೆ. ಇವುಗಳ ಅಧ್ಯಯನ ಅಧ್ಯಾಪನ ಕ್ರಮ ಪರಂಪರೆಯಾಗಿ ಇರುವುದಿಲ್ಲ. ಅಧ್ಯಯನಾನಂತರ ಋತ್ವಿಜರು ಕೈಗೊಳ್ಳಬಹುದಾದ ವಿಶೇಷ ಪ್ರಯೋಗ ಕರ್ಮಕ್ಷೇತ್ರದ ಅನುಭವ ಪಡೆಯುವಾಗ ತಮ್ಮ ಕಾಮನೆಗಳಿಗನುಗುಣವಾಗಿ ಗಾನಮಾಡುವ ಜ್ಞಾನ ಸಂಪಾದಿಸಿಕೊಳ್ಳುತ್ತಾರೆ ಎಂಬುದಕ್ಕೆ ಈ ಉದಾಹರಣೆಗಳನ್ನು ಗಮನಿಸಬಹುದು.

ಮಹಾಭಾರತದಲ್ಲಿ - ದ್ಯೂತಾನಂತರ ಪಾಂಡವರು ವಲ್ಕಲಧಾರಿಗಳಾಗಿ ವನವಾಸಕ್ಕಾಗಿ ಹಸ್ತಿನಾಪುರವನ್ನು ಬಿಡುವಾಗ ಗುರುಗಳಾದ ಧೌಮ್ಯರು ವ್ಯಥೆಗೊಂಡು ರಾಕ್ಷೋಘ್ನ ಸಾಮಗಳನ್ನೂ ಪಠಿಸುತ್ತಿದ್ದರು.

ಮನ ಇನ್ದ್ರಾ ೨೬೦ ಋಕ್ಕಿನ ಆಂಜಿಗಸ್ಯ ಸ್ವಪಸಃ ಗ್ರಾ. ೪೪೯ ಸಾಮದಲ್ಲಿನ ನಿಧನವನ್ನು ತಲೆಯ ಮೇಲೆ ಬಹುಭಾರ ಹೊತ್ತುಕೊಂಡು ಹೋಗುವವನು ಹೊರಡಿಸುವ ಆಕ್ರಾನ್ತಸ್ವರದಂತೆ ಉಚ್ಚರಿಸಬೇಕು. ಐನ್ದ್ರಪೃಕ್ಷು ೨೩೧. ಋಕ್ಕಿನ **ಅಭೀಪಾದಸ್ಯ ಔಂದಲಸ್ಯ ಸಾಮ ೩೭೫ರ ಊಽ೩ಳಪಾ ॥** ನಿಧನವನ್ನು - ಅರಳಿಯ ಹಣ್ಣು ನೀರಿನಲ್ಲಿ ಬಿದ್ದಾಗ, ನೀರಿನೊಳಕ್ಕೆ ನೀರನ್ನು ಹಾಕುವಾಗ ಉದಯವಾಗುವ ಧ್ವನಿಯಂತೆ - ಗಾನಮಾಡಬೇಕು. **ಅಭಿತ್ಯಂ ಮೇಷಂ ಋ. ೩೭೬ರ ಜಾಗತಜ್ ಸೋಮಸಾಮದ ಊಽ೨೩ಳಪೌ ॥** ನಿಧನವನ್ನು - ಪಾದಗಳಲ್ಲಿ ನೂಪುರವನ್ನು ಧರಿಸಿ ಹೆಜ್ಜೆಯನ್ನಿಡುವಾಗ ಉದಯವಾಗುವ ಧ್ವನಿಯಂತೆ ಗಾನಮಾಡಬೇಕು. ಪ್ರತಿ.ಸೂ. ಖಂಡ ೧೫.

ನಿಧನಭಕ್ತಿಯು ಸಾಮಗಾನದ ಅಂತಿಮ ಭಾಗವಾಗಿರುವುದರಿಂದ ಸಾಮಗಾನದಲ್ಲಿ ನಿಯುಕ್ತರಾಗಿರುವ ನಾಲ್ಕು ಋತ್ವಿಜರೂ ಒಟ್ಟಿಗೆ ಸಾಮೂಹಿಕವಾಗಿ ಗಾನ ಮಾಡಬೇಕಾದುದಾಗಿದೆ. ಅಸ್ತಮಿಸುತ್ತಲೇ ಆದಿತ್ಯನಿಗಿರುವ ರೂಪವೇ ಸಾಮಗಾನದ ನಿಧನಭಕ್ತಿ. ಪಿತೃಗಳು ಈ ನಿಧನಭಕ್ತಿಯಲ್ಲಿ ಅನುಗತರಾಗಿದ್ದು ಸಾಮಗಾನದ ನಿಧನಭಕ್ತಿಗೆ ಭಾಗಿಗಳಾಗಿರುವುದರಿಂದ ಪಿತೃಗಳಿಗೆ ದರ್ಭೆಯ ಮೇಲೆ ಸ್ಥಾನವನ್ನು ನೀಡಿ ಕೈಂಕರ್ಯಗಳನ್ನೆಸಗುತ್ತಾರೆ. ಹೀಗೆ ಸಪ್ತವಿಧಸಾಮವನ್ನು ಉಪಾಸನೆ ಮಾಡಿದ ಸಾಧಕನು ಆದಿತ್ಯನ ಸ್ವರೂಪವನ್ನು ಪಡೆಯುತ್ತಾನೆ - ಛಾಂ. ಉ. ೨.೯.೮.

ಈ ನಿಧನದ ವಿಶಿಷ್ಟತೆಗಳನ್ನನುಸರಿಸಿ ಹೆಸರಿಸಿರುವ ಹದಿನಾಲ್ಕು ಸಾಮಗಳು ಗ್ರಾಮಗಾನದಲ್ಲೂ ಒಂಬತ್ತು ಸಾಮಗಳು ಅರಣ್ಯಗಾನದಲ್ಲೂ ನಲವತ್ತೊಂದು ಸಾಮಗಳು ಊಹಗಾನದಲ್ಲೂ ಹದಿಮೂರು ಸಾಮಗಳು ರಹಸ್ಯ ಗಾನದಲ್ಲೂ ರಾರಾಜಿಸುತ್ತಿವೆ. ಸಾಧಕನ ಕಾಮನೆಗಳನ್ನನುಸರಿಸಿ ಬ್ರಾಹ್ಮಣಗಳಲ್ಲೂ ಸೂತ್ರಗ್ರಂಥಗಳಲ್ಲೂ ಅನೇಕ ಬಗೆಯ ನಿಧನಗಳನ್ನೂ ಉಪಯೋಗಿಸುವ ಕ್ರಮಗಳನ್ನೂ ತಿಳಿಸಿದ್ದಾರೆ.


ಸಾಮಾನ್ತಿಕ ನಿಧನ
ಸ್ವರ
ನಿಧನ
ಇಡಾ
ವಾಕ್
ಹಾಇಕಾರಸ್ವಾರ
ವಾಮದೇವ್ಯಮ್
ಗ್ರಾ. ೩೦೬
ಪದಾನುಸ್ವಾರ
ಔಶನಮ್
ಗ್ರಾ. ೯
ಪದ ನಿಧನ
ಯೌಧಾಜಯಂ
ಗ್ರಾ.೯೫೩
ಬಹಿರ್ನಿಧನ
ಆಮಹೀಯವಮ್
ಗ್ರಾ.೩೭೬
ಯಜ್ಞಾ ಯಜ್ಞೀಯಮ್
ಗ್ರಾ.೫೯
ಇಡಾ
ಕಾಶೀತಮ್
ಗ್ರಾ. ೩೨೪
ಡಾ
ಬೃಹದ್ಭಾರದ್ವಾಜಮ್
ಗ್ರಾ. ೫
ಅನ್ತನಿರ್ಧನ
ಇಹ - ರೈವತಮ್ - ಆರ. ೭೨ ॥
ಇಡಾ ಪಾರ್ಥುರಶ್ಮಮ್ ಆರ. ೧೨೯
ಅಥಾ - ರಹ. ೧೩,೯೮
ನಿಧನಸ್ವರಗೀತಂ
ದಾಶಸ್ಪತ್ಯಂ ಗ್ರಾ.೧೦೪೩
ದ್ವ್ಯಕ್ಷರ ಹೀಷೀಸ್ವರಂ
ಪರ್ಕಃ - ಗ್ರಾ.೧
ದೇವತಾ ಪ್ರತಿಪಾದಕಮ್ - ಸುವಃ, ಬೃಹತ್, ಸತ್ಯಮೋಜಃ
ಪದ - ಅಥರ್ವಣಮ್ - ಆರ. ೨೩ ॥
ಸ್ತೋಭ - ಆನ್ಧೀಗವಂ - ಗ್ರಾ. ೧೦೬೧ ॥

ಸಾಮಗಾನದ ಅವಯವಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಉಪಾಸನೆ ಮಾಡುವ ಕ್ರಮ ಮತ್ತು ಲಭಿಸುವ ಫಲಗಳನ್ನು ತಿಳಿಸಿದ ನಂತರ ಶ್ರುತಿಯು ಸಾಮಗಾನದ ಅವಯವ ಗಳನ್ನೆಲ್ಲಾ ಸಮಷ್ಟಿಯಾಗಿ ಉಪಾಸನೆ ಮಾಡುವ ಕ್ರಮವನ್ನೂ ಲಭಿಸುವ ಫಲವನ್ನೂ ತಿಳಿಸುತ್ತಿದೆ - ಛಾಂ. ಉ. ಅಧ್ಯಾಯ ೨ ಪೂರ್ಣವಾಗಿ.

| ಭಕ್ತಿ | ಆರೋಹಣ ಕ್ರಮ | ಅವರೋಹಣ ಕ್ರಮ | ವೃಷ್ಟಿ | ನೀರು | ಋತು | ಪಶು | ಇಂದ್ರಿಯ |
|---|---|---|---|---|---|---|---|
| ಹಿಂಕಾರ | ಪೃಥಿವಿ | ದ್ಯುಲೋಕ | ಗಾಳಿ | ಮೇಘ | ವಸಂತ | ಆಡು | ಪ್ರಾಣ |
| ಪ್ರಸ್ತಾವ | ಅಗ್ನಿ | ಆದಿತ್ಯ | ಮೇಘ | ಮಳೆ | ಗ್ರೀಷ್ಮ | ಕುರಿ | ವಾಕ್ |
| ಉದ್ಗೀಥ | ಅಂತರಿಕ್ಷ | ಅಂತರಿಕ್ಷ | ಮಳೆ | ಪೂರ್ವಕ್ಕೆ ಹರಿಯುವ ನೀರು | ವರ್ಷ | ಗೋ | ಚಕ್ಷುಸ್ಸು |
| ಪ್ರತಿಹಾರ | ಆದಿತ್ಯ | ಅಗ್ನಿ | ಮಿಂಚು ಗುಡುಗು | ಪಶ್ಚಿಮ ಕ್ಕೆಹರಿ ಯುವ ನೀರು | ಶರದೃತು | ಕುದುರೆ | ಶ್ರೋತ್ರ |
| ನಿಧನ | ದ್ಯುಲೋಕ | ಪೃಥಿವಿ | ಮಳೆ ಅಂತ್ಯ | ನೀರು | ಹೇಮಂತ | ಪುರುಷ | ಮನಸ್ಸು |

**ಪಂಚವಿಧ ಸಾಮೋಪಾಸನೆ :** ಸಾಮಗಾನದ ಅವಯವಗಳಾದ ಐದೂ ಭಕ್ತಿಗಳನ್ನು ಒಟ್ಟಾಗಿ ಉಪಾಸನೆ ಮಾಡುವ ಕ್ರಮವನ್ನು ಪಂಚವಿಧ ಸಾಮೋಪಾಸನೆ ಎಂದು ಗುರುತಿಸಲಾಗಿದೆ.

ಸಾಮಗಳ ಅವಯವಗಳ ಉಪಾಸನೆಯಿಂದ ಪಡೆಯುವ ಫಲವನ್ನು ನಿರ್ದೇಶಿಸಿದ ನಂತರ ಸಮಸ್ತ ಸಾಮದ ಉಪಾಸನೆಯ ಕ್ರಮ ಹಾಗೂ ಫಲಗಳನ್ನು ಹೀಗೆ ಉಪದೇಶಿಸ ಲಾಗಿದೆ. ಸಾಮ ಹಾಗೂ ಸಾಧು ಈ ಶಬ್ದಗಳಿಗೆ ಒಂದೇ ಅರ್ಥವಿದೆಯಾದ್ದರಿಂದ ಸಾಮವನ್ನು ಸಾಧುವೆಂದು ಉಪದೇಶಿಸಿದರೆ ಶ್ರುತಿ ಸ್ಮೃತಿ ವಿರುದ್ಧವಲ್ಲದ ಭೋಗಗಳನ್ನು ಪಡೆಯಬಹುದು.

ಅಧಿಕಗುಣ ವಿಶಿಷ್ಟವಾದ ಪಂಚವಿಧ ಸಾಮಗಳನ್ನು ಆಲೋಕ ಈ ಲೋಕ, ವೃಷ್ಟಿ, ನೀರು, ಋತು, ಮಳೆ ಇಂದ್ರಿಯ ದೃಷ್ಟಿಯಲ್ಲಿ ಅರಿತು ಉಪಾಸನೆ ಮಾಡುವುದರಿಂದ ಕರ್ಮ

ಸಮೃದ್ಧಿಯಾಗುತ್ತದೆ. ಉತ್ತರೋತ್ತರ ಅಧಿಕವಾದ ಶುಭಫಲಪಡೆದು ಆಯಾದೇವತಾ ಭಾವದಿಂದ ವಿರಾಜಿಸುತ್ತಾನೆ - ಛಾಂ. ಉ. ೨.೧-೭ ಖಂಡಗಳು.

೪ ೨೦ ೦ ೧ — ೧ —
**ಓಗ್ನಾಇ ॥** ಪ್ರಸ್ತಾವ ॥ **ಆಯಾಹೀऽಇವೋಇತೋಽಯಾऽ೨ಇ । ತೋಽಯಾऽ೨ಇ ।**

೧ ೦ ೨೦ ೧ ೧ ೧ ೨೦
**ಗೃಣಾನೋಹ । ವ್ಯದಾತೋಽಯಾऽ೨ಇ । ತೋಽಯಾऽ೨ಇ ॥** ಉದ್ಗೀಥ ॥ **ನಾಇಹೋ**

೧ ೧ ೩ ೫೦ ೦ ೩
**ತಾಸಾऽ೨೩ ॥** ಪ್ರತಿಹಾರ ॥ **ತ್ಸಾऽ೨ಇಬಾऽ೨೩೪ಔಹೋವಾ ॥** ಉಪದ್ರವ ॥ **ಹೀऽ೨೩**

೫
**೪ಷೀ ॥** ನಿಧನ ॥ *ಸಾ. ಋ.೧., ಗ್ರಾಮಗೇಯಗಾನ ೧ ॥*

| ಭಕ್ತಿ | ದೃಷ್ಟಿ | ಆದಿತ್ಯರೂಪ | ಉಪಜೀವನ |
|---|---|---|---|
| ಹಿಂ | ವಾಕ್ | ಉದಯಾತ್ಪೂರ್ವ | ಪಶುಗಳು |
| ಪ್ರಸ್ತಾವ | ಪ್ರ | ಉದಯಕಾಲದ | ಮನುಷ್ಯರು |
| ಆದಿ ಓಮ್ | ಆ | ರಶ್ಮಿಪ್ರಸರಿಸುವಕಾಲ | ಪಕ್ಷಿಗಳು |
| ಉದ್ಗೀಥ | ಉತ್ | ಮಧ್ಯಾಹ್ನಸೂರ್ಯ | ದೇವತೆಗಳು |
| ಪ್ರತಿಹಾರ | ಪ್ರತಿ | ಮಧ್ಯಾಹ್ನಾನಂತರ ಅಪರಾಹ್ನಕ್ಕೆ ಮುಂಚೆ | ಗರ್ಭ |
| ಉಪದ್ರವ | ಉಪ | ಅಪರಾಹ್ನಾನಂತರ ಅಸ್ತಮಯಕ್ಕೆ ಮುಂಚೆ | ಅರಣ್ಯ ಪಶುಗಳು |
| ನಿಧನ | ನಿ | ಅಸ್ತಮಿಸಿದ ತಕ್ಷಣದ | ಪಿತೃಗಳು |

**ಸಪ್ತವಿಧ ಸಾಮೋಪಾಸನೆ :-** ಪಂಚವಿಧ ಸಾಮದಲ್ಲಿನ ಪ್ರಸ್ತಾವ ಭಕ್ತಿಗಿಂತ ಮುಂಚೆ ಹಿಂಕಾರವನ್ನೂ ಉದ್ಗೀಥ ಭಕ್ತಿಗೆ ಮುಂಚೆ ಓಂಕಾರವನ್ನು ಸೇರಿಸುವುದರಿಂದ ಸಪ್ತವಿಧಸಾಮವಾಗುತ್ತದೆ. ಯಜ್ಞದಲ್ಲಿ ಇದರ ವಿನಿಯೋಗ ಆದಿತ್ಯನನ್ನು ಈ ಸಾಮದ ಅವಯವಗಳಲ್ಲಿ ಅಧ್ಯಾಸ ಮಾಡಿ ಉಪಾಸನೆ ಮಾಡುವ ಕ್ರಮ ಹೀಗಿದೆ

ಹೀಗೆ ಅರಿತುಕೊಂಡು ವಾಕ್ಕಿನಲ್ಲಿ ಸಪ್ತವಿಧ ಸಾಮವನ್ನು ಉಪಾಸಿಸುವವನು ಅನ್ನವಂತನೂ ಅನ್ನಾದನೂ ಆಗುತ್ತಾನೆ. ಆದಿತ್ಯ ದೃಷ್ಟಿಯಿಂದ ಉಪಾಸಿಸಿದರೆ ಆದಿತ್ಯನ

ಸ್ವರೂಪನೇ ಆಗುತ್ತಾನೆ. ಸಪ್ತವಿಧ ಭಕ್ತಿಗಳ ನಾಮಾಕ್ಷರಗಳ ಮೂರರ ಗುಂಪಾಗಿ ೭X೩=೨೧ ಸಂಖ್ಯೆಯೂ ಮೃತ್ಯು ವಿಷಯಭೂತವಾದ ಅಕ್ಷರ ಸಂಖ್ಯೆಯೂ, ಆದಿತ್ಯನೂ ೨೧ನೆಯದು ಆಗುತ್ತದೆಂಬುದನ್ನರಿತು ಸಪ್ತವಿಧ ಸಾಮೋಪಾಸಕನು ಅತಿ ಮೃತ್ಯುವಾದ ಆದಿತ್ಯನಿಂದಾಚೆಯ ಲೋಕವನ್ನು ಜಯಿಸುತ್ತಾನೆ. ಆತ್ಮಸಮ್ಮಿತವೂ ಅತಿಮೃತ್ಯುವೂ ಆದ ಸಪ್ತವಿಧ ಸಾಮೋಪಾಸನೆಯನ್ನರಿತು ಉಪಾಸನೆ ಮಾಡುವವನು, ಮೃತ್ಯುವನ್ನು ಜಯಿಸುತ್ತಾನೆ, ಮೃತ್ಯುವಿನ ಜಯಕ್ಕಿಂತಲೂ ಹಿರಿದಾದ ಜಯ ಇವನದು - *ಛಾಂ.ಉ. ೨.೮,೯.೧೦, ಖಂಡಗಳು.*

ಹೀಗೆ ಸಾಮದ ಹೆಸರನ್ನು ಹೇಳದೆ ಸಮಷ್ಟಿಯಾಗಿ ಪಂಚವಿಧ ಸಪ್ತವಿಧ ಸಾಮೋಪಾಸನೆಯನ್ನು ತಿಳಿಸಿ ಈಗ ವಿಶಿಷ್ಟ ಫಲದಾಯಕವಾದ ಗಾಯತ್ರ್ಯಾದಿ ಸಾಮಭಕ್ತಿಗಳ ಉಪಾಸನಾಕ್ರಮವನ್ನೂ ಫಲವನ್ನೂ ನಾಮಗ್ರಹಣ ಪೂರ್ವಕವಾಗಿ ವಿವರಿಸುತ್ತಾರೆ. ಮನಸ್ಸು, ವಾಕ್ಕು, ಚಕ್ಷುಸ್ಸು, ಶ್ರೋತ್ರ, ಪ್ರಾಣ ಇವುಗಳ ದೃಷ್ಟಿಯಿಂದ **ಗಾಯತ್ರಮ್** ಸಾಮದ ಭಕ್ತಿಗಳನ್ನು ಉಪಾಸನೆ ಮಾಡಿದರೆ ಪ್ರಾಣಗಳು ಪೂರ್ಣವಾಗಿ ಸರ್ವಾಯುಸ್ಸು ಫಲವಾಗಿರುತ್ತದೆ. ಮಥನ ಧೂಮ ಜ್ವಾಲೆ ಅಂಗಾರ ಉಪಶಾಂತಿ ಸಂಶಾಂತಿ ಇವುಗಳ ದೃಷ್ಟಿಯಿಂದ **ರಥಂತರ** ಸಾಮವನ್ನು ಅರ. ೭೬. ಉಪಾಸಿಸುವುದರಿಂದ ಬ್ರಹ್ಮವರ್ಚಸ್ಸು, ಅನ್ನಾದತ್ವ ಸರ್ವಾಯುಸ್ಸು ಲಭಿಸುತ್ತದೆ. ಉಪಮನ್ತ್ರಣಾದಿ ದೃಷ್ಟಿಯಿಂದ **'ವಾಮದೇವ್ಯ'** - *ಸಾಮ.ಊಹ. ೫.* ಉಪಾಸನೆಯಿಂದ ಅಮೋಘ ರೇತೋವನ್ತನಾಗುತ್ತಾನೆ.

ಉದಯಿಸುತ್ತಿರುವ ಸೂರ್ಯಾದಿ ದೃಷ್ಟಿಯಿಂದ **'ಬೃಹತ್ಸಾಮ'**ವನ್ನು ರಹ ೫೨, ಅರ. ೨೭ - ಉಪಾಸಿಸುವವನು ತೇಜಸ್ವಿಯೂ ಅನ್ನಾದನೂ ಸರ್ವಾಯುಸ್ಸುಳ್ಳವನೂ ಪ್ರಜಾವಂತನೂ ಕೀರ್ತಿವಂತನೂ ಆಗುತ್ತಾನೆ. ಮೋಡ ಆದಿ ದೃಷ್ಟಿಯಿಂದ **'ವೈರೂಪ'** *ಸಾಮ.ಗ್ರಾ. ೯೨೨* ಉಪಾಸನೆ ಮಾಡುವವನು ಬಹುವಿಧ ಪಶುಗಳನ್ನೂ ಸರ್ವಾಯುಸ್ಸನ್ನೂ ಪ್ರಜೆಗಳನ್ನೂ ಕೀರ್ತಿಯನ್ನೂ ಪಡೆಯುತ್ತಾನೆ. ವಸಂತ ಋತು, ಆದಿ ದೃಷ್ಟಿಯಿಂದ **'ವೈರಾಜ'** ಸಾಮ.ಗ್ರಾ. ೬೯೩, ಅರ. ೮೬ - ದ ಉಪಾಸಕನಿಗೆ ಪ್ರಜಾದಿಗಳು ಫಲ. ಪೃಥಿವ್ಯಾದಿ ದೃಷ್ಟಿಗಳಿಂದ **'ಶಕ್ವರೀ'** ಸಾಮ - ಮಹಾನಾಮ್ನೀ ೧ - ದ ಉಪಾಸಕನಿಗೆ ಲೋಕ ಆಯುಸ್ಸು ಪ್ರಜಾದಿಗಳು ಲಭ್ಯ. ಆಡು ಆದಿ ದೃಷ್ಟಿಯಿಂದ **'ರೇವತೀ'** ಸಾಮವನ್ನು - ಅರ. ೭೨,೭೩. ಉಪಾಸನೆ ಮಾಡುವವನು ಪಶುಗಳ ಒಡೆಯನಾಗುವನು. ಲೋಮಾದಿ ದೃಷ್ಟಿಯಿಂದ **'ಯಜ್ಞಾಯಜ್ಞೀಯ'** *ಸಾಮ.ಗ್ರಾ. ೫೯* - ದ ಉಪಾಸಕನು ಅಂಗ ವೈಕಲ್ಯಗಳಿಲ್ಲದೆ ಇರುತ್ತಾನೆ. ಅಗ್ನ್ಯಾದಿಗಳ ದೃಷ್ಟಿಯಿಂದ **'ರಾಜನ'** ಸಾಮ - *ರಹಸ್ಯ ೬೬* - ದ ಉಪಾಸಕನಿಗೆ ದೇವತೆಗಳ ಸಾಲೋಕ್ಯವೂ - ಆಯುರಾದಿಗಳೂ ಲಭಿಸುತ್ತವೆ. ತ್ರಯೀ ವಿದ್ಯಾದಿಗಳ ದೃಷ್ಟಿ ಇಟ್ಟು

ಪ್ರತಿಯಾಗಿ ಗಾನಮಾಡುತ್ತಿರುವುದನ್ನು ಸ್ಮರಿಸಬೇಕು. ಗುಣಕರ್ಮದಲ್ಲೂ ಪ್ರಸಿದ್ಧವಾದ 'ವ್ರೀಹಿ ಪ್ರೋಕ್ಷಣವತ್' ನ್ಯಾಯದಂತೆ ಯಾಗ ಮಧ್ಯದಲ್ಲಿ ಸಾಮಗಾನಾನುಷ್ಠಾನ ಮಾಡಬೇಕೆಂಬುದು ವಿಧಿ. ವಿಶ್ವಜಿತ್ ಆದಿ ಯಾಗಗಳಂತೆ ಬಹಿರ್ಗಾನಕ್ಕೆ ಫಲವನ್ನು ಕಲ್ಪಿಸತಕ್ಕದ್ದು.

ಯಾಗಮಧ್ಯದ ಗಾನವಾದರೋ ಪ್ರಯಾಜಾದಿಗಳಂತೆ ಆರಾದುಪಕಾರವಾದಂತಹುದು. **ತಥಾ ಚಾವಧೇಯಮ್ । ಯಾಗಸ್ಯ ಕರ್ಮರೂಪತ್ವಾತ್ ಕರ್ಮಣಶ್ಚ ಕ್ಷಯಿತ್ವಾತ್ ಕಾಲಾನ್ತರ ಭಾವಿ ಸ್ವರ್ಗಾದಿ ಫಲಸಾಧನತ್ವಂನೋೀತ್ಪದ್ಯತೇ । ಅತಃ ಯಾಗಕ್ರಿಯಾ ಸಹ ಭಾವಿನೋ ಕಾಚಿಚ್ಛಕ್ತಿರಪೂರ್ವಮಿತಿ ಮೀಮಾಂಸಕೈಃ ಸ್ವೀಕ್ರಿಯತೇ । ಸಾ ಚ ಯಥಾ ಅಂಗಾವಜನ್ಯಮೌಷ್ಣಂ ಶಾನ್ತೇಷ್ವಂಗಾರೇಷು ಜಲೇ ಅನುವರ್ತತೇ ತಥೈವ ನಷ್ಟೇ ಅಪಿ ಯಾಗೇ ಕರ್ತುರಾತ್ಮಾನಮಾಶ್ರಯತೇ । ತಂ ಚ ಫಲಾಪೂರ್ವಮ್ ಸಮುದಾಯಾ ಪೂರ್ವಮ್ ಉತ್ಪತ್ಯ ಪೂರ್ವಂ ಅಂಗಾಪೂರ್ವಂಚೇತಿ ನಾನಾ ವಿಧಮ್ । ತತ್ರ ಸನ್ನಿಪತ್ಯಾರಾದಿತಿ ಭೇದಾತ್ ಅಂಗ ಪೂರ್ವಮ್ ದ್ವಿವಿಧಮ್ । ಯಾನಿ ದ್ರವ್ಯ ದೇವತಾ ಸಂಸ್ಕಾರ ದ್ವಾರೇಣ ಯಾಗಸ್ವರೂಪಾತಿಶ ಯಾಧಾನೇನ ತದುತ್ಪತ್ಯಪೂರ್ವ ನಿಷ್ಪತ್ತೌ ವ್ಯಾಪ್ರಿಯನ್ತೇ ತದ್ವಾರೇಣ ಫಲಾಪೂರ್ವಂ ತಾನಿ ಸನ್ನಿಪತ್ಯೋಪಕಾರಕಾಣಿ । ಅವಘಾತಾದೀನಿ ಯಾನಿ ತು ಉತ್ಪತ್ಯಪೂರ್ವೇಭ್ಯಃ ಫಲಾಪೂರ್ವ ನಿಷ್ಪತ್ತೌ ಸಾಕ್ಷಾದೇವ ವ್ಯಾಪ್ರಿಯನ್ತೇ। ತಾನಿ ಆರಾದುಪಕಾರಾಣಿ ಪ್ರಯಾಜಾದೀನಿ ಇತಿ । ಏತತ್ ಸಮಸ್ತಂ ಜೈ.ನ್ಯಾ.ವಿ. ೯.೨.೨. ಸ್ಫುಟಮ್ ॥**

ಅಂದರೆ ಇಲ್ಲಿ ಗಮನಿಸಬೇಕಾದದ್ದು - ಯಾಗ ಕರ್ಮಸ್ವರೂಪವಾದದ್ದು ಕರ್ಮವಾದರೋ ಕ್ಷಯಿಸುವಂತಹುದು. ಹೀಗಿರುವಾಗ ಮುಂದೆ ಸಿಗಬಹುದಾದ ಸ್ವರ್ಗಾದಿ ಫಲಕ್ಕೆ ಸಾಧನ ಎಂಬುದು ಹೊಂದುವುದಿಲ್ಲವಾಗಿ ಯಾಗಕ್ರಿಯೆಗಳೊಂದಿಗೆ 'ಅಪೂರ್ವ' ಎಂಬೊಂದು ಶಕ್ತಿಯನ್ನು ಮೀಮಾಂಸಕರು ಸ್ವೀಕರಿಸಿದ್ದಾರೆ. ಬೆಂಕಿಯಿಂದುಂಟಾದ ಉಷ್ಣವು ಬೆಂಕಿ ಶಾಂತವಾದ ನಂತರವೂ ನೀರಿನಲ್ಲಿ ಕಂಡು ಬರುವಂತೆಯೇ ಯಾಗ ಸಮಾಪ್ತಿಯಾದ ನಂತರವೂ ಕರ್ತೃವನ್ನಾಶ್ರಯಿಸಿರುತ್ತವೆ. ಆ **'ಅಪೂರ್ವ'** ಎಂಬ ಫಲವು ಸಮುದಾಯ ಅಪೂರ್ವಮ್ ಉತ್ಪತ್ತಿ ಅಪೂರ್ವಮ್ ಎಂದು ನಾನಾಬಗೆಯದಾಗಿರುತ್ತದೆ. ಅಲ್ಲಿ ಒಟ್ಟಾಗಿ ಸೇರಿದುದರಿಂದುಂಟಾಗುವ ಸಮೂಹತ್ವಾದಿ ಭೇದಗಳಿಂದ ಅಂಗಾಪೂರ್ವಮ್ ಎಂಬುದು ಎರಡುಬಗೆ. ದ್ರವ್ಯ ದೇವತಾ ಸಂಸ್ಕಾರಗಳ ಮೂಲಕ ಯಾಗಸ್ವರೂಪವೇ ಅತಿಶಯವಾದ ಗುಣವನ್ನು ಉತ್ಪಾದಿಸುವಂತಹದಾದುದರಿಂದ ಅಪೂರ್ವವಾದುದನ್ನು ಉತ್ಪತ್ತಿ ಮಾಡುವ

ಕಾರ್ಯದಲ್ಲಿ ತೊಡಗಿರುತ್ತವೆ. ಧಾನವನ್ನು ಹಿಟ್ಟುಮಾಡುವ ಅವಘಾತಾದಿಗಳು ಫಲೋತ್ಪತ್ತಿ ಪೂರ್ವದಲ್ಲೂ ಸಮೂಹತ್ವೇನ ಉಪಕಾರಕಗಳಾಗಿದ್ದು ಅಪೂರ್ವವೆಂಬ ಫಲೋತ್ಪತ್ತಿಗೆ ಸಾಕ್ಷಾತ್ತಾಗಿಯೂ ಕಾರ್ಯನಿರತವಾಗಿರುತ್ತವೆ. ಅವು ದೂರಸ್ಥವಾಗಿದ್ದೂ ಸಮೀಪಸ್ಥವಾಗಿದ್ದೂ ಪ್ರಯಾಜಾದಿಗಳಂತೆ ಉಪಕಾರಕಗಳಾಗಿರುತ್ತವೆ. ಈ ಪ್ರಕರಣವು ಜೈ.ನ್ಯಾ.ವಿ.೯.೨೨ರಲ್ಲಿ ಸ್ಪಷ್ಟವಾಗಿ ಚರ್ಚಿಸಲ್ಪಟ್ಟಿದೆ.

ಆದುದರಿಂದ ಇದೇಮುಖ್ಯಗುಣಕರ್ಮಗಳಲ್ಲವೆಂದರೆ - ಹೀಗೆ ಹೇಳಬೇಕಾಗುತ್ತದೆ. ಪ್ರಧಾನ ಕರ್ಮದೊಂದಿಗಿರುವ ಪಾಠವನ್ನು **'ಭೂಮಿರಥ ಶುಷ್ಕೇಷ್ಟಿ'** ನ್ಯಾಯದಂತೆ - ಭೂಮಿಯ ಮೇಲೆ ರಥದ ಚಿತ್ರವನ್ನು ಬರೆದು ವಿದ್ಯಾರ್ಥಿಗೆ ರಥದ ವೈಶಿಷ್ಟ್ಯಗಳ ಪರಿಚಯ ಮಾಡಿಸುವಂತೆಯೇ ಅಗ್ನಿಯಲ್ಲಿ ಮಾಡಬೇಕಾದ ಇಷ್ಟಿಯ ಸ್ವರೂಪವನ್ನು ಒಣಕಟ್ಟಿಗೆ ಸಮಿತ್ತುಗಳ ಸಹಾಯದಿಂದ ತಿಳಿಸಿಕೊಡುವಂತೆಯೇ - ಪ್ರಯೋಗ ಸೌಕರ್ಯಕ್ಕಾಗಿ **'ಗಾನ' 'ಅಧ್ಯಯನ'** ಎಂದು ಬಿಡಿಸಿ ತಿಳಿಸಲಾಗಿದೆ. ಇದನ್ನೇನೂ ಪ್ರಧಾನವಾದ ಕರ್ಮಕ್ಕೆ ಗುಣಕರ್ಮಗಳಿಂದ ಪುಷ್ಟಿಯಾಗಲೀ ಪ್ರಯೋಜನವಾಗಲೀ ಇಲ್ಲವೆಂದು ಹೇಳಲಾಗುವುದಿಲ್ಲ. ಇದಕ್ಕೆ ಕಾರಣ ಗಾನದಿಂದ ಸಂಸ್ಕೃತವಾದ ಋಗಾಕ್ಷರಗಳಿಂದಲೇ ಸ್ತುತಿ ಸಾಧ್ಯವಾಗುವುದರಿಂದ **'ಆಜ್ಯೈಸ್ತುವತೇ ಪೃಷ್ಠೈಸ್ತುವತೇ'** ಎಂಬೀ ರೀತಿಯ ವಿಧಿವಿಧಾನವೇ ಮೇಲಿನ ಅಭಿಪ್ರಾಯವನ್ನು ಸಮರ್ಥಿಸುತ್ತದೆ. ಹೀಗಾಗಿ ಋಗಾಕ್ಷರಗಳಿಗೆ ಸ್ವರ ವಿಶಿಷ್ಟತೆ ಅಭಿವ್ಯಕ್ತವಾಗುವುದೇ ದೃಷ್ಟ ಪ್ರಯೋಜನವಾಗಿರುವುದರಿಂದ ಗಾನವು ಸಂಸ್ಕಾರ ಕರ್ಮವಾಗಿದೆ.

ಹೀಗೆ ಸಂಸ್ಕಾರಗೊಂಡ ಋಗಾಕ್ಷರಗಳ ಗೀತಾತ್ಮಕವಾದ ಒಂದೊಂದು ಸಾಮವನ್ನೂ ಒಂದೊಂದು ಋಕ್ಕಿನ ಮೇಲೆ - **'ವೇದಸಾಮ'** ವೆಂದು ಸಾಮವೇದ ಗ್ರಂಥಗಳ ಅಧ್ಯಯನ ಮಾಡುತ್ತಾರೆ. ಊಹಗ್ರಂಥದಲ್ಲಿ ಒಂದೊಂದು ಸಾಮವನ್ನು ಮೂರು ಋಚೆಗಳ ಮೇಲೆ ಗಾನಮಾಡುತ್ತಾ ಅಧ್ಯಯನ ಮಾಡುತ್ತಾರೆ. ಈ ರೀತಿಯ ಊಹಗ್ರಂಥದ ಬಗೆಗೆ ಜೈ.ನ್ಯಾ.ವಿ. ೯.೨.೧೨ರಲ್ಲಿ ಚರ್ಚಿಸಲಾಗಿದೆ.

ಸಾಮಕರು ಮೂರು ಮೂರು ಋಚೆಗಳ ಮೇಲೆ ಒಂದೊಂದೇ ಸಾಮವನ್ನು ಗಾನಮಾಡುವ ಊಹ ಗ್ರಂಥವು ಯಾರ ಹೆಸರಿನಲ್ಲೂ ರಚಿತವಾಗಿಲ್ಲದಿರುವುದ ರಿಂದಲೂ ಅಧ್ಯಾಪಕರು ಅನಧ್ಯಯನ ಕಾಲಗಳಲ್ಲಿ ಅಪೌರುಷೇಯವಾದ ಅನ್ಯವೇದ, ವೇದಭಾಗಗಳನ್ನು ಅಧ್ಯಯನ ಮಾಡಿಸದಿರುವಂತೆಯೇ ಈ ಊಹ ಭಾಗವನ್ನು ಅಧ್ಯಯನ ಮಾಡಿಸದಿರುವುದರಿಂದಲೂ ವೇದಸಾಮವೆಂಬುದು ವೇದವೇ ಆದ ಯೋನಿ ಋಚೆಗಳಿಂದಲೇ ಉದಯವಾಗಿರುವುದರಿಂದಲೂ ಪುರುಷಕೃತವಾಗಿರದೆ ಅಪೌರುಷೇಯವಾದುದೆಂದರೆ

ಯೋನಿ ಮೊದಲು ತದನಂತರ ಗಾನವೆಂದು ವಿಧಿಸಿರುವುದನ್ನು ಗಮನಿಸಿ ವಿಧಿಯ ಪ್ರಯೋಜನವಿಲ್ಲದ ಪ್ರಸಂಗವೆಂದು ನಿರಾಕರಿಸ ಬೇಕಾಗಿದೆ. ಅಪೌರುಷೇಯವೆಂದೇ ಗಣಿಸಿರುವ ವೇದಸಾಮ ಗೇಯಗಾನ ಗ್ರಂಥದಲ್ಲಿ **ಕಯಾನಶ್ಚಿತ್ರ ಆಭುವ....** । ಸಾ.ಋ. ೧೬೯ ದಿಂದ ಉದಯವಾದ ೩೦೪-೩೦೬ ಸಾಮಗಳಲ್ಲಿ ೩೦೬ನೆಯದು ಮಹಾವಾಮ ದೇವ್ಯಮ್ ಎನಿಸಿಕೊಂಡಿದೆ. ಆರ್ಷೇಯ ಬ್ರಾಹ್ಮಣದಲ್ಲೂ ೨.೬.೬. ಹೀಗೆಯೇ ಇದೆ. **ಉತ್ತರಾರ್ಚಿಕದ ಕಸ್ತ್ವಾ ಸತ್ಯೋಮ ದಾನಾಮ್....** । ೬೮೩ ಮತ್ತು **ಅಭೀಷುಣಾ ಸಖೀನಾಮ್....** । ೬೮೪ ಎಂಬೆರಡೂ ಋಚೆಗಳ ಯೋಗದಿಂದ ಗಾನಮಾಡಬೇಕೆಂದು ಊಹ.೫ ವಿಧಿಸಲಾಗಿದೆ. ಹೀಗಿರುವ ವಿಧಿ ಗ್ರನ್ಥರೂಪಕ್ಕೆ ವೇದತ್ವವು ವ್ಯರ್ಥ ಎಂಬ ಪಕ್ಷದಲ್ಲಿ ವೇದಸಾಮವೆಂಬುದು ಅಧ್ಯಯನದಿಂದಲೇ ಸಿದ್ಧಿಸುತ್ತದೆ. ಮೇಲಿನ ಎರಡೂ ಋಚೆಗಳ ಆಧಾರದಿಂದಾದ ಸಾಮವಾಗಿರುವುದರಿಂದ ಅಪೌರುಷೇಯತ್ವ ಎಂಬುದರೊಂದಿಗೆ ಮೂರೂ ಋಚೆಗಳು ಅನಧ್ಯಯನದಲ್ಲಿ ಅಧ್ಯಯನ ಮಾಡಲ್ಪಡುವುದಿಲ್ಲ. ಶಿಥಿಲವಾದ ಭಾವಿ ಉದ್ಯಾನವನಗಳ ಕರ್ತೃಗಳು ಗೊತ್ತಿಲ್ಲವಾಗಿ ಸ್ಮರಿಸದಿರುವಂತೆಯೇ ಪ್ರಕೃತ ಸಾಮ ಗಾನದ ಕರ್ತೃಗಳ ಮೂಲವೂ ಗೊತ್ತಿಲ್ಲವಾಗಿ ಸ್ಮರಿಸುವ ವ್ಯವಧಾನವೂ ಇಲ್ಲ. ಈ ಕರ್ತೃ ಸ್ಮರಣ ರಾಹಿತ್ಯದಿಂದ ಅಧ್ಯಾಪಕರಲ್ಲಿ ಸಾಮಗಾನದ ವೇದತ್ವ ಪ್ರಸಿದ್ಧವೇ ಆಗಿದೆ.

ಇಲ್ಲಿ ಉತ್ತರವನ್ನು ಹೀಗೆ ಅನುಸಂಧಾನ ಮಾಡಬಹುದಾಗಿದೆ - ಜೈ.ನ್ಯಾ.೧.೧.೮ ರಂತೆ ಅಧ್ಯಯನ ಅಧ್ಯಾಪನದಲ್ಲಿ ಪ್ರಸಿದ್ಧವಾಗಿರುವುದರಿಂದ ಕರ್ತೃ ಕ್ರಿಯಾಪದಗಳಿಂದ ಕೂಡಿದ ಪದಸಮೂಹದ ಸಾಧಾರಣ ವಾಕ್ಯ ಎಂಬ ವಾದಕ್ಕೆ ಹುರುಳಿಲ್ಲದಂತಾಯಿತು. ಕರ್ತೃನಾಮ ಸಿಗುವುದಿಲ್ಲವೆಂದರೆ ಅಧ್ಯಯನ ಸಂಪ್ರದಾಯದಲ್ಲಿ ಪರಂಪರೆಯಿಂದ ಸಾಮ ಗಾನ ಲಭ್ಯವಾಗಿರುವುದರಿಂದ ಅಪೌರುಷೇಯವೆಂದೇ ಆಯಿತು. ಕಾಳಿದಾಸಾದಿ ಮಹಾ ಕವಿಗಳ ಗ್ರಂಥಗಳ ಸರ್ಗಾಂತ್ಯದಲ್ಲಿ ಕರ್ತೃವಿನ ಹೆಸರಿರುತ್ತದೆ. ವೇದ ಪೌರುಷೇಯ ವಾಗಿದ್ದರೆ ಕರ್ತೃವಿನ ಹೆಸರಿರುತ್ತಿತ್ತು. ಹೆಸರಿಲ್ಲದುದರಿಂದ ವೇದ ಅಪೌರುಷೇಯವೆಂದೇ ಆಗುವುದರಿಂದ ಪದಸಮೂಹ - ವಾಕ್ಯತ್ವ ಎಂಬ ತರ್ಕವೇ ಇಲ್ಲದಂತಾಯಿತು. ವೇದಕ್ಕೆ ಅಪೌರುಷೇಯತ್ವವು ಆತ್ಮಕ್ಕೆ ಕರ್ತೃ ಹೇಗಿಲ್ಲವೋ ಹಾಗೆ. ಆದುದರಿಂದ ವೇದ ಅಪೌರುಷೇಯವೆಂದೇ ವ್ಯಾಖ್ಯಾನಿಸಲ್ಪಟ್ಟಿದೆ ಎಂಬ ಪಕ್ಷದಲ್ಲಿ ಊಹಗ್ರಂಥದ ಅಪೌರುಷೇ ಯತ್ವವು ಅದ್ಭುತ ಶಕ್ತಿಯ **'ಸಾಧಕೈತನ್ಯಾಯ'** ದಂತೆ ಅಂದರೆ ನೀರಿನಲ್ಲಿರುವ ಗುಂಡು ಕಲ್ಲಿನಂತೆ ಎಂದು ಹೇಳುವುದೇನೂ ಹೆಗ್ಗಳಿಕೆಯಾಗುವುದಿಲ್ಲವಷ್ಟೆ.

ಇದಕ್ಕೆ ಉದಾಹರಣೆ/ ಪರಂಪರೆಯೂ ಬಹ್ವಚರಲ್ಲಿ/ ಋಗ್ವೇದಿಗಳಲ್ಲಿ ಆಶ್ವಲಾಯನ ನಿರ್ಮಿತ ಮಹಾವ್ರತ ಪ್ರಯೋಗ ಪ್ರತಿಪಾದಕವಾದ ಕಲ್ಪಸೂತ್ರವನ್ನು

ಅರಣ್ಯದಲ್ಲಿ ಅಧ್ಯಯನ ಮಾಡುವ ಐದನೆಯಾದ ಅರಣ್ಯಕವನ್ನು ವೇದವೆಂದೇ ವ್ಯವಹರಿಸು ವಂತೆಯೇ ಎಂದಾಗ ಅದರಲ್ಲೂ ವೇದತ್ವವಿಲ್ಲವೆಂದು ತಿಳಿಯಬಾರದು. ಪ್ರಥಮಾರಣ್ಯಕ ದಿಂದ ಪುನರುಕ್ತಿಯಾಗಿರುವುದರಿಂದಲೂ ಅರ್ಥವಾದವಿಲ್ಲವಾದುದರಿಂದಲೂ ಬ್ರಾಹ್ಮಣ ಸದೃಶವಾಗಿಲ್ಲದುದರಿಂದಲೂ ಪಂಚಮಾರಣ್ಯಕದಂತೆಯೇ ಊಹಗಾನದಲ್ಲಿಯೂ ಸಹ ಇದೇ ನ್ಯಾಯವಿರುತ್ತದೆ - ಜೈ.ನ್ಯಾ.ವಿ.೩.೬ ಅಧಿಕರಣಗಳಲ್ಲಿನ ಅನೇಕ ವರ್ಣಕಗಳಲ್ಲಿ ಒಂದು ಅಥವಾ ಮೂರು ಋಚೆಗಳಿಂದಾಗಿರುವ ಸಾಮಗಳಲ್ಲಿ 'ಸ್ತುತಿ' ಒಂದು ಋಕ್ಕಿನ ಮೇಲಿನ ಒಂದು ಸಾಮದಿಂದ ಸಿದ್ಧವಾಗುವುದಿಲ್ಲವಾಗಿ ಮೂರು ಋಚೆಗಳ ಮೇಲೆ ಉದಯವಾಗಿರುವ ಒಂದು ಸಾಮ ಸ್ತೋತ್ರೀಯವೆನಿಸಿಕೊಳ್ಳುತ್ತದೆಂಬುದನ್ನು ತಿಳಿಸ ಲಾಗಿದೆ. ಛನ್ದಸ್ಸಿನಲ್ಲಿ ಉತ್ತರಪದಲೋಪ ಎಂಬುದು ಆರನೆಯ ವಚನದಿಂದ ಸಿದ್ಧವಾಗಿರು ವುದರಿಂದ ಋಚಮಿತಿ ಎಂದಿದೆ. ಇಲ್ಲಿ ಸಾಮಗಳು ಮೂರಾಗಿ ವಿಭಕ್ತಗೊಂಡು ಒಂದೊಂದು ಸಾಮವೂ ಅಂಶಿಕವಾಗಿ ಒಂದೊಂದು ಋಕ್ಕಿನ ಮೇಲೆ ಗಾನ ಮಾಡಲ್ಪಡು ವುದೆಂದರೆ ಸ್ತುತಿಸುವುದು ಎಂಬುದು ಒಂದೇ ಸಾಮದಿಂದಾದಾಗಲೇ ಸ್ತೋತ್ರೀಯ ವೆನಿಸಿಕೊಳ್ಳುತ್ತದೆ ಅದು ಸಾಮಾಂಶದಿಂದ ಕೈಗೂಡುವುದಿಲ್ಲ. ಗುಣಕಥನ ಪರವಾದ ವಾಕ್ಯವೇ ಸ್ತುತಿ ಎನಿಸಿಕೊಳ್ಳುವುದು. ಈ ವಾಕ್ಯ ಮೂರು ಋಚೆಗಳಿಂದಾದ ಒಂದು ಸಾಮ ದಿಂದಲೇ ಪೂರ್ಣವಾಗತಕ್ಕದ್ದು ಹೀಗಾಗಿ ಒಂದೇ ಸಾಮದಿಂದ ಆ ವಾಕ್ಯವು ಸಂಸ್ಕಾರ ಗೊಳಿಸಲ್ಪಟ್ಟ ಋಕ್ಕಿನಿಂದಲೇ ಸಾಮಗಾನದ ಅಭ್ಯಾಸ ಸಿದ್ಧಿಸುವುದು.

ಸಾಮಶಬ್ದದಿಂದ ಸ್ವರಸ್ತೋಭಾದಿಗಳಲ್ಲದೆ ಅವಕ್ಕೆ ಆಧಾರವಾದ ಮೂರೂ ಋಚೆಗಳೂ ಗ್ರಾಹ್ಯವಾಗತಕ್ಕದ್ದು, ಪರಸ್ಪರ ಬೇರೆಯಾಗಲಾರವು ಎಂಬ ತತ್ವ ಊಹ ರಹಸ್ಯಗಳಲ್ಲದೆ ಅನ್ಯಸಾಮಗಳಿಗೂ ಅನ್ವಯವಾಗುವುದು. ಹೀಗಾಗಿ ಎರಡನೆಯ ಮತ್ತು ಮೂರನೆಯ ಋಚೆಗಳಿಂದಲೇ ಸಾಮಗಾನದ ಆವರ್ತನ ಆಗುವುದರಿಂದ 'ಸಾಮಾನ್ತರತ್ವ' ಎಂಬುದಿರುವುದಿಲ್ಲ. ಋಕ್ ತ್ರಯಗಳಿಂದುಂಟಾದುದು ಎಂಬುದೇನೂ ವಿರುದ್ಧ ವಿಚಾರ ವಲ್ಲ. ಆದುದರಿಂದ ಪ್ರತಿ ಋಕ್ಕಿನೊಂದಿಗೂ ಪ್ರತ್ಯೇಕವಾದ ಸಾಮವೊಂದರಿಂದಲೇ ಸಮಾಪ್ತ ಮಾಡಬೇಕು ಎಂದರೆ - ಜೈ.ನ್ಯಾ.ವಿ. ೯.೨.೪ರಂತೆ ಮೂರು ಋಚೆಗಳಿಂದುದಯ ವಾದ ಸಾಮವನ್ನು ವಿಷಮ ಛನ್ದಸ್ಸಿನಿಂದಾಗಲೀ ಸಮ ಛಂದಸ್ಸಿನಿಂದಾಗಲೀ ಇಷ್ಟಬಂದಂತೆ ಯಾವುದೇ ಭಾವದಿಂದ ಸಾಮಗಾನ ಮಾಡಬಹುದೆಂಬುದು ಸರಿಯಲ್ಲ. ಇದನ್ನು ಶರ ಅಂದರೆ ಹಿಂಸೆ. ಲೇಶವೆಂದರೆ ಸ್ವಲ್ಪ. ಅಲ್ಪಹಿಂಸೆ ಎಂಬ ನಿಯಮಕ್ಕೆ ಒಳಪಡಿಸಲಾಗಿದೆ.

ಅಧಿಕ ಛಂದಸ್ಸಿನ ಯೋನಿಯಿಂದಾದ ಸಾಮವನ್ನು ನ್ಯೂನ ಛಂದಸ್ಸಿನೊಂದಿಗೆ ಗಾನಮಾಡಿದರೆ, ಸಾಮಭಾಗದಿಂದಲೇ ಅದನ್ನು ಪೂರ್ಣಗೊಳಿಸಿದರೆ ಉಳಿದ ಸಾಮ

ಭಾಗವು ಆಶ್ರಯದ ಅಭಾವದಿಂದ ಬಾಧಿತವಾಗುತ್ತದೆ. ಇಂತಹ ಸಂದರ್ಭದಲ್ಲಿ ಯೋನಿಗಿಂತ ಅಧಿಕ ಛಂದಸ್ಸಿನಲ್ಲಿ ಗಾನಮಾಡಿದರೆ ಸಾಮದ ಅಲ್ಪಭಾಗದಿಂದ ವಂಚಿತವಾಗಿ ಉಳಿದ ಋಕ್ಕಿನ ಭಾಗವು ಸಾಮ ರಹಿತವಾಗಿ ಉಳಿಯುತ್ತದೆ. ಹೀಗಾಗಿ ಸಮಾನ ಛಂದಸ್ಸಿನಲ್ಲೇ ಗಾನಮಾಡಬೇಕು. ಈ ಅಧಿಕರಣದ ಅಭಿಪ್ರಾಯವನ್ನು ಲಿಪಿ ಬದ್ಧಮಾಡಲು ಸಾಧ್ಯವಾಗುವುದಿಲ್ಲವಾಗಿ ಅಂತಹ ಒಂದು ಸಾಮವನ್ನು ನಿದರ್ಶನಕ್ಕಾಗಿ ಉದಾಹರಿಸಿ ವಿವರಿಸಲಾಗಿದೆ.

**ಉಚ್ಚಾತೇಜಾತ ....** । *ಸಾ. ಋ. ೬೭೨.* ॥ **ಸನ ಇನ್ದ್ರಾಯ ....** । *ಸಾ. ಋ. ೬೭೩* ॥ **ಏನಾವಿಶ್ವಾನಿ ....** । *ಸಾ. ಋ. ೬೭೪* ॥ ಈ ಮೂರು ಋಕ್ಕುಗಳ ಸಮುದಾಯದಿಂದ ಮೈದಳೆದಿರುವ ಆಮಹೀಯವೆಂಬ **ಉಚ್ಚಾತಾ .... ಸ್ತಾಷೇ ೨೩೩೪೫** ॥ *ಊಹ. ೧* ॥ ಸಾಮಗಾನದಲ್ಲಿ ಆಧಾರ ಭೇದದಿಂದ ಸ್ವರಸ್ತೋಭಾದಿಗಳ ಭೇದಗಳೂ ಸ್ಫುಟವಾಗಿವೆ. ಆಧಾರಭೂತವಾದ ಮೂರು ಋಚೆಗಳಲ್ಲಿ ಮೊದಲನೆಯದು ಗಾಯತ್ರೀ ಛಂದಸ್ಸಿನದೂ ಎರಡನೆಯದು ಬೃಹತೀ ಛನ್ದಸ್ಸಿನದೂ ಮೂರನೆಯದು ಜಗತೀ ಅಥವಾ ಬೃಹತೀ ಛನ್ದಸ್ಸಿನದೂ ಆಗಿದ್ದರೆ, ಎಲ್ಲೆಡೆಯೂ ಒಂದೇ ರೂಪದ ಗಾನವು ಅಸಂಬದ್ಧವಾಗುತ್ತದೆ. ಆದುದರಿಂದ ಮೂರೂ ಋಚೆಗಳಿಗೆ ಒಂದೇ ಛನ್ದಸ್ಸನ್ನು ಆಧಾರವಾಗಿ ಗ್ರಹಿಸಬೇಕೆಂಬ ಆಶಯದಿಂದ ಅಧ್ಯಯನ ನಡೆಯುತ್ತಿದೆ. ಉತ್ತರಾರ್ಚಿಕ ಗ್ರನ್ಥಪೂರ್ತ ಈ ಕ್ರಮವನ್ನೇ ಅನುಸರಿಸಿದೆ. ಸಾಮಗಾನದಲ್ಲಿ ಋಕ್ ಪಾಠಕ್ಕಾಗಿ ಛನ್ದಾರ್ಚಿಕ ಅಥವಾ 'ಪೂರ್ವಾರ್ಚಿಕ' ಮತ್ತು 'ಉತ್ತರಾರ್ಚಿಕ' ಎಂಬ ಗ್ರಂಥಗಳಿವೆ.

ಛನ್ದೋಗ್ರಂಥ ಮಧ್ಯದಲ್ಲಿ ಅನ್ತರ್ಭೂತವಾಗಿರುವ ಅರಣ್ಯಕದಲ್ಲೂ ಹಿಂದಿನ ವಿವರಣಕಾರರಾದ ಮಾಧವರೂ ಸಹ ಈ ಕ್ರಮವನ್ನೇ ವ್ಯಾವಹಾರಿಕವನ್ನಾಗಿ ಮಾಡಿರುವುದರಿಂದ ಮೂರಕ್ಕೂ ಛನ್ದಾರ್ಚಿಕವೆಂಬ ಸಾಮಾನ್ಯವಾದ ಒಂದೇ ಹೆಸರು ಪ್ರಚಲಿತವಾಗಿದೆ. ಛನ್ದಾರ್ಚಿಕದಲ್ಲಿ ಸಾಮಗಳ ಯೋನಿಭೂತ ಋಚೆಗಳನ್ನೇ ಪಠಿಸ ಲಾಗಿದೆ. ಉತ್ತರಾರ್ಚಿಕದಲ್ಲಿ ಮೂರು ಋಚೆಗಳ ಸೂಕ್ತಿಗಳು ಪಠಿತವಾಗಿವೆ. ತೃಚ ಎಂಬುದು ಲೌಕಿಕರೂಪವಾಗಿಲ್ಲವಾಗಿ ತ್ರ್ಯಚಮ್ ಎಂದೇ ವ್ಯವಹರಿಸುವುದು ಸೂಕ್ತ. ಆದರೂ '**ಸೂಕ್ತ**' ಎಂಬುದು ಯೋಗರೂಢಿಯಾಗಿದೆ ಎಂಬ ಅಭಿಪ್ರಾಯದಿಂದ ವ್ಯವಹರಿಸುವುದು ದೋಷವೇನಲ್ಲ. ಸಂಜ್ಞಾ ಶಬ್ದವಾಗಿ ಸಂಗ್ರಾಹ್ಯವೇ ಆಗಿದೆ.

ಅಲ್ಲಿ ತ್ಯಚಗಳು ಸೂಕ್ತಗಳು ಎಂಬ ವಾದ ಪ್ರಾಯಶಃ ಇದ್ದೇ ಇರುತ್ತದೆ. ಕೆಲವು ಸೂಕ್ತಗಳಲ್ಲಿ ಎರಡರಿಂದ ಹನ್ನೆರಡು ಋಚೆಗಳು ಇವೆ. ಪ್ರಥಮ ಪ್ರಪಾಠಕ ದ್ವಿತೀಯಾರ್ಧದ ೧೩ನೆಯದಾದಿಯಾಗಿ ಮೂರು ಸೂಕ್ತಗಳಲ್ಲಿ ಎರಡೆರಡೂ ನಾಲ್ಕನೆಯ ಪ್ರಪಾಠಕದ

ದ್ವಿತೀಯಾರ್ಧದ ಪ್ರಥಮ ಸೂಕ್ತದಲ್ಲಿ ಹನ್ನೆರಡೂ ಇವೆ. ಈ ತೃಚೆಗಳಲ್ಲೊಂದೊಂದರಲ್ಲೂ ಮೊದಲನೆಯದು ಛಂದೋಗತ ಯೋನಿಋಕ್ಕಾಗಿದ್ದು ಅನಂತರದಲ್ಲಿ ಉಳಿದೆರಡು ಪಠಿತವಾಗಿದೆ. ಹೀಗಿರುವಾಗ ರಥಂತರ ಸಾಮವನ್ನು ಉತ್ತರಯೋನಿಯಲ್ಲೂ ಇನ್ನೊಂದನ್ನು ಅದರ ನಂತರದ ಯೋನಿಯಲ್ಲೂ ಗಾನಮಾಡಿದರೆ ಉತ್ತರದಲ್ಲಿ **'ದ್ವಿವಿಧ'** ಉಂಟಾಗುತ್ತದೆ. ರಥಂತರ ಸಾಮವು ಛನ್ದೋ ಗ್ರಂಥಗಳಲ್ಲಿ **ಅಭಿತ್ವಾಶೂರನೋ** ಎಂಬ ೨೩೩ನೆಯ ಋಕ್ಕಿನ ಯೋನಿಯಲ್ಲಿ ಪಠಿತವಾಗಿದೆ. **ತ್ವಾಮಿದ್ಧಿಹವಾಮಹೇ** ಬೃಹದಾದಿ ಸಾಮಗಳು ೨೩೪ನೆಯ ಋಕ್ಕಿನ ಯೋನಿಯಲ್ಲಿ ಪಠಿತವಾಗಿವೆ.

ಉತ್ತರಾರ್ಚಿಕದಲ್ಲಿ ರಹ.ಸಾಮ. ೧. ಆಭಿತ್ವಾಶೂರನೋ ಸೂಕ್ತದಲ್ಲಿ ಅದರ ಋಕ್ಕಿನ ಮೇಲೆ ಯೋನಿ ರಹಿತವಾದ **'ನತ್ವಾ ವಾಜ್ ಅನ್ಯ ಇತ್ಯೇಷಾಜ್'** ಸಾಮ ಪಠಿತವಾಗಿದೆ, ಯಾವುದೇ ಸಾಮವು ಅನ್ವಯವಾಗುವುದು. ಈ ಗಾನವು ಗೇಯ ಗ್ರಂಥಗಳಲ್ಲಿಲ್ಲದಿದ್ದರೆ ಛನ್ದೋಗ್ರಂಥದ ಪಾಠವೇ ಆಗಬಹುದು. ಇಲ್ಲಿ ಛಂದೋಗ್ರಂಥದಲ್ಲಿಲ್ಲದ ಸಾಮಾನ್ತರ ಯೋನಿ ಹಾಗೂ ಆಭಿತ್ವಾ ಶೂರನೋ ಋಚೆಯ ಯೋನಿ ಹೀಗೆ ಎರಡು ಯೋನಿಗಳಾಗುತ್ತವೆ. ಉತ್ತರಾರ್ಚಿಕಕ್ಕೆ ಹೊರತಾದ ತೃಚಗತವಾದ ಎರಡನೆಯದು ಮೂರನೆಯದು ನಂತರದ್ದಾಗುತ್ತದೆ. ಇಲ್ಲಿ ವಿಶೇಷ ನಿಯಮವಿಲ್ಲದ್ದರಿಂದ ಈ ಎರಡರಲ್ಲಿ ಯಾವುದೋ ಒಂದು ಉತ್ತರದ/ ನಂತರದ ಗಾನವಾಗುತ್ತದೆ ಎಂದರೆ ಅದು ಸರಿಯಲ್ಲ. ಉತ್ತರದ್ದು ಎಂದರೆ ಬುದ್ಧಿ ಪೂರ್ವಕವೆಂದಾಗುತ್ತದೆ. ಇದಕ್ಕೆ ಪ್ರತಿಸ್ಪರ್ಧಿಯಾದುದಿಲ್ಲವಾದುದರಿಂದ ಹೀಗಾಗಿದೆ. ಹಿಂದೆ ಪಠಿತವಾದ ಯೋನಿ ಋಚೆಗಳಿಗೆ ನಂತರದ್ದು ಎನ್ನುವುದನ್ನು ತಿಳಿಸುವಲ್ಲಿ ವಿಳಂಬವಾಗುವುದರಿಂದ ದುರ್ಬಲವಾಗುತ್ತದೆ. ಈ ರೀತಿ ನಂತರದ ಛಂದಸ್ಸುಗಳಲ್ಲಿ ಪಠಿತವಾಗಿರುವುದರಿಂದಲೂ ಸ್ವಯೋನಿಯು ನಂತರ ಭಾವಿಸಲ್ಪಡುವುದರಿಂದಲೂ ಸಾಮಾನ್ತರ ಯೋನಿಗಳಲ್ಲಿ ಎರಡು ಋಚೆಗಳಿರುವುದರಿಂದಲೂ ಹೀಗಾಗಿವೆ. ತೃಚಗಳ ಕ್ರಮದಲ್ಲೂ ದ್ವಿತೀಯಾ ತೃತೀಯಾ ಎಂಬ ಸಂಜ್ಞೆ ಇದೆ. ಹೀಗಾಗಿ ಅವುಗಳಿಂದಲೇ ಗಾನ ಸಂಭವಿಸುತ್ತದೆ. ಹೀಗಿರುವುದರಿಂದ ಹಿಂದಿನ ಅಧಿಕರಣದಲ್ಲಿ ನಿರ್ಣಯಿಸಿದಂತೆ ಒಟ್ಟಾಗಿ ಸಮಷ್ಟಿಯಿಂದ ಸಾಮಗಾನವು ಅನುಗ್ರಹಿಸಲ್ಪಟ್ಟಿರುತ್ತದೆ. ನಂತರದಲ್ಲಿ ಎರಡೂ ಗಾನಗ್ರಂಥಗಳ ಹಾಗೂ ಅವಕ್ಕೆ ಆಧಾರಭೂತವಾದವುಗಳೆಂದು ಎರಡು ಬಗೆಯ ಗ್ರಂಥಗಳನ್ನು ನಿರ್ದೇಶಿಸಲಾಗಿದೆ. ಸಂಹಿತಾ ಗ್ರಂಥಗಳಲ್ಲಿ ಋಕ್‌ಮಯವಾದುದು ಅರ್ಚಿಕವೆಂದೂ ಛನ್ದೋಮಯವಾದುದು ಛನ್ದ ಎಂದೂ ಸಾಧಾರಣ ನಾಮ. ಅಲ್ಲೂ ಸಹ ಒಂದಕ್ಕೆ ಉತ್ತರವೆಂದು ವಿಶೇಷವಿದೆ ಇನ್ನೊಂದಕ್ಕೆ ಅದಿಲ್ಲ.

ಆದರೆ ತೃಚೆ ಮೂರು ಋಚೆಗಳಿಂದಾದ ಸೂಕ್ತಗಳಲ್ಲಿ ಮೊದಲನೆಯದು ಯೋನಿಭೂತವಾದುದರಿಂದ ಆ ಹೆಸರಿನ ಛನ್ದೋ ಗ್ರಂಥಕ್ಕೆ ಯೋನಿಗ್ರಂಥವೆಂದು ಅಧ್ಯಾಪಕರಲ್ಲಿ ಪ್ರಸಿದ್ಧವಾಗಿದೆ. ಉಳಿದ ತೃಚ ಸಂಘರೂಪವಾದ ಗ್ರಂಥಕ್ಕೆ ಉತ್ತರಾರ್ಚಿಕ ಎಂಬ ನಾಮಧೇಯ ಸಮಾಖ್ಯಾನ ಪದದಿಂದ ಪ್ರಸಿದ್ಧಿಯಾಗಿವೆ. ಈ ಗ್ರಂಥಗಳೇ ಕರ್ಮಾಂಗದ ಸಮರ್ಪಕ ವಾದ ಪ್ರಕರಣಗಳನ್ನೊಳಗೊಂಡಿವೆ. ಪಂಚದಶ ಸಪ್ತದಶ ಸ್ತೋಮಗಳು ಈ ತೃಚೆ ಗಳಿಂದಲೇ ಉತ್ಪನ್ನವಾಗಿವೆ. ಆದುದರಿಂದ ಉತ್ತರಾರ್ಚಿಕ ತೃಚಂತರ್ಗತವಾದ ದ್ವಿತೀಯ ತೃತೀಯ ಋಚೆಗಳಲ್ಲಿ ಇದನ್ನು ಊಹಿಸಬೇಕು. ಜೈ.ನ್ಯಾ.ವಿ. ೯.೨.೫ರಂತೆ ದ್ವಾದಶಾಹದ ನಾಲ್ಕನೆಯ ದಿನ ತ್ರೈಶೋಕವೆಂಬ ಹೆಸರಿನ ಊಹ.೭೩. ಸಾಮಗಾನ ಮಾಡುವುದು ವಿಹಿತವಾದುದ್ದು.

ತಾಂ.ಮ.ಬ್ರಾ. ೧೨.೧೦.೨೦ರಲ್ಲಿ ತ್ರಿಶೋಕದಿಂದ ದ್ರಷ್ಟವಾಗಿರುವ ತ್ರೈಶೋಕ ಊಹ ೭೩. ಸಾಮವು ಬ್ರಹ್ಮಸಾಮವಾಗಿದ್ದು ಬ್ರಹ್ಮಣ ಸ್ತೋತ್ರವನ್ನು ಪೃಷ್ಠಸ್ತೋತ್ರವಾಗಿ ನಿರ್ವಹಿಸಬೇಕೆಂದಿವೆ - ಈ ಸಾಮವು ಜಗತೀ ಛಂದಸ್ಸಿನ ವಿಶ್ವಾಃ ಪೃತನಾ ಎಂಬ ೯೩೦ನೆಯ ಯೋನಿ ಋಕ್‌ನ ಅತಿ ಜಗತೀ ಛಂದಸ್ಸಿನಲ್ಲಿ ಉದಯವಾಗಿವೆ. ಈ ೩೭೦ನೆಯ ತೃಚೆಯಲ್ಲಿ ಬೃಹತೀ ಛಂದಸ್ಸಿನ ನೇಮಿನಮನ್ತಿ ೯೩೧. ಸಮುರೇಭಾಸೋ ೯೩೨, ಋಚೆಗಳ ಯೋನಿಯಲ್ಲೂ ಗಾನ ಮುಂದುವರೆಯುತ್ತದೆ. ಇಲ್ಲಿ ಬೃಹತೀ ಛಂದಸ್ಸನ್ನು ಉಪೇಕ್ಷಿಸಿ ಉತ್ಪತ್ತಿಸಿದ್ಧ ಅತಿ ಜಗತೀ ಛಂದಸ್ಸಿನಲ್ಲಿಯೇ ಮೂರೂ ಋಕ್ಕುಗಳ ಮೇಲೆ ಗಾನವನ್ನು ಮಾಡಲಾಗುತ್ತದೆ. ಅಂದರೆ ಪೂರ್ವನಿರ್ಣಯದಂತೆ ಸಮಷ್ಟಿಯಾಗಿ ಸಾಮಗಾನವು ಅನು ಗೃಹೀತವಾಗಿದೆ. ಅತಿ ಜಗತೀಯಲ್ಲಿ 'ಸ್ತೋತ್ರ' ಮಾಡುತ್ತಾರೆ ಎಂದೇ ಪರಂಪರೆ ಇದೆ. ತಾಂ.ಮ.ಬ್ರಾ. ೧೨.೧೦.೨೧ರಲ್ಲಿ ಅಕ್ಷರಗಳ ಜಗತೀ ಛಂದಸ್ಸನ್ನು ಮೀರಿ ವಿಶ್ವಾಪೃತನಾ ಇತ್ಯಾದಿಗಳಿಂದ ಸ್ತೋತ್ರ ಮಾಡುತ್ತಾರೆಂದಿದೆ. ಇದಕ್ಕೆ ಅತಿ ಜಗತಿ ಬಹಳವಾಗಿರುವುದೇ ಕಾರಣವಾಗಿದೆಯೇ ಹೊರತು ಅನ್ಯಕಾರಣವಿಲ್ಲವೆಂದರೆ ಅದು ಸರಿಯಲ್ಲ. ಉತ್ತರ ಋಚೆಗಳ ಮೇಲೆ ಗಾನ ಮಾಡಬೇಕೆಂದು ವಿಧಿಸಿದಾಗ ಅದರ ಕುರುಹಾದ ಉತ್ತರಾ ಶಬ್ದದಿಂದ ಅಧ್ಯಯನದಲ್ಲಿ ಬೃಹತೀ ಛಂದಸ್ಸಿನ ಪ್ರಾಮುಖ್ಯತೆಯಿಂದಲೂ ವೇದದಲ್ಲೇ ಬೃಹತ್ವದ ಗುರುತಿರುವುದರಿಂದಲೂ ಒಟ್ಟಿಗೆ ಒಂದೇ ಎಂಬಂತೆ ಗಾನ ಮಾಡುವುದು ಎಂಬ ನ್ಯಾಯ ಬಲಯುತವಾಗಿರುವುದೆಂಬುದು ಗ್ರಾಹ್ಯವಾಗಿ ಜಗತೀ ಛಂದಸ್ಸು ದೊಡ್ಡದಾಗಿದ್ದು ಬೃಹತಿ ಛಂದಸ್ಸನ್ನೂ ಒಳ ಗೊಳ್ಳಬಲ್ಲದು ಎಂದಾಗುತ್ತದೆ.

ಏಕವಿಂಶಸ್ತೋಮಗಳು ಇಲ್ಲಿ ವಿಹಿತವಾಗಿದ್ದು ಅದರ ಸಿದ್ಧಿಗಾಗಿ ಅತಿಜಗತೀ ಛಂದಸ್ಸಿನಿಂದ ಒಡ್ಯಾಣ/ ಡಾಬಿನಂತೆ ಆವರ್ತನೆ ಮಾಡುವುದರಿಂದ ತ್ರೈಶೋಕ ಸಾಮದ

ಬೃಹತ್ತನ್ನು ಊಹಿಸಬಹುದು - ಜೈ.ನ್ಯಾ.ಮಿ. ೯.೨.೬., ತಾಂ.ಮ.ಬ್ರಾ. ೩.೭.೫., ರಂತೆ ಬೃಹದ್ರಥನ್ತರ ಗಾನಗಳು ಒಂದೇ ಛನ್ದಸ್ಸಿನಲ್ಲೂ ಬೃಹತ್ ಸಾಮ ಬೃಹತೀ ಛಂದಸ್ಸಿನದಲ್ಲೂ ರಥನ್ತರ ಕಕುಪ್ ಛನ್ದಸ್ಸಿನಲ್ಲೂ ಆಗಿದೆ. ಬೃಹದ್ರಥನ್ತರ ಸಾಮಗಳೆರಡೂ ಇತರ ಸಾಮಗಾನ ಗಳಂತೆ ಒಂದೇ ಛಂದಸ್ಸಿನವಾಗುವುದಿಲ್ಲ. ಇದಕ್ಕೆ ಆಶ್ರಯವಾಗಿರುವ ಮೊದಲನೆಯದು ಬೃಹತೀ ಛಂದಸ್ಸಿನದೂ ಎರಡನೆಯದು ಮತ್ತು ಮೂರನೆಯದು ಕಕುಪ್ ಛನ್ದಸ್ಸಿನವೂ ಆಗಿವೆ. ಅನ್ಯ ವಾಮದೇವ್ಯಾದಿ ಸಾಮಗಳ ಆಶ್ರಯಭೂತವಾದ ಮೂರೂ ಋಚೆಗಳು ಮುಂದಿನ ಗ್ರಂಥದಲ್ಲಿ ಒಂದೇ ಛಂದಸ್ಸಿನವಾಗಿರುತ್ತವೆ. ಜೈ.ನ್ಯಾ.ವಿ.೯.೨.೪ ರಲ್ಲಿ ಸಂಶಯ ವನ್ನು ಚರ್ಚಿಸಿ '**ಸಮಾಸುಗಾಯೇತ್**' ಎಂದು ನಿರ್ಣಯಿಸಲಾಗಿದೆ.

ಮುಂಚಿನದು '**ಬೃಹತಿ**' ನಂತರದ್ದು ಕಕುಪ್, ಛಂದಸ್ಸಿನಿಂದ ಉದಯವಾಗಿದೆ ಯೆಂದು ತಾಂ.ಮ.ಬ್ರಾ. ತಿಳಿಸುತ್ತಿದೆ - ಬೇರೆ ಬೇರೆ ಛಂದಸ್ಸಿನಲ್ಲೇ ಗಾನ ಮಾಡತಕ್ಕದ್ದು ಅಲ್ಲಿ ರಥನ್ತರಕ್ಕೆ ಆಶ್ರಯವಾದವು ಮೂರು ಋಕ್ಕಗಳೆಂಬುದನ್ನು ಉತ್ತರ ಗ್ರಂಥದಲ್ಲಿ ತಿಳಿಸಿದೆ. ಅದು ಪ್ರಗಾಥಕ್ಕೆ ಆಶ್ರಯವಾಗಿದೆ. ಪ್ರಗ್ರಥನದಿಂದ '**ಪ್ರಗಾಥ**' ಎಂಬ ಪದವೇ ತಾತ್ಪರ್ಯವನ್ನು ಸ್ಪಷ್ಟಪಡಿಸುತ್ತದೆ - ಅದು ಎರಡು ಋಕ್‌ಗಳಿಂದ ಉದಯವಾಗಿ ಅಭಿತ್ವಾ ಶೂರನೋ ಋ. ೬೮೦. ಬೃಹತೀ ಛಂದಸ್ಸಿನದೂ **ನತ್ವಾವಾಜ್ ಅನ್ಯೋಂ** ೬೮೧ ಪಙ್ಕ್ತಿ ಛಂದಸ್ಸಿನದೂ ಆಗಿದೆ. ಇಪ್ಪತ್ತನಾಲ್ಕು ಅಕ್ಷರಗಳು ವಿಷ್ಟರಾದಿ ಭೇದದಿಂದ ಹೆಚ್ಚು ಕಡಿಮೆಯಾಗುತ್ತವೆ. ಅದಾಗ್ಯೂ ಪಙ್ಕ್ತಿ ಛಂದಸ್ಸಿನಲ್ಲಿರುವ ಅದನ್ನು ತೆಗೆದುಕೊಂಡು '**ದಾಶತಾಯೀ ಗತೇ**' ನಿಯಮದಂತೆ ಹತ್ತು ಅಕ್ಷರಗಳಿಂದಾದ ಚರಣದ ದಾಶತಯೋ ಪಙ್ಕ್ತಿಯಲ್ಲಿ ಕರ್ತವ್ಯ ನಿರ್ವಹಿಸಲು ಇದೆ. ಯೋತಿ ಪಾದ ಎಂಬುದು ನಿರುಕ್ತ ಸಮ್ಮತ ವಾದುದು. ಉತ್ಪನ್ನ ವಾದ ಕಕುಪ್ ಛಂದಸ್ಸಿನ ಎರಡು ಋಕ್ಕುಗಳನ್ನು ಗ್ರಹಿಸಲಾಗಿದೆ. ದಶತಿ ಇಲ್ಲಿ ಒಂದೇ ಪಙ್ಕ್ತಿ ಛಂದಸ್ಸಿನ ವಿಭಜನೆಯಿಂದ ಎರಡು ಕಕುಪ್‌ಗಳನ್ನು ಪಡೆದಿರುವ ಕಾರಣ ಉತ್ಪತ್ತಿ ಕಕುಭೌ ಎಂಬ ಹೆಸರನ್ನು ಪಡೆದಿದೆ. ಹೀಗೆಯೇ ಉತ್ಪತ್ತಿ ಬೃಹತ್ ಇತ್ಯಾದಿಗಳನ್ನು ತಿಳಿಯಬೇಕು. ಹಾಗಿಲ್ಲದಿದ್ದರೆ ಶ್ರುತಿ ಪ್ರದರ್ಶಿಸಿರುವುದು ಅನರ್ಥವೆನಿಸಿ ಬಿಡುತ್ತದೆ - ಸಮುಚ್ಚಯವಾಗಿ ಉದಾಹೃತವಾಗಿರುವ ಕಕುಭಾವುತ್ತರೇ ವಾಕ್ಯದಿಂದ ರಥನ್ತರಕ್ಕೆ ಆಶ್ರಯವಾಗಿ **ಕಕುಪ್** ಛಂದಸ್ಸುಗಳೆರಡು ಋಚೆಗಳನ್ನು ಯೋಜಿಸಿದರೆ ಮಾತ್ರ **ಕಕುಬುತ್ಪತ್ತಿ** ಎಂಬುದಕ್ಕೆ ಅರ್ಥವಿರುತ್ತದೆ. ಹಾಗಿಲ್ಲದಿದ್ದರೆ ವಾಕ್ಯವೇ ವ್ಯರ್ಥವಾಗುತ್ತದೆ. ಆದರೆ ವೇದದಲ್ಲಿ ಹೇಳಿರುವಂತೆ ಒಂದೇ ಪಙ್ಕ್ತಿಯಿಂದ ಸ್ವೀಕರಿಸಿದರೆ ಎರಡೂ ಋಕ್ಕುಗಳಿಂದ ಆಗಿರುವ ಒಂದು ಸಾಮವನ್ನು ಪಡೆಯುವ ಲಾಭಕ್ಕೆ ಭಾಗಿಗಳಾಗುತ್ತೇವೆ.

ತೃಚೆಗಳಿಂದ ಸ್ತೋತ್ರೀಯಗಳುದಯವಾಗುತ್ತದೆಂಬ ವಚನವು ವಿರುದ್ಧವಾಗುವುದರಿಂದ ರಥನ್ತರ ಸಾಮದಲ್ಲಿ ಎರಡು ಕಕುಭಾವುತ್ತರೇ ಗ್ರಹಿಸುವುದು ನ್ಯಾಯ ಸಮ್ಮತವು. ಅಂದರೆ **ಅಭಿತ್ವಾ ಶೂರ....** ೬೮೦ ಋಕ್. ಬೃಹತೀನೋ ಛನ್ದಸ್ಸಿನ ಪ್ರಥಮ ಸ್ಥಾನೀಯವಾಗಿರುತ್ತದೆ. ನಂತರದ ಪಜ್ಙ್ತಿ ಛಂದಸ್ಸಿನ ನತ್ವಾ ವಾ ಎಂಬ ೬೮೧ನೆಯದನ್ನು ಕಕುಪ್ ಛಂದಸ್ಸಿನ ಎರಡು ಋಕ್‌ಗಳಾಗಿ ವಿಭಜಿಸಿದಾಗ ಮುಂಚಿನದು ದ್ವಿತೀಯ ಸ್ಥಾನೀಯ ಋಕ್ ಆಗಿಯೂ ನಂತರದ್ದು ತೃತೀಯಸ್ಥಾನದ ಋಕ್ ಆಗಿಯೂ ಪರಿವರ್ತಿತವಾಗುತ್ತದೆ. ಈ ನ್ಯಾಯವೇ '**ಬೃಹತ್ಸಾಮಕ್ಕೂ**' ಅನ್ವಯ ವಾಗುತ್ತದೆ ಎಂದರೆ ಹೀಗೆ ಹೇಳಲಾಗುತ್ತದೆ - ಬೃಹತ್ ಸಾಮದಲ್ಲಿ ಪಜ್ಙ್ತಿ ಛಂದಸ್ಸಿನಿಂದಲೇ '**ಕಕುಪ್**' ಗ್ರಥನೀಯವಾಗಿದೆ. **ಅಭಿತ್ವಾ ಶೂರನೋ** - ಬೃಹತಿಯ ಪ್ರಥಮ ಸ್ತೋತ್ರೀಯವನ್ನು ವಿಕೃತಮಾಡದೆ ರಥನ್ತರವನ್ನು ಗಾನ ಮಾಡತಕ್ಕದ್ದು ನಂತರ ಆ ಋಕ್ಕಿನ ನಾಲ್ಕನೆಯ ಪಾದವನ್ನು ಪುನಃ ಪಜ್ಙ್ತಿ ಛಂದಸ್ಸಿನ ಪೂರ್ವಾರ್ಧದೊಂದಿಗೆ ಯೋಜಿಸುವುದು. ಈ ಇಪ್ಪತ್ತೆಂಟು ಅಕ್ಷರದ ಮೂರು ಪಾದಗಳು ಎರಡನೆಯದು ಸ್ತೋತ್ರೀಯವಾಗಿದ್ದು ಕಡೆಯ ಕಕುಪ್ ಪಾದವು ಇದರದೇ ಆಗಿರುತ್ತದೆ. ಈ ಕಡೆಯ ಪಾದವನ್ನು ಪಜ್ಙ್ತಿಯ ಉತ್ತರಾರ್ಧದೊಂದಿಗೆ ಕ್ರಮವಾಗಿ ಸೇರಿಸಿದರೆ ಮೂರನೆಯ ಸ್ತೋತ್ರೀಯವಾಗುತ್ತದೆ ಹಾಗೂ ಎರಡನೆಯದು ಕಕುಪ್ ಎನಿಸಿಕೊಳ್ಳುತ್ತದೆ.

ಪ್ರಗ್ರಥನ ಪ್ರಕಾರದಿಂದಾಗಿ ಎರಡೂ ಋಕ್ಕುಗಳಿಂದ ವೇದವು ತಿಳಿಸುವ '**ತೃಚೆಯಿಂದ ನಿಷ್ಪನ್ನ ವಾಗಿದೆ**' ಎಂಬ ವಚನಕ್ಕೆ ಭಂಗವಾಗುವುದಿಲ್ಲ. ಈ ಗ್ರಥನದಲ್ಲಿ '**ಪುನಃ ಪದಾ**' ಎಂಬುದು ಶ್ರೌತೋಕ್ತಿಯಾಗಿದೆ. ಬೃಹತಿಯಲ್ಲಿ ಪುನರಾರಂಭವಾಗುವ ಪದವು ಹಸುವು ತನ್ನ ಕರುವನ್ನು '**ಹಿಂ**' ಶಬ್ದದಿಂದ ಸ್ವಾಗತಿಸುವಂತಿರುತ್ತದೆ - ಅಂದರೆ ಬೃಹತಿಯಲ್ಲಿ ಸೇರಿಸುವ ಆ ಪುನಃ ಪದವು ಪ್ರತಿಷ್ಠಿತವಾಗಿ ಸ್ಥಿರವಾಗಿರುತ್ತದೆ. ಅದೂ ಸಹ ಅನ್ಯ ಋಕ್‌ನ ಚತುರ್ಥ ಪದ ಸೇರಿರುವುದರಿಂದ ಪುನಃ ಪುನಃ ಉಚ್ಚರಿಸಲ್ಪಡುತ್ತದೆ. ಅನಂತರ ಆ ಬೃಹತಿಯ ಪುನಃ ಪದವು ಋಕ್ ಮಾತಾ ಎಂಬಂತೆ ಮಾತೃಸ್ಥಾನದಲ್ಲಿದ್ದು, ಅದರ ಪಾದವೂ ಕರುವಿನ ಸ್ಥಾನದಲ್ಲಿರುತ್ತದೆ. ಹೀಗಿರುವುದರಿಂದ ಇಲ್ಲಿ ಉದ್ಗಾತೃವು ನಾಲ್ಕನೆಯ ಪಾದವನ್ನು ಪುನಃ ಆರಂಭಿಸುತ್ತಾರೆ.

ಆದುದರಿಂದಲೇ ಕರು ತಾಯಿಹಸುವನ್ನು ನೋಡಿ ಸಂತೋಷದಿಂದ '**ಹಿಂ**' ಎಂದು ಶಬ್ದಮಾಡುತ್ತದೆ. ಕೇವಲ ಅಂಗಮಾತ್ರದಿಂದ ಅಚ್ಚುಕಟ್ಟಾಗಿ ಸೇರಿರುವುದಲ್ಲದೆ '**ಕಾಕುಭಃ ಪ್ರಗಾಥಃ**' ಎಂದು ಸ್ಮರಿಸಿಕೊಳ್ಳುವಂತಹ ಪ್ರಸಿದ್ಧ ಸಾಮಗಾನ ಗಳಾಗುತ್ತವೆ. '**ಪ್ರಗಾಥ**' ಶಬ್ದದ ಅರ್ಥ ಪರ್ಯಾಲೋಚಿಸಿದಾಗಲೂ - ಪರಸ್ಪರ ಬಂಧನವಾಗಿರುವುದು ಗಮನಕ್ಕೆ

ಬರುತ್ತದೆ - ಪ್ರಕರ್ಷೇಣ ಗ್ರಥನಂ ಯತ್ರ ಸ ಪ್ರಗಾಥಃ ಪ್ರಕರ್ಷವೆಂಬ ಹೆಸರು ವೇದದ ಋಕ್‌ಪಾಠಕ್ಕಿಂತ ಅಧಿಕವಾದದ್ದು ಎಂಬರ್ಥದಲ್ಲಿ ಅದೂ ಹಿಂದೆ ತಿಳಿಸಿದಂತೆ ಪಾದಾಭ್ಯಾಸ ಪುರಸ್ಸರವಾಗಿ ಇನ್ನೊಂದು ಋಕ್ಕನ್ನು ಸೇರಿಸುವುದರಿಂದ ಮಾತ್ರ ಸಾಧ್ಯವಾಗುವುದರಿಂದಲೇ ಕಕುಭಗಳೆರಡುಂಟಾಯಿತೆನ್ನಲಾಗುವುದಿಲ್ಲ. ಹಾಗಾದರೆ ಪ್ರಗಥನದಿಂದ ಎರಡು ಕಕುಪ್ ಗಳನ್ನು ಪಡೆದು ನಂತರ ಮೂರರಿಂದಲೂ ರಥನ್ತರಂ ಗಾನ ಮಾಡಬೇಕು. ಇದನ್ನು ರಹಸ್ಯ.೧. ಗಾನ ಮಾಡುವ ಕ್ರಮದಿಂದ ತಿಳಿಯಬಹುದು. ಹೀಗೆಯೇ ಬೃಹತ್ಸಾಮವನ್ನೂ ರಹಸ್ಯ.೫. ಗಾನ ಮಾಡಬೇಕು.

ಹೀಗಿರುವಲ್ಲಿ ಪಙ್ಕ್ತಿಯಲ್ಲಿನ ಪಾಠ ಅರ್ಥವತ್ತಾಗುತ್ತದೆ. ಕಕುಬುತ್ಪತ್ತಿ ವ್ಯರ್ಥ ವೆಂದೇನೂ ಶಂಕಿಸಬಾರದು. ವಾಚಸ್ತೋಮದಲ್ಲಿ ಅದರ ಉಪಯೋಗವಿದೆ. ಪ್ರಗ್ರಥನ ದಿಂದ ಅನುತ್ಪತ್ತಿ ಎಂಬುದಿರುವುದಿಲ್ಲ. ಜೈ.ನ್ಯಾ.ಮಾ. ೯.೨.೬ರ ಎರಡನೆಯ ವರ್ಣಕದಲ್ಲಿ ಯೌಧಾಜಯಮ್ ಊಹ.೩. ರೌರವಮ್ ಊಹ.೨., ಬೃಹತ್ ರಹ.೫., ಸಾಮಗಾನ ಗಳಲ್ಲಿ ವೇದದಿಂದಲೇ ಆಗಲೀ ಗ್ರಥನದಿಂದಾಗಲೀ ಉಂಟಾಗಿರುವ ಷಷ್ಟಿ ತ್ರಿಷ್ಟುಭೋ ಮಧ್ಯಂದಿನ ಸವನ ಉದಾಹರಣೆಯಿಂದ ತಿಳಿಸಲಾಗುತ್ತಿದೆ.

ರೌರವ ಊಹ.೨. ಮತ್ತು ಯೌಧಾಜಯ ಊಹ.೩. ಸಾಮಗಳು. ಬೃಹತೀ ಛಂದಸ್ಸಿನ ತೃಚೆಗಳಿಂದುದಯವಾಗಿವೆ ಎಂದು ತಾಂ.ಮ.ಬ್ರಾ. ೭.೩.೧೪-೨೦ ತಿಳಿಸುತ್ತಿದೆ. ಅಂದರೆ ರೌರವ ಯೌಧಾಜಯ ಸಾಮಗಳಿಗೆ ಬೃಹತೀ ಛಂದಸ್ಸಿನ ತೃಚೆ ಆಶ್ರಯವಾಗಿದೆ. ಎರಡೂ ಸಾಮಗಳಿಗೆ ಪುನಾನಃ ಸೋಮಧಾರಯ. ೬೭೫. ಒಂದೇ ಋಕ್ ಆಧಾರವಾಗಿದ್ದು ಸ್ವರ ಸ್ತೋಮಾದಿ ಭೇದದಿಂದ ಹೆಸರು ಬೇರೆಬೇರೆಯಾಗಿವೆ. ತಾಂ.ಮ.ಬ್ರಾ. ೭.೪.೧೪-೨೪ ಮತ್ತು ಊಹದ ೧,೨-೩ನೆಯ ಸಾಮಗಳನ್ನು ಗಮನಿಸಿದರೆ ಇದು ಸ್ಫುಟವಾಗುತ್ತದೆ - ಮುಂದೆ ಈ ಎರಡೂ ಸಾಮಗಳಿಗೆ ಒಂದು ಪ್ರಗಾಥವು ಆಶ್ರಯ ವಾಗಿದೆ. ಮೊದಲನೆಯದು ಬೃಹತೀಛಂದಸ್ಸಿನ ಪುನಾನಃ ಸೋಮ ೬೭೫.ಋಕ್. ಎರಡನೆ ಯದು ವಿಷ್ಟಾರಪಙ್ಕ್ತಿಯ ದುಹಾನ ಊಧರ್ದಿವ್ಯಂ - ೬೭೬.ಋಕ್. ಇವುಗಳಲ್ಲಿನ ಒಂದರ ವಿಷ್ಟಾರಪಙ್ಕ್ತಿಯದನ್ನು ತೆಗೆದುಕೊಂಡು ಅದರ ಸ್ಥಾನದಲ್ಲಿ ಉತ್ಪತ್ತಿ ಬೃಹತ್ ಎಂಬೆರಡು ಋಚೆಗಳನ್ನು ಬರಮಾಡಿಕೊಂಡಿದೆ ಎಂಬುದು ಪೂರ್ವಪಕ್ಷ - ಒಂದೇ ಋಕ್ಕನ್ನೇ ಬೌದ್ಧಿಕ ವಾಗಿ ಎರಡೆಂದು ಗ್ರಹಿಸುವುದು ಎಂದರ್ಥ. ಹೀಗೆಯೇ ತ್ರ್ಯಚಗಳಲ್ಲಿ ಉದಯವಾದ ಸಾಮ ಗಳನ್ನು ಮೂರುಬಾರಿ ಅಭ್ಯಾಸ ಮಾಡು ವುದೂ ಸುಲಭ.

ಬೃಹತೀ ವಿಷ್ಟಾರಪಙ್ಕ್ತಿಗಳೆರಡರ ಪ್ರಗಥನ ವಿಶೇಷದಿಂದ ಎರಡು ಬೃಹತ್ಯಾ ವುತ್ತರೇ ಋಚೆಗಳು ಸಿದ್ಧವಾಗಿವೆ ಎಂಬುದೇ ತೀರ್ಮಾನ. ಇಲ್ಲಿ ಪೂರ್ವನ್ಯಾಯದಂತೆ ಎರಡೂ

ಕಡೆಯ ಯುಕ್ತಿ ಗಮನಾರ್ಹ. ಸಂಕೇತ ಅಥವಾ ಚಿಹ್ನೆಯಿಂದ ವೇದದಲ್ಲಿ ಷಷ್ಠಿ ....ಸವನಮ್ - ಅಂದರೆ ರೌರವ, ಯೌಧಾಜಯ, ಸಾಮಗಳನ್ನು ಮಾಧ್ಯಂದಿನ ಸವನದಲ್ಲಿ ಗಾನ ಮಾಡಲಾಗುತ್ತದೆ. ಈ ಸವನದಲ್ಲಿ ತ್ರಿಷ್ಟುಪ್ ಛಂದಸ್ಸಿನ ಆರು ಋಕ್ಕ ಗಳಿರುತ್ತವೆ. ಈ ಆರು ಸಂಖ್ಯೆಗಳು ಪ್ರಗಥನ ಕ್ರಿಯೆಯಿಂದಲೇ ಲಭ್ಯವಾಗುತ್ತವೆ. ಹೀಗೆಯೇ ಮಾಧ್ಯನ್ದಿನ ಸವನದಲ್ಲಿ **'ಪವಮಾನ'** ಒಂದು. ಈ ಸ್ತೋಮದ ಬಗೆಗೆ ಮುಂದೆ ತಿಳಿಸಲಾಗುತ್ತದೆ.

ಪೃಷ್ಠಸ್ತೋತ್ರಗಳು ನಾಲ್ಕು - ತಾಂ.ಮ.ಬ್ರಾ. ೧-೧೦ರ ನಂತರ ತಿಳಿಸಿದ ಪವಮಾನ ದಲ್ಲಿನ ಮೂರು ಸೂಕ್ತಗಳಲ್ಲಿ ಉಚ್ಚಾತೇಜಾತ ೬೭೨-೬೮೬, ಸೂಕ್ತಕ್ಕೆ ಗಾಯತ್ರೀ ಛಂದಸ್ಸಿನ ೬೭೨-೬೭೪ ಮೂರು ಋಕ್ಕುಗಳು ಆಶ್ರಯವಾಗಿವೆ. ಪುನಾನಃ ಸೋಮ ಎಂಬ ಎರಡನೆಯ ಸೂಕ್ತವು ಪ್ರಗಾಥ ರೂಪದ್ದು ಅದರಲ್ಲಿ ಪೂರ್ವದ ೬೭೫. ಬೃಹತೀ ಛಂದಸ್ಸಿನದು ನಂತರದ ೬೭೯. ವಿಷ್ಟಾರ ಪಙ್ಕ್ತಿಯದು ಪ್ರಶುದ್ರವ ಪರಿಕೋಶ ಎಂಬ ಮೂರನೆಯ ಸೂಕ್ತದಲ್ಲಿ ತ್ರಿಷ್ಟುಪ್ ಛಂದಸ್ಸಿನವು ಮೂರು ೬೭೭-೬೭೯, ಪೃಷ್ಠಸ್ತೋತ್ರ ದಲ್ಲಿ ಪ್ರಗಾಥ ರೂಪದ ಅಭಿತ್ವಾಶೂರ ಪ್ರಥಮಸೂಕ್ತ ಇದರಲ್ಲಿ ಮೊದಲನೆಯ ೬೮೦, ಬೃಹತೀ ಛಂದಸ್ಸಿನದು ನಂತರದ್ದು ೬೮೧, ವಿಷ್ಟಾರ ಪಙ್ಕ್ತಿಯದು. **ಕಯಾನಶ್ಚಿತ್ರ** ಎಂಬುದು ಎರಡನೆಯ ಸೂಕ್ತ. ಇದರಲ್ಲಿ ನ ಋಚೆಗಳು ೬೮೨-೬೮೪, ಮೂರೂ ಗಾಯತ್ರೀ ಛಂದಸ್ಸಿನವು ತಂವೋದಸ್ಮ ೬೮೫, ದ್ಯುಕ್ಷ ಸುದಾನಂ ೬೮೬ ಪ್ರಗಾಥರೂಪದ್ದು. **ತರೋಭಿರ್ವೋ** ೬೮೭ ಬೃಹತಿ, **ನಯಂದುಧ್ರಾ** ೬೮೮ ಪಙ್ಕ್ತಿಛಂದಸ್ಸಿನಲ್ಲಿ. ಇನ್ನೊಂದು ಮಾಧ್ಯಂದಿನ ಸವನದಲ್ಲಿನ ಏಳು ಸೂಕ್ತಗಳಲ್ಲಿ ಇಲ್ಲಿ ಹೆಸರಿಸಿರುವ ಒಂಬತ್ತು ಸಾಮಗಳನ್ನು ಗಾನ ಮಾಡಬೇಕು. ಈ ತೃಚದಲ್ಲಿನ ಇಂತಹ ಋಕ್ಕಿನಲ್ಲಿ ಇದೇ ಸಾಮವನ್ನು ಗಾನ ಮಾಡಬೇಕು ಎಂಬುದನ್ನು ತಾಂಡ್ಯಾದಿ ಬ್ರಾಹ್ಮಣ ಗ್ರಂಥಗಳು ತಿಳಿಸುತ್ತವೆ - ಮೊದಲ ಸೂಕ್ತದಲ್ಲಿ ಗಾಯತ್ರಂ, ಆಮಹೀಯವಂ - ಊಹ.೧, ಎರಡನೆಯ ಸೂಕ್ತದಲ್ಲಿ ರೌರವಮ್ ಊಹ.೨, ಯೌಧಾಜಯಮ್ ಊಹ.೩, ಮೂರನೆಯ ಸೂಕ್ತದಲ್ಲಿ ಔಶನಮ್ ಊಹ.೪ ನಾಲ್ಕನೆಯ ಸೂಕ್ತದಲ್ಲಿ ರಥನ್ತರಮ್ ರಹಸ್ಯ.೧., ಐದನೆಯ ಸೂಕ್ತದಲ್ಲಿ ವಾಮದೇವ್ಯಮ್ ಊಹ.೫ ಆರನೆಯ ಸೂಕ್ತದಲ್ಲಿ ಸಾಧಸಮ್ - ಊಹ ೬, ಏಳನೆಯ ಸೂಕ್ತದಲ್ಲಿ ಕಾಲೇಯಮ್ - ಊಹ.೭, ಉಚ್ಚಾ ತೇ ಸೂಕ್ತ ಮೂಲಕವಾದ ೨೨ ಸಾಮಗಳು ಪ್ರಕೃತಿಗಾನ ೮೧೪-೮೨೬, ಊಹ.೧ರಲ್ಲಿ ಕಂಡುಬಂದರೂ ಅವುಗಳಲ್ಲಿ ಗಾಯತ್ರ ಸಾಮದ ಲಕ್ಷಣಗಳಿಲ್ಲ. ಗಾಯತ್ರೀ ಲಕ್ಷಣಾದಿಗಳು ತಾಂ.ಮ.ಬ್ರಾ. ೬.೩.೧೩, ವಿವರಿಸಿರುವಂತೆ ಅನ್ವಯ ಮಾಡಿಕೊಳ್ಳಬೇಕು.

ಇಲ್ಲಿ ಪ್ರಥಮ ಸೂಕ್ತದ ಎರಡು ಸಾಮಗಳ ಉತ್ಪತ್ತಿಯು ದ್ವಿರಾವೃತ್ತಿಗೆ ಆಶ್ರಯ ಭೂತವಾದ ಆರು ಋಕ್‌ಗಳು ಗಾಯತ್ರೀ ಛಂದಸ್ಸಿನವಾಗಿವೆ. ಪಂಚಮ ಸೂಕ್ತವಾದ ವಾಮದೇವ್ಯ ಗಾನಕ್ಕೆ ಆಶ್ರಯವಾದ ಮೂರು ಋಕ್ಕುಗಳು, ಸಪ್ತದಶ ಸ್ತೋಮ ಸಿದ್ಧಿಗಾಗಿ ಆವರ್ತಿ ಮಾಡಬೇಕಾದ ಹದಿನೇಳು ಗಾಯತ್ರೀ ಛಂದಸ್ಸಿನವುಗಳು ಸೇರಿ ಇಪ್ಪತ್ತಮೂರು ಗಾಯತ್ರೀ ಛಂದಸ್ಸಿನವುಗಳಾಗಿರುತ್ತವೆ. ಆರನೆಯ ಸೂಕ್ತದಲ್ಲಿ ಬೃಹತೀ ಮತ್ತು ಪಙ್ಕ್ತಿಗಳ ಗ್ರಥನದಿಂದ ಬೃಹತೀ ತೃಚವಾಗುತ್ತದೆ. ಏಳನೆಯ ಸೂಕ್ತದಲ್ಲಿ ಎರಡೂ ಕಡೆ ಸಪ್ತದಶ ಸ್ತೋಮವಿರುವುದರಿಂದ ಮೂವತ್ತನಾಲ್ಕು, ಬೃಹತೀ ಆಗುತ್ತದೆ.

ಎರಡನೆಯ ಸೂಕ್ತದಲ್ಲೂ ಸಹ '**ಪ್ರಗ್ರಥನ**' ದಿಂದ ಬೃಹತೀ ತೃಚೆಯನ್ನು ಪಡೆದು ಸಾಮದ್ವಯಾಪೇಕ್ಷೆಯಿಂದ ಆವೃತ್ತಿ ಮಾಡಿದಾಗ ಆರು ಬೃಹತಿಗಳಾಗುತ್ತವೆ. ನಾಲ್ಕನೆಯ ಸೂಕ್ತದಲ್ಲಿ '**ರಥನ್ತರ**' ಸಾಮಕ್ಕಾಗಿ ಹಿಂದೆ ತಿಳಿಸಿದಂತೆ '**ಪ್ರಗ್ರಥನ**' ವಾಗುವುದರಿಂದ '**ಕಕುಭಾ ಉತ್ತರೇ**' ಆಗುತ್ತದೆ. ಮೊದಲನೆಯದು ಸ್ವತಃಸಿದ್ಧ ಬೃಹತೀ ಆಗಿದ್ದು, ಅಲ್ಲಿ ಸಪ್ತದಶಸ್ತೋಮವಾಗುವುದರಿಂದ ಐದು ಬೃಹತೀ ಹನ್ನೆರಡು ಕಕುಭ ಗಳಿಂದ ಕೂಡಿರುತ್ತದೆ. ಈ ಸ್ತೋಮ ವಿಧಾನವನ್ನು ತಾಂ.ಮ.ಬ್ರಾ. ೭.೨ರಲ್ಲಿ ವಿವರಿಸಿದೆ. ಉದ್ಧೃತ ವಾಕ್ಯಗಳಂತೆ ಸ್ವತಃ ಸಿದ್ಧ ಬೃಹತಿಯೊಂದಿಗೆ ಪ್ರಗಥಿತವಾದ ಎರಡು ಕಕುಪ್‌ಗಳಿಂದಾದ '**ತೃಚೆ**'ಗಳನ್ನು ಮೂರುಬಾರಿ ಆವರ್ತನೆ ಮಾಡುವುದು. ಪ್ರಥಮ ಪರ್ಯಾಯದಲ್ಲಿ ಮೂರು ಬಾರಿ ಬೃಹತಿಗಳನ್ನು ಒಂದೊಂದು ಬಾರಿ ಕಕುಪನ್ನು ಗಾನ ಮಾಡುವುದು. ಎರಡನೆಯ ಪರ್ಯಾಯದಲ್ಲಿ ಒಂದು ಬಾರಿ ಬೃಹತೀ, ನಂತರ ಮೂರುಬಾರಿ ಕಕುಪ್, ಅನ್ಯದಲ್ಲಿ ಒಂದು ಬಾರಿ ಕಕುಪ್ ಗಾನ ಮಾಡುವುದು. ಮೂರನೆಯ ಪರ್ಯಾಯದಲ್ಲಿ ಒಂದು ಬಾರಿ ಬೃಹತಿ, ಮೂರು ಬಾರಿ ಕಕುಪ್, ನಂತರ ಹಿಂಕಾರೋಪಲಕ್ಷಿತ ಗಾನ ಮಾಡುವುದು. ತೃತೀಯ ಸೂಕ್ತ ವ್ಯತಿರಿಕ್ತವಾದ ಆರು ಸೂಕ್ತಗಳಲ್ಲಿ ೨೩ ಗಾಯತ್ರೀ ೪೫ ಬೃಹತೀ ೧೨ ಕಕುಪ್‌ಗಳಾದವು. ಅಲ್ಲಿ ಕಕುಪ್ ೨೮ ಅಕ್ಷರ ಅದರಲ್ಲಿನ ೧೬ ಅಕ್ಷರಗಳನ್ನು ಗಾಯತ್ರದ ಎರಡು ಪಾದಗಳಲ್ಲಿ ಯೋಜಿಸಿದರೆ ೪೪ ಅಕ್ಷರಗಳ ತ್ರಿಷ್ಟುಪ್ ಪಡೆಯಲಾಗುತ್ತದೆ.

ಈ ದಿಕ್ಕಿನಲ್ಲಿ ಹನ್ನೆರಡರ '**ಕಕುಪ್**' ನ್ನು ತ್ರಿಷ್ಟುಪ್ ಆಗಿ ಪರಿವರ್ತಿಸಲು ೨೪ ಗಾಯತ್ರೀ ಪಾದವನ್ನು ಯೋಜಿಸಬೇಕು. ಆಗ ಎಂಟು '**ಗಾಯತ್ರೀ**' ಗೆ ಹೋಗಿ ೧೫ ಉಳಿಯುತ್ತದೆ. ಅವುಗಳಲ್ಲಿ ೪೫ ಪಾದಗಳು. ಅವುಗಳಲ್ಲಿ ಇನಷ್ಟನ್ನು ಬೃಹತಿಯಲ್ಲಿ ಸಂಯೋಜಿಸಿ ತ್ರಿಷ್ಟುಪ್‌ನ್ನು ಪಡೆಯಬೇಕು. ಈ ೪೫ ಕಕುಪ್‌ಗಳಿಂದ ಈ ೧೨

ಉದಯವಾದಂತಾಯಿತು. ಮೂರನೆಯ ಸೂಕ್ತದಲ್ಲಿ ಸ್ವತಃ ಸಿದ್ಧವಾದವು ಮೂರು. ಇವುಗಳ ಪ್ರಗ್ರಥನದಿಂದ ಅರವತ್ತು ತ್ರಿಷ್ಟುಪ್‌ಗಳು ಊಹಾದಿ ಗ್ರನ್ಥಗಳಲ್ಲಿ ಪಠಿತ ವಾಗಿಯೇ ಇವೆ. ಉತ್ಪತ್ತಿ ಬೃಹತಿಯನ್ನು ಪಡೆಯಲು ಪ್ರಕರಣದಲ್ಲೇ ವಿವರಿಸಿರುವುದರಿಂದ ವಿಶೇಷ ಕಲ್ಪನೆಯನ್ನೂ ವಿಧಿವಾಕ್ಯಕ್ಕೆ ಪ್ರತಿಷೇಧವನ್ನೂ ಅಂದರೆ ಪ್ರಸಜ್ಯ ಮಾಡಿದರೆ, **'ತ್ರಿಷ್ಟುಭಃ ಷಷ್ಠಿ'** ಎಂಬುದು ಬೃಹತೀ ಪ್ರಗ್ರಥನಕ್ಕೆ ಉದಾಹರಣೆ ಯಾಗುತ್ತದೆ. ಪ್ರಗ್ರಥನ ಪ್ರಕಾರವನ್ನು ಹೀಗೆ ತಿಳಿಸಲಾಗಿದೆ. **'ಪುನಾನಃ ಸೋಮಾ'** ಕ್ಕೆ ಬೃಹತಿಯ ಚತುರ್ಥ ಪಾದವನ್ನು ಪುನಃ ಸೇರಿಸಿ ಎರಡು ಬಾರಿ ಪಠಿಸಿ **'ದುಹಾನ ಉಧರ್ದಿ'** ವಿಷ್ಟಾರಪಙ್ಕ್ತಿಯ ಪೂರ್ವಾರ್ಧದಿಂದ ಸಂಯೋಜಿಸುವುದರಿಂದ ಬೃಹತೀ ಆಗುತ್ತದೆ. ಇದರ ಚತುರ್ಥ ಪಾದವನ್ನು ಎರಡು ಬಾರಿ ಪಠಿಸಿ ಉತ್ತರಾರ್ಧದಿಂದ ಯೋಜಿಸುವುದು ಅದೂ ಬೃಹತಿ ಯಾಗುತ್ತದೆ. ಆದುದರಿಂದ ಯೌಧಾಜಯ ರೌರವಗಳನ್ನು ಮುಂದಲ ಬೃಹತಿಗಳೆರಡ ರೊಂದಿಗೆ ಪ್ರಗ್ರಥನ ಮಾಡುವುದು. ಇದೇ ರೀತಿ ನೌಧಸ ಕಾಲೇಯಗಳೊಂದಿಗೂ ಎಂದು ತಿಳಿಯಬೇಕು.

ತೃತೀಯ ಸವನದಲ್ಲಿನ ಪವಮಾನ ಆರ್ಭವ ಅಥವಾ ಆರ್ಭವಃ ಪವಮಾನದಲ್ಲಿ ಸಮಾವೇಶವಾಗಿರುವ ಐದು ಛಂದಸ್ಸಿಗಳಿಂದಾಗಿರುವ ಐದು ಸೂಕ್ತಗಳ ಮತ್ತು ಏಳು ಸಾಮಗಳ ವಿವರ ಹೀಗಿವೆ. ಗಾಯತ್ರೀ ತೃಚದಿಂದ ಉದಯವಾಗಿರುವ ಗಾಯತ್ರಂ ಮತ್ತು ಸಂಹಿಂತಂ, ಅನುಷ್ಟುಪ್ ತೃಚದಿಂದ ಉದಯವಾಗಿರುವ ಶ್ಯಾವಾಶ್ವಾ ಮತ್ತು ಆನ್ಧೀಗವೇ, ಉಷ್ಣಿಕ್‌ನಿಂದ ಸಫಮ್, ಕಕುಪ್‌ನಿಂದ ಪೌಷ್ಕಲಮ್, ಜಗತಿಯಿಂದ ಕಾವಮ್, ಇದೇ ಪ್ರಕಾರ ಈ ಮುಂದೆ ಸ್ವಾದಿಷ್ಠಯಾಮದಿಷ್ಠಾ - ೬೮೮-೬೯೧, ಆದಿಸೂಕ್ತಗಳಲ್ಲಿ ಹಾಗೂ ಹೆಸರಿಸಿರುವ ಸಾಮಗಳ ಮಧ್ಯೆ **'ಪುರೋಜಿತೋವಃ ಪವಸ್ವ'** ಎಂಬೆರಡು ಸೂಕ್ತಗಳಲ್ಲಿ ಎರಡೆರಡು ಛಂದಸ್ಸುಗಳಿದ್ದರೂ ಕೂಡ ಸಮಷ್ಟಿಯಾದ ಗಾನವಾಗಲು ಪ್ರಗ್ರಥನದಿಂದ ಒಂದೇ ಛಂದಸ್ಸಾಗುತ್ತದೆ ಅಂದರೆ ಗಾಯತ್ರೀ ಛಂದಸ್ಸಿನಿಂದ ಅನುಷ್ಟುಪ್ ಉಷ್ಣಿಕ್ ಕಕುಪ್ ಅತಿ ಛಂದಸ್ಸುಗಳನ್ನು ಈ ಸವನದ ಆರ್ಭವ ಪವಮಾನದೊಂದಿಗೆ ಸೇರಿಸುವುದು. ಅಲ್ಲಿ ಪುರೋಜಿತೀ ಸೂಕ್ತ ದಲ್ಲಿ ಶ್ಯಾವಾಶ್ವಮಾನ್ಧೀಗವಂ ಸಾಮವನ್ನೂ ಒಟ್ಟಿಗೆ ಗಾನಮಾಡಲು ಮುಂದಿನ ಗಾಯತ್ರಿಯನ್ನು ಬಿಟ್ಟು ಎರಡು ಉತ್ಪತ್ಯನುಷ್ಟುಭಗಳನ್ನು ತೆಗೆದುಕೊಳ್ಳಬಹುದು ಎಂಬುದು ಪೂರ್ವಪಕ್ಷ. ನಾಲ್ಕನೆಯ ಪಾದವನ್ನು ಪುನಃ ಪಡೆಯಲು ಎರಡು ಅನುಷ್ಟುಪ್ ಗಳು ಪ್ರಗ್ರಥವಾಗಬೇಕೆಂಬುದು ಖಚಿತವಾದ ತೀರ್ಮಾನ. ಇದರಿಂದ ಜೈ.ನ್ಯಾ.ವಿ. ೯.೨.೬ರ ಎರಡು ಮತ್ತು ಮೂರನೆಯ ವರ್ಣಕಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿರುವುದು ನ್ಯಾಯವಾದ ಯುಕ್ತಿಯೆಂಬುದನ್ನು ಮನಗಾಣಬಹುದು.

ಉದಾಹರಣಾರೂಪವಾಗಿ ಜಗತಿಯ ೨೪ರಿಂದ ತೃತೀಯ ಸವನದ ಒಂದು ಕಕುಪ್ ಎಂಬುದು ಈ ಸಂಖ್ಯೆಯ ಪ್ರಗ್ರಥನದಿಂದ ಉಂಟಾಗುತ್ತದೆ. ಹೀಗೆಯೇ ಗಾಯತ್ರ, ಸಂಹಿತಗಳೆರಡರ ಸಾಮಗಳಿಗಾಶ್ರಯವಾದ ಗಾಯತ್ರ ತೃಚೆಯನ್ನು ಎರಡು ಬಾರಿ ಪುನರಾವರ್ತನೆ ಮಾಡುವುದರಿಂದ ಆರು ಗಾಯತ್ರಗಳಾಗುತ್ತವೆ. ತಾಂ.ಮ.ಬ್ರಾ. ೧೬.೧೧.೧೦ರಂತೆ ೨೪ ಅಕ್ಷರಗಳಿದ್ದು ಗಾಯತ್ರೀ ಛಂದಸ್ಸು ೪೮ ಅಕ್ಷರಗಳದ್ದು. ಜಗತೀ ಛಂದಸ್ಸು. ಅಂದರೆ ಆರು ಗಾಯತ್ರೀ ಛಂದಸ್ಸಿನ ಅಕ್ಷರಗಳಿಂದ ಮೂರು ಜಗತೀ ಛಂದಸ್ಸುಗಳಾಗುತ್ತವೆ. ಶ್ಯಾವಾಶ್ವ ಅನ್ಧೀಗವಗಳಿಗೆ ಆಶ್ರಯಭೂತವಾಗಿ ಪ್ರಗಥಿತವಾದ ಎರಡುಬಾರಿ ಪುನರಾವರ್ತಿಸಿದ ಆರು ಅನುಷ್ಟುಪ್‌ಗಳಾಗುತ್ತವೆ. ಅವುಗಳಿಂದ ಮೂರು ಜಗತೀ ಆಗುತ್ತವೆ. ಇವುಗಳನ್ನು ಒಟ್ಟು ಮಾಡುವುದರಿಂದ ಏಳು ಜಗತೀ ಛನ್ದಸ್ಸುಗಳು ಲಭ್ಯವಾಗುತ್ತವೆ.

ಸಫ ಮತ್ತು ಪೌಷ್ಕಲಗಳನ್ನು ಸಾಮಾನ್ತರದಂತೆ ತೃಚೆಗಳಲ್ಲಿ ಗಾನ ಮಾಡುವಂತಿಲ್ಲ. ಆ ಋಕ್ಕುಗಳು ಹೇಗೆ? ಅದು ಹೇಗೆ ತಿಳಿಯುತ್ತದೆ. ಅಂದರೆ ತಾಂ.ಮ.ಬ್ರಾ. ೮.೫.೧೦-೧೬ರಲ್ಲಿ ವಿವರಿಸಿರುವ ಉಷ್ಣಿಹಿ, ಕಕುಭೀ ಸಪ್ತಮೀ ವಿಭಕ್ತಿ ಏಕವಚನವೆಂಬ ವಿಶೇಷ ವಿಧಾನಧಿಂದ ತಿಳಿಯಬೇಕಾಗಿದೆ. ೨೮ ಅಕ್ಷರಗಳ ಉಷ್ಣಿಕ್ ಕಕುಪ್ ಒಂದು ಜಗತೀ ಮತ್ತು ಗಾಯತ್ರೀ ಪಾದದಿಂದ ಸಂಪನ್ನ ವಾಗುತ್ತದೆ. ಕಕುಭೀ ಮಧ್ಯಮಪಾದದ ದ್ವಾದಶಾಕ್ಷರಗಳು, ಉಷ್ಣಿಕ್‌ನ ಮತ್ತೊಂದು ಪಾದ ಹೀಗೆ ಅವುಗಳಲ್ಲಿ ಭೇದ. ಕಾವಕ್ಕೆ ಆಶ್ರಯಭೂತವಾದ ಸ್ವತಃ ಸಿದ್ಧವಾದ ಮೂರು ಜಗತಿಗಳೊಂದಿಗೆ ಸೇರಿಸಿ ಪವಮಾನದಲ್ಲಿನ ಈ ಹನ್ನೊಂದನೆಯದಾದ ಜಗತಿ ಆಗುತ್ತದೆ. ಗಾಯತ್ರಿಯ ಒಂದು ಪಾದ ಬಿಡುತ್ತವೆ. ಆರ್ಭವ ಪವಮಾನದಂತೆ ಮೂರನೆಯ ಸವನದಲ್ಲಿ ಯಜ್ಞಾಯಜ್ಞೀಯವೆಂಬ ಸ್ತೋತ್ರವಿದೆ. ತಾಂ.ಮ.ಬ್ರಾ. ೭.೭.ರಂತೆ ಅದಕ್ಕೆ ಆಶ್ರಯವಾದದ್ದು ಯಜ್ಞಾಯಜ್ಞಾವೋ ಅಗ್ನಯೇ - ಊಹ ೧೪ ಪ್ರಗಾಥವಾಗಿದೆ. ಇದರಲ್ಲಿ ಮುಂಚಿನದು ಬೃಹತೀ ನಂತರದ್ದು ವಿಷ್ಟಾರಪಙ್ಕ್ತಿ ಇವೆರಡರ ಪ್ರಗಥನದಿಂದ ಕಕುಭಾವುತ್ತರೇ ಛಂದಸ್ಸನ್ನು ಪಡೆಯುವುದು ಕರ್ತವ್ಯವಾಗಿರುತ್ತದೆ.

ಊಹ.೧೪ 'ಏಕವಿಂಶತ್ ಸ್ತೋಮ' ದಲ್ಲಿ ವಿಧಾಯಕವಾಗಿರುವುದು 'ವಿಷ್ಟುತಿ' ಎನಿಸಿಕೊಂಡಿದೆ - ತಾಂ.ಮಬ್ರಾ. ೨.೧೪.೧. **'ಸಪ್ತಭ್ಯೋ.... ತಿಸೃಭಿಃ'** ಅಂದರೆ ಪ್ರಥಮ ದಲ್ಲಿ ಬೃಹತಿಯಿಂದ ಮೂರು ಪರ್ಯಾಯದಲ್ಲಿ ಮೂರುಬಾರಿ, ಒಂದುಬಾರಿ, ಪುನಃ ಮೂರುಬಾರಿ ಅಂದರೆ ಏಳು ಬೃಹತಿಗಳು, ಮಧ್ಯಮದಲ್ಲಿ ಪ್ರಥಮ, ದ್ವಿತೀಯ

ಪರ್ಯಾಯದಲ್ಲಿ ಮೂರು ಮೂರು ಬಾರಿ ಪಠಿಸಿ ಕಡೆಯಲ್ಲಿ ಒಂದುಬಾರಿ, ಕಡೆಯಲ್ಲಿ ಕಕುಭ ಪ್ರಾರಂಭದಲ್ಲಿ ಒಂದುಬಾರಿ ಎರಡನೆಯ ಮೂರನೆಯ ಪರ್ಯಾಯಗಳಲ್ಲಿ ಮೂರು ಮೂರು ಹೀಗೆ ಹದಿನಾಲ್ಕು ಕಕುಪ್‌ಗಳು. ಆ ಕಕುಪ್‌ಗಳಲ್ಲಿ ೧೨ ಅಕ್ಷರಗಳು ಮಧ್ಯಮಪಾದದಲ್ಲಿ ೧೪ ಅಕ್ಷರಗಳು. ಅವುಗಳಲ್ಲಿನ ಸಪ್ತಪಾದಗಳನ್ನು ಸಪ್ತಬೃಹತಿಯಲ್ಲಿ ಯೋಜಿಸುವುದು. ಇದರಿಂದ ಏಳು ಜಗತಿಗಳಾಗುತ್ತವೆ. ಉಳಿದ ಎಂಟು ಅಕ್ಷರಗಳು ಕಕುಪ್‌ನ ಪ್ರಥಮ ಅಂತ್ಯಪಾದಗಳನ್ನು ಸೇರಿಸಿ ೨೮ ಅವುಗಳಲ್ಲಿನ ಆರು ಪಾದಗಳಿಂದ ಒಂದು ಜಗತೀ ಇದೇ ಕ್ರಮದಿಂದ ೨೪ ಪಾದಗಳಿಂದ ನಾಲ್ಕು ಜಗತೀ ಆಗುತ್ತದೆ. ಇವು ೧೨ ಅಕ್ಷರ, ಸಪ್ತಪಾದಗಳು. ಈ ಹಿಂದೆ ಉಳಿದ ಪವಮಾನದ ಎಂಟು ಅಕ್ಷರಗಳ ಪಾದವನ್ನು ಯೋಜಿಸುವುದು. ಕಕುಪ್‌ನಲ್ಲಿ ಉಳಿದಿರುವ ಎಂಟು ಅಕ್ಷರಗಳ ನಾಲ್ಕು ಪಾದಗಳಲ್ಲಿ ನಾಲ್ಕು ಅಕ್ಷರಗಳನ್ನು ಯೋಜಿಸುವುದರಿಂದ ಎರಡು ಜಗತಿಗಳಾಗುತ್ತವೆ. ಅವೇ ಯಜ್ಞಾಯಜ್ಞೀಯ ಸ್ತೋತ್ರದಲ್ಲಿ ಹದಿಮೂರು ಜಗತಿಗಳು.

ಹಿಂದೆ ಹೇಳಿದ ಪವಮಾನದ ಹನ್ನೊಂದು ೨೪ ಅಕ್ಷರದ ಜಗತಿಗಳು. ನಾಲ್ಕು ಅಕ್ಷರಗಳಿಲ್ಲದ ನಾಲ್ಕು ಅಷ್ಟಾಕ್ಷರ ಪಾದಗಳು ಸೇರಿ ಒಂದು ಕಕುಭವಾಗುತ್ತದೆ. ಈ ರೀತಿ ಯಿಂದಲೇ ಶ್ಯಾವಾಶ್ವ ಮತ್ತು ಆನ್ಧೀಗವಂ ಪ್ರಗ್ರಥಿತವಾಗಿದ್ದು ತೃಚೆಯಲ್ಲಿ ಗಾನ ಮಾಡಲ್ಪಡುತ್ತವೆ. ಈ ಪ್ರಕರಣದಲ್ಲಿ ಉತ್ಪತ್ಯನುಷ್ಟುಪ್‌ನ್ನು ತರುವಂತಿಲ್ಲವೆಂಬುದಾಗಿ **ಪುರೋಜಿತೀ ವೋ ಅನ್ಧಸ್ಯ ಇತಿ ಪದ್ಯೇತ್ಯಾದ್ಯುಪಕ್ರಮೇತೇ । ತಾಸು ಶ್ಯಾವಾಸ್ಯಾಮಿತ್ಯಾ ದೌ ಅಥೈತದಾನ್ಧೀ ಗಮಯಾದ್ಯಾ ॥** ತಾಂ.ಮ.ಬ್ರಾ. ೮.೫.೭-೧೨ರವರೆಗೆ ತಿಳಿಸಲಾಗಿದೆ.

ಜೈ.ನ್ಯಾ.ವಿ. ೯.೨.೮-೪ರ ವಿವರಣೆಯಂತೆ - ಗವಾಮಯನದಲ್ಲಿ ಬ್ರಹ್ಮ ಸಾಮಗಾನ ಮಾಡುವುದು ವಿಹಿತವಾದದ್ದು. **ಪ್ರಾಯಣೀಯೇಽಹನಿ ಮಾಧ್ಯನ್ದಿನ ಸವನೇ ಬ್ರಾಹ್ಮಣಾಚ್ಛಂಸಿನಃ ಪೃಷ್ಠಸ್ತೋತ್ರ ನಿವರ್ತಕಮೇತತ್ ತಂವೋದಸ್ಮಮೃತೀಷಹಮಿತಿ ಯೋನೌ** - ತಾಂ.ಮ.ಬ್ರಾ. ೪.೩ ವಿಹಿತಮ್. ತಚ್ಚ ಊಹ ಗಾನಸ್ಯ ೨೩೬ ಸಾಮ. ಅಭಿವರ್ತೋ ಬ್ರಹ್ಮಸಾಮವಾಗಿದ್ದು ಅದನ್ನು ಪ್ರಕೃತಿಯಲ್ಲಿ ಗಾನ ಮಾಡಲಾಗುತ್ತದೆ.

ನಾಲ್ಕು ನೂರು ಐನ್ದ್ರಾ ಬಾರ್ಹತಾಃ ಬೃಹತೀ ಪ್ರಗಾಥಾ ಎಂಧು ಲಾಟ್ಯಾಯನ ಸೂತ್ರ - ೧೦.೩ ತಿಳಿಸುತ್ತದೆ. **ಪಂಚಸು ಪ್ರಗಾಥಾ ಮಾಸ್ಸು ಬಾರ್ಹತಾಃ ಪ್ರಗಾಥಾ ಆಪ್ಯಂತೇ ಇತಿ ತದ್ಭಾಷ್ಯೇ ।** ನೂರ ನಾಲ್ಕು ಇನ್ದ್ರದೇವತಾತ್ಮಕವಾದ ಬೃಹತೀ ಛಂದಸ್ಸಿನ ಎರಡು ಋಕ್ಕಿನವುಗಳಲ್ಲಿ ಒಂದು ಪ್ರಗಾಥಕ್ಕೂ ಇನ್ನೊಂದು ಎರಡನೆಯ ಪ್ರಗಾಥಕ್ಕೂ ಸೇರಿದಂತೆ ತೃಚೆಯಲ್ಲಿ, ಅಭಿವರ್ತ ಸಾಮವನ್ನು ಗಾನ ಮಾಡಬೇಕಾದುದು ಹೀಗಿರುವಾಗ ಸಾಮವನ್ನು

ವಿಕೃತ ಮಾಡದೆ ಮೂರು ಋಚೆಗಳನ್ನು ಪಡೆಯುವುದರಿಂದ ತೃಚದ ಪ್ರಾಮುಖ್ಯತೆ ತಿಳಿಯುತ್ತದೆ. ಈ ಹಿಂದೆ ಹೇಳಿದ ಪ್ರಕಾರ ಪಾದಗ್ರಥನದಿಂದ ಮುಖ್ಯವಾದ ಋಕ್ ವಿಕೃತವಾದರೆ ಹೇಗೆ ಎಂದರೆ - ಅನ್ಯ ಋಕ್‌ಗಳಾಗುತ್ತವೆಯಾಗಿ ಆಸಾಮದಲ್ಲೇ ತೃಚೆಗಳ ಅನ್ಯತ್ವವನ್ನು ಇಲ್ಲಿ ವರ್ಣಿಸಲಾಗುತ್ತದೆ.

**ಸಮಾನಂ ಸಾಮ ಭವತ್ಯನ್ಯೋನ್ಯಃ ಪ್ರಗಾಥಃ - ಇತಿ ಉಕ್ತೇಷ್ವಹಸ್ಸು ಸಮಾನ ಮೇಕಮೇವಾಭೀವರ್ತ್ತಾಖ್ಯಂ ಬ್ರಹ್ಮಸಾಮಭವತಿ, ಪ್ರಗಾಥಃ ಪ್ರಗಥನೀಯಸ್ತದಾಶ್ರಯ ಸ್ತೃಚಸ್ತ್ವನ್ಯೋನ್ಯಃ ಪ್ರತ್ಯಹಂ ವಿಲಕ್ಷಣೋ ಭವತಿ ।** ತಾಂ.ಮ.ಬ್ರಾ. ೪.೩.೭. ॥ ಅಂದರೆ ಬ್ರಹ್ಮಸಾಮದ ಪ್ರಗಥನಕ್ಕೆ ಆಶ್ರಯವಾದ ಋಚೆಗಳು ಪ್ರತಿಬಾರಿಯೂ ವೈಲಕ್ಷಣ್ಯದಿಂದ ಕೂಡಿರುತ್ತವೆ. ಅದು ಪಾದ ಪ್ರಗ್ರಥನದಿಂದ ಸಂಭವಿಸುತ್ತದೆ. ಋಕ್ ಪ್ರಗ್ರಥನದಿಂದ ಈ ಋಕ್ಕು ಹಿಂದಿನ ತೃಚೆಯ ಕಡೆಯದೂ ಅನಂತರದ ತೃಚೆಯ ಮೊದಲ ಋಕ್ಕೂ ಆಗಿರುತ್ತದೆ. ಹೀಗಾಗಿ ಋಚದ ಅನ್ಯತ್ವವಾಗುವುದಿಲ್ಲವಾಗಿ ಪಾದಗ್ರಥನ ಮಾತ್ರ ವಾಗುತ್ತದೆ. ಜೈ.ನ್ಯಾ.ಮಾ. ೯ನೆಯ ಅಧ್ಯಾಯದ ೯ ಹಾಗೂ ೧೦ನೆಯ ಅಧಿಕರಣದಲ್ಲಿ ಈ ವಿಷಯಗಳ ಚರ್ಚೆಯಾಗಿದೆ. ಜೈ.ನ್ಯಾ.ವಿ. ಗ್ರಂಥದಲ್ಲಿ **'ಆಯೀ'** ಎಬ **'ಯ'** ಕಾರ ಪಾಠವೇ ಕಂಡುಬರುತ್ತದೆ. ಮೂಲಗಾನಗ್ರಂಥದಲ್ಲಿ **'ಆಕಾರಃ ಪೂರ್ವಭಾಗಃ ಈಕಾರ ಉತ್ತರಭಾಗಃ'** ಇತ್ಯಾದಿ ವಿರೋಧಾದಿಗಳನ್ನು ಉಪೇಕ್ಷಿಸಿ ದೋಷರಹಿತವೆಂದೇ ಮಾನ್ಯ ಮಾಡಲಾಗುತ್ತದೆ. ಗಾನಗ್ರಂಥಗಳಲ್ಲಿ **'ಆಈ'** ಎಂಬ ಈಕಾರಾನ್ತ ಪಾಠವೇ ಕಂಡು ಬರುತ್ತವೆ. ಅಧ್ಯಯನ ಸಂಪ್ರದಾಯವೂ ಹೀಗೆಯೇ ಇದೆ. ಕೆಲವು ಗಾನಗಳಲ್ಲಿ ಮಧ್ಯದಲ್ಲಿ **'ಯ'** ಕಾರ ಕಂಡು ಬರುವುದು. ಅಧ್ಯಯನ ಮಾಡದವರ ಯಥಾನಕಲಿರಬಹುದಾಗಿದೆ. ಯಾವ ಯೋನಿ ಯಲ್ಲಿ ಅದರ ಮುಂದಿನದನ್ನು ಗಾನ ಮಾಡಲಾಗುತ್ತದೆಯೋ ಅಲ್ಲಿ - **ಕಯಾನಶ್ಚಿತ್ರ ಆಭು ವತ್** ೬೮೨ ಯೋನಿ ಋಕ್ಕಿನಲ್ಲಿ **'ಕಯಾ'** ಎಂಬ ಮೊದಲ ಎರಡಕ್ಷರಗಳು ಋಕ್ಕಿನ ಮೊದಲ ಭಾಗ **ನಶ್ಚಿತ್ರ ಆಭುವತ್** - ಆರು ಅಕ್ಷರಗಳು ಎರಡನೆಯ ಭಾಗವಾಗಿದೆ. ಆಭಾಗದಲ್ಲಿನ ಎರಡನೆಯ ಅಕ್ಷರ ಚಕಾರದ ಮೇಲಿನ 'ಇ' ಕಾರವನ್ನು ತೆಗೆದು ಹಾಕಿ ಆಸ್ಥಾನದಲ್ಲಿ **'ಆಈ'** ಭಾವವನ್ನು ಅಳವಡಿಸಿಕೊಂಡು ಗಾನವು ಆವಿರ್ಭಾವವಾಗಿದೆ.

ವಿನ್ಯುತ್ತರಾ - ಊಹ - ೫ರ ಋಕ್ ೬೮೩ ಕಸ್ತ್ವಾ ಯೋನಿ ನ್ಯಾಯದಂತೆ ನಾಲ್ಕನೆಯ ಅಕ್ಷರ ತ ಕಾರದ ಮೇಲಿರುವ **ಯ**ಕಾರವನ್ನೂ ಓಕಾರವನ್ನೂ ಲೋಪ ಮಾಡಿ ಅವುಗಳ ಸ್ಥಾನದಲ್ಲಿ **ಆಈ** ಭಾವವನ್ನು ಮೂಡಿಸಬೇಕು. ೬೮೪ **ಅಭೀಷುಣಃ** ಋಕ್ಕಿನ ನಾಲ್ಕನೆಯ ಅಕ್ಷರ 'ಣ' ಕಾರದ ಮೇಲಿನ 'ಷ' ಕಾರವನ್ನು ಲೋಪ ಮಾಡಿ ಅದರ ಸ್ಥಾನದಲ್ಲಿ

**ಆಈ** ಭಾವವನ್ನು ಮೂಡಿಸಬೇಕು. ಇಲ್ಲಿ ಕೊಟ್ಟಿರುವ ಪ್ರಥಮ ದ್ವಿತೀಯ ತೃತೀಯ ರೂಪದಲ್ಲಿ ಗಾನವು ಮೂಡಬೇಕಾಗುತ್ತದೆ. ಆದರೆ ಇದು ಊಹ - ೫. ಸಾಮಕ್ಕೆ ವಿರೋಧ ವಾಗಿರುವುದರಿಂದ ಸ್ವೀಕಾರಾರ್ಹವಲ್ಲ. ಹೀಗೆ ಮಾಡದಿದ್ದರೆ ಗಾನದ ಸ್ವರೂಪವೇ ನಾಶ ವಾಗುತ್ತದೆ. ಈ ಪ್ರಸಂಗದಲ್ಲಿ ಹೀಗೆ ಹೇಳಲಾಗುತ್ತದೆ. ಇಲ್ಲಿ ಯೋನಿಯಲ್ಲಿ ವರ್ಣಾನ್ತರದ ಆಗಮವಾಗುವಂತಿಲ್ಲ. ಹಾಗಾದರೆ ಹೇಗೆ? ಈ ಋಕ್ಕಿನಲ್ಲಿ ವಿದ್ಯಮಾನವಾಗಿರುವ 'ಚ' ಅಕ್ಷರದ ಮೇಲೆಯೇ ಇರುವ 'ಇ' ಕಾರವು ಸಾಮಪ್ರಸಿದ್ಧ ಪ್ರಕ್ರಿಯೆಯಾದ ವೃದ್ಧಭಾವವನ್ನು ಪಡೆದು 'ಐ' ಕಾರವಾಗುತ್ತದೆ. ಇಲ್ಲಿ ಇದು ಸಂಧ್ಯಕ್ಷರವಾಗಿರುವುದರಿಂದ ಆಕಾರವು ಪೂರ್ವಭಾಗವೂ ಈಕಾರವು ಉತ್ತರಭಾಗವೂ ಆಗಿದ್ದು ಈ ಎರಡೂ **'ವಿಶ್ಲೇಷಣ'** ದಿಂದ ಗಾನಕಾಲದಲ್ಲಿ ಆ ಭಾವವಾಗುತ್ತದೆ. ಆದುದರಿಂದ ಸಾಮಗಾನ ಪರಿಣತರು ವೃದ್ಧದಲ್ಲಿ ತಾಲವ್ಯವು ಆಈ ಭಾವವನ್ನು ಪಡೆಯುತ್ತದೆ ಎನ್ನುತ್ತಾರೆ. ಹೀಗಿರುವುದರಿಂದ ಉತ್ತರದ ಚತುರ್ಥಾಕ್ಷರದಲ್ಲಿ ತಾಲವ್ಯವು ಇರುವುದಿಲ್ಲ. ಪೂರ್ವ ಮತ್ತು ಉತ್ತರ ಎರಡೂ ಪಕ್ಷಗಳಲ್ಲಿ ಮೊದಲಿನ ಸ್ವರೂಪ ಸರಿಯಾಗಿದ್ದರೂ ಎರಡರಲ್ಲೂ ಪ್ರಕರಣಗತ ವಿರೋಧವಿರುತ್ತ ದೆಂಬುದು ತತ್ವ -ಪು.ಸೂ

ಕಾಲವ್ಯದ 'ಇ' ಕಾರವು **ಆಈ** ಭಾವವಾಗತಕ್ಕದ್ದಲ್ಲ. **ಕಾऽ....ನಾಮ್** ಇತ್ಯಾದಿ ಊಹಗಾನದಲ್ಲಿ ಪ್ರಥಮ ಭಾಗದ ನಾಲ್ಕನೆಯ ಸ್ವರಾನನ್ತರ ಶ್ರುತಿಗೆ ವಿರುದ್ಧವಾಗಿಲ್ಲ. **'ಅಭೀಷುಣಃ.... ಜರಿತೃಣಾಮ್'** ನಲ್ಲಿ ಹನ್ನೆರಡನೆಯ ಅಕ್ಷರವಾದ 'ರಿ' ಕಾರದ ಮೇಲಿನ 'ಇ' ಕಾರವು ಹಿಂದಿನಂತೆ **'ಆಈ'** ಭಾವವಾಗುತ್ತದೆ - **ಆऽಭೀ.... ಣಾಮ್** ಇತ್ಯಾದಿ ರೂಪವೇ ಊಹಗಾನದಲ್ಲೂ ಸಾಮಗಾಯಕರಲ್ಲಿ ರೂಢಿಯಲ್ಲಿದೆ - ಹೀಗೆ ವರ್ಣದ ಅಭಿವ್ಯಕ್ತಿಯಿಂದ ಮುಂದಿನ ವರ್ಣವಶವಾಗಿ 'ಆ ಇ' ಭಾವವು ಕರ್ತವ್ಯವಾಗಿರುತ್ತದೆ. ಗೀತ್ಯರ್ಥದ ಅಭಾವದಲ್ಲಿ ಯೋನಿ ಕ್ರಮದಲ್ಲೇ ಅದು ಇಲ್ಲದಿದ್ದರೂ **'ಗೀತಿ'** ಯು ನಾಶವಾಗುವುದಿಲ್ಲವೆಂದು ಜೈ.ನ್ಯಾ.ವಿ. ೯.೨.೯ದಲ್ಲಿ ವಿವರಿಸಲಾಗಿದೆ.

ಜೈ.ನ್ಯಾ.ವಿ. ೯.೨.೧೦ ತಿಳಿಸುವಂತೆ ವಾಮದೇವ್ಯ ಸಾಮದ ಯೋನಿ ಋಕ್ ಗಳೆರಡರ ಅರ್ಧದ ಮಧ್ಯದಲ್ಲಿ ಎರಡು **'ಔ'** ಕಾರಗಳಿಂದಲೂ **'ಹೋ'** ಮತ್ತು ಹಾಯಿ ಶಬ್ದಗಳಿಂದಲೂ ಉದಯವಾಗಿರುವ ಸ್ತೋಭವನ್ನು **ಔऽಹೋ ಹಾಯಿ** ಎಂದು ಗಾನ ಮಾಡಲಾಗುತ್ತದೆ. ಆದಾಗ್ಯೂ ಗೇಯಗಾನದ ೩೦೬ನೆಯ ಸಾಮವಾದ ವಾಮದೇವ್ಯದ **ಕಯಾನಶ್ಚಿತ್ರಾ, ವೃತಾ** ಋ. ೧೬೯, ಯೋನಿ ಋಕ್ಕಿನಲ್ಲಿ ಪೂರ್ವಾರ್ಧವಾದ ಕಯೇತ್ಯಾದಿ ಉತ್ತರಾರ್ಧವಾದ ಕಯಾಶಚಿಷ್ಟಯೇತ್ಯಾದಿಗಳ ಮಧ್ಯೆ ಗಾನ ಮಾಡುವ ಸ್ತೋಭವೇ ಊಹ

ಹಿನೆಯ ಗಾನದಲ್ಲೂ ಕಂಡುಬರುತ್ತದೆ - ಜೈ.ನ್ಯಾ.ವಿ. ಗ್ರಂಥದಲ್ಲಿ **'ಔಹೋಹಾಯಿ'** ಎಂದು ಪಾಠವಿದೆ. ಆದರೆ ಇದು ಸರಿಯಲ್ಲ. ಪೂರ್ವೋಕ್ತ ಗಾನ ಗ್ರಂಥಗಳಲ್ಲಿ ಪ್ರಥಮ ಸ್ವರದ ಒಂದು **'ಔ'** ಕಾರ ಮಾತ್ರವಿರುತ್ತದೆ - ನಂತರದ್ದು ದ್ವಿತೀಯ ಸ್ವರದ್ದಾಗಿದೆ.

ಗೀತಿಸ್ವರೂಪವಿಲ್ಲದುದರಿಂದ ಯಾವ ಯೋನಿಯಲ್ಲಿ ಅದರ ಮುಂದಿನದನ್ನು ಗಾನ ಮಾಡಲಾಗುತ್ತದೋ ಎಂದು ಹೇಳಿ ಗೀತಿ ಮಾತ್ರಕ್ಕೆ ಖಚಿತ ನಿರ್ದೇಶನ ಮಾಡಿದೆ. ಅಲ್ಲಿ ಪ್ರಥಮ ಋಕ್ಕಿನ ವರ್ಣಗಳು ಖಚಿತವಾಗಿ ನಿರ್ದೇಶಿತವಾಗಿಲ್ಲದಂತೆಯೇ ಸ್ತೋಭ ಗಳೂ ನಿರ್ದೇಶಿತವಾಗಿಲ್ಲವೆಂದರೆ - ಜೈ.ನ್ಯಾ.ವಿ. ೯.೨.೧೦ ಸ್ವರ ವರ್ಣ ವಿಶ್ಲೇಷ ವಿರಾ ಮಾದಿಗಳು ಗಾನಕ್ಕೆ ಉಪಯೋಗವಾದುದರಿಂದ ಖಚಿತವಾಗಿ ನಿರ್ದೇಶಿಸಿರುವಂತೆಯೇ ಸ್ತೋಭವನ್ನೂ ಸಹ ಗಾನಧ ಕಾಲ ಪರಿಚ್ಛೇದಗಳ ಕಾರಣದಿಂದ ಖಚಿತವಾಗಿ ನಿರ್ದೇಶಿಸಲಾಗಿವೆ ಎಂಬುದನ್ನು ಈ ಭಾಗದ ಉದಾಹರಣೆಯಿಂದ ತಿಳಿಯಬೇಕು.

ಜೈ.ನ್ಯಾ.ವಿ. ೯.೨.೮ ಕೆಲವು ಗಾನಭಾವ ಸಂದೇಹಗಳನ್ನು ಪರಿಹರಿಸುತ್ತದೆ. 'ಸಹಸ್ರಮಾನವ' ಆದಿ ಕೆಲವು ಕರ್ಮ ವಿಶೇಷಗಳಲ್ಲಿ, ಆಹವನೀಯ ಅಗ್ನಿಯ ಉಪಸ್ಥಾನ ವನ್ನು ಮಾಡಬೇಕೆಂದಿರುವ ಈ ಋಕ್ ಛನ್ದಾರ್ಚಿಕದಲ್ಲಿ ೪೫೪ನೆಯದಾಗಿ ಪಠಿತ ವಾಗಿದೆ. ಗಾನದಲ್ಲಿ ಪ್ರಗೀತವಾಗಿ ಸಾಮ. ೭೯, ಪಠಿತವಾಗಿದೆ. ಆದರೆ ಉಪಸ್ಥಾನವನ್ನು ಆ ಋಕ್ಕಿನ ಗಾನದಲ್ಲೇ ಮಾಡಬೇಕೇಂದೇನೂ ವಿಧಿಸಿಲ್ಲ. ಋಕ್‌ನಲ್ಲಿ ಅಥವಾ ಗಾನದಲ್ಲಿ ಉಪಸ್ಥಾನ ಮಾಡುವುದು ವಿಕಲ್ಪವಾಗಿದೆ ಎಂದಾದರೆ ಹೀಗೆ ಹೇಳಲಾಗಿದೆ - **ಗಾನವನ್ನೇ ಮಾಡಬೇಕೆಂಬ ನಿಯಮವಿದೆ. ಸಾಮವೇದದಲ್ಲಿ ಗಾನ ಮಾಡುವುದೇ ಪ್ರಕೃತಿ.** ಋಕ್ ಸಂಹಿತೆ ಪಾಠವೂ ಸಹ ಇಲ್ಲಿ ಗಾನವೇ ಆಗಿರುತ್ತವೆ. ಋಕ್‌ನ ಆಧಾರವೇ ಇಲ್ಲದೆ ಗಾನ ಮಾಡಲಾಗುವುದಿಲ್ಲವಷ್ಟೆ. ಆದುದರಿಂದಲೇ ಈ ಸಹಸ್ರಮಾನವೆಂಬ ಕರ್ಮವಿಶೇಷದಲ್ಲಿ ಋಕ್ ಪ್ರತೀಕ ಪೂರ್ವಕ ವಾದ ವಾಕ್ಯದಿಂದಲೇ ಉಪಸ್ಥಾನವು ವಿಧಿಸಲ್ಪಟ್ಟಿರುವುದರಿಂದಲೂ ವಾಕ್ಯಪ್ರಕರಣವೇ ಪ್ರಬಲವಾಗಿರುವುದ ರಿಂದಲೂ ಋಕ್‌ನಿಂದಲೇ ಉಪಸ್ಥಾನ ಮಾಡಬೇಕು ಎಂದರೆ, ಅದು ಸರಿಯಲ್ಲ. ಪ್ರಕೃತವಾದ ಪ್ರಗೀತ ಮನ್ತ್ರವು ಶ್ರುತಿಯಾಗಿದ್ದು ಈ ಹಿಂದೆ ಹೇಳಿದುದೆಲ್ಲದಕ್ಕಿಂತ ಶ್ರುತಿಪ್ರಾಮಾಣ್ಯವೇ ಶ್ರೇಷ್ಠವಾದುದರಿಂದ ಪ್ರಗೀತದಿಂದಲೇ ಉಪಸ್ಥಾನ ಮಾಡಬೇಕು.

ಜೈ.ನ್ಯಾ.ವಿ. ೯.೨.೧೫-೧೭ ಅಧಿಕರಣಗಳಲ್ಲಿ ಗಾನಧರ್ಮ ಸಾಂಕರ್ಯಗಳನ್ನು ಚಿಂತಿಸಲಾಗಿದೆ. ಜ್ಯೋತಿಷ್ಟೋಮದಲ್ಲಿ - ವಿಕಲ್ಪವೂ ಪೃಷ್ಠಸ್ತೋತ್ರದಲ್ಲಿ ವಿಹಿತ ವಾದದ್ದು - ಬೃಹತ್ ಪೃಷ್ಠವಾಗುತ್ತದೆ. ರಥನ್ತರವು ಪೃಷ್ಠವಾಗುತ್ತದೆ. ಈ ಎರಡರ ಧರ್ಮಗಳೂ ತಾಂ.ಮ.ಬ್ರಾ. ೭.೭.೯ರಲ್ಲಿ ಹೀಗೆ ವಿವರಿಸಲ್ಪಟ್ಟಿವೆ. ಬೃಹತೀ ಗಾನ ಮಾಡುವಾಗ ಮನಸ್ಸಿನ

ಲ್ಲಿ ಸಮುದ್ರವನ್ನು ಧ್ಯಾನಿಸುತ್ತಿರಬೇಕು. ರಥನ್ತರವನ್ನು ಗಾನ ಮಾಡುವಾಗ ಕಣ್ಣನ್ನು ಮುಚ್ಚಿರಬೇಕು ಇತ್ಯಾದಿ ಪೃಷ್ಠಸಿದ್ಧಿಲಕ್ಷಣವಾದ ಕಾರ್ಯದ ಏಕತೆಯನ್ನು ಪಡೆಯಲು ಈ ಎರಡನ್ನೂ ಸಂಕೀರ್ಣ ಗೊಳಿಸಬೇಕು ಎಂದರೆ ನಿರ್ದೇಶನ ಭೇದದಿಂದ ಕೂಡದು ಸಾಂಕರ್ಯದ ವಿಲಕ್ಷಣತೆಯಿಂದಾಗಿ ಬೃಹತ್‌ಗೆ ಹೀಗೆ ರಥನ್ತರಕ್ಕೆ ಹೀಗೆ ಎಂದು ಎರಡು ನಿರ್ದೇಶನಗಳು ಸಾಧುವಲ್ಲ. ಈ ಎರಡೂ ಗಾನಗಳ ಧರ್ಮ ಪರಸ್ಪರ ವಿರುದ್ಧವಾದದ್ದು. ಎತ್ತರದ ಧ್ವನಿಯಲ್ಲಿ ಶಕ್ತಿಯುತವಾಗಿ ಗಾನ ಮಾಡಬೇಕೆಂಬುದು ಬೃಹದ್ಗಾನದ ಧರ್ಮ. ಎತ್ತರದ ಧ್ವನಿಯಲ್ಲಿ ಶಕ್ತಿಯುತವಾಗಿ ಗಾನ ಮಾಡಬಾರದೆಂಬುದು ರಥನ್ತರ ಗಾನದ ಧರ್ಮ - ಹೀಗೆ ಉಭಯ ಧರ್ಮ ಗಳು ಶಾಸ್ತ್ರೋಕ್ತವಾಗಿ ನಿರ್ಣಯಿಸಲ್ಪಟ್ಟು ವ್ಯವಸ್ಥಿತ ವಾಗಿವೆ.

ಜೈ.ನ್ಯಾ.ವಿ. ೯.೨.೧೬ರಲ್ಲಿ ಹೀಗೆ ಹೇಳಿದೆ : ವೈಶ್ಯ ಸ್ತೋಮದಲ್ಲಿ ಕಣ್ವ ರಥನ್ತರ ಗಾನವು ಪೃಷ್ಠಸ್ತೋತ್ರವಾಗಿರುತ್ತದೆಂದು ತಾಂ.ಮ.ಬ್ರಾ. ೧೮.೪.೭ ತಿಳಿಸುತ್ತಿದೆ. ಅಲ್ಲಿ ಕಣ್ವ ರಥನ್ತರ ಸಾಮ ಊಹ - ೧೨೪, ಪೃಷ್ಠಸ್ತೋತ್ರ ಸಾಧನೆಗಾಗಿ ಪ್ರಕೃತಿಗಾನದ ಬೃಹದ್ರಥನ್ತರ ಗಳೆರಡರ ಸ್ಥಾನದಲ್ಲಿ ಬರುವುದರಿಂದ ಉಭಯ ಸಂಬಂಧಿ ಧರ್ಮಗಳು ಸಮುಚ್ಚಯವಾಗಿ ರಬೇಕಾಗುತ್ತದೆ. ಎತ್ತರದ ಧ್ವನಿಯಲ್ಲಿ ಗಾನ ಮಾಡ ತಕ್ಕದ್ದು, ಎತ್ತರದ ಧ್ವನಿಯಲ್ಲಿ ಗಾನ ನಿಷೇಧ ಎಂಬೆರಡು ಪರಸ್ಪರ ವಿರುದ್ಧ ಧರ್ಮಗಳು ವಿಕಲ್ಪಾನ್ತವಾಗಿರುವುದರಿಂದಲೂ ಸಮುದ್ರಧ್ಯಾನ ನಿಮೀಲಿತಾದಿಗಳಲ್ಲಿ ವಿರೋಧವಿಲ್ಲದ್ದ ರಿಂದಲೂ ಪ್ರತ್ಯೇಕ ನಿರ್ದೇಶಭೇದ ವನ್ನೇನೂ ಹೇಳಿಲ್ಲವಾಗಿ ಸಮುಚ್ಚಯವೆಂಬುದು ಭಾಷ್ಯಕಾರರ ಅಭಿಪ್ರಾಯವಾಗಿದೆ. ವಿಕಲ್ಪ ಗಳೆರಡರ ಸ್ಥಾನದಲ್ಲಿ ಪಠಿತವಾಗಿರುವುದ ರಿಂದಲೂ ವಿರೂಢ ಅಂದರೆ ಮೇಲಕ್ಕೇಳುವ ಧರ್ಮ ಸ್ವಾರಸ್ಯದಿಂದಲೂ **'ಸಮುಚ್ಚಯ'** ವಾಗುವುದಿಲ್ಲವಾಗಿ ವಿಕಲ್ಪವೇ ಸರಿ ಎಂಬುದು ವಾರ್ತಿಕಕಾರರ ಅಭಿಪ್ರಾಯ. ಈ ಎರಡೂ ಮತಗಳು ವಿಪರೀತ ವಾಗಿರುವುದನ್ನು ಪೂರ್ವ ಪಕ್ಷವೆಂದು ಊಹಿಸತಕ್ಕದ್ದು. ಜೈ.ನ್ಯಾ.ವಿ. ೯.೨.೧೭ - ಗೋಸ ವಾದಿಗಳಲ್ಲಿ ಬೃಹದ್ರಥನ್ತರ ಸಾಮ ದ್ವಯ ಸಾಧ್ಯವಾದ ಪೃಷ್ಠಸ್ತೋತ್ರವು ವಿಹಿತವಾದದ್ದು. ಅಲ್ಲಿ ಪೃಷ್ಠಸ್ತೋತ್ರದ ಐಕ್ಯತ್ವವು ಧರ್ಮದ ವ್ಯವಸ್ಥೆಯಿಂದ ಸಂಭವಿಸುವುದಿಲ್ಲವಾಗಿ ಬೃಹತಿಯಲ್ಲೂ ರಥನ್ತರ ದಲ್ಲೂ ಉಭಯಧರ್ಮವೂ ಕರ್ತವ್ಯವಾಗಿರುತ್ತದೆ.

ಹೀಗಾದರೆ ಸಾಂಕರ್ಯವಾಗುತ್ತದೆಂದರೆ ಆಗುವುದಿಲ್ಲ. ಏಕೆಂದರೆ ಇವು ಪೃಷ್ಠ ಸ್ತೋತ್ರ ಪ್ರಯುಕ್ತ ಧರ್ಮವಾಗಿರದೆ ಸಾಮಪ್ರಯುಕ್ತ ಧರ್ಮವಾಗಿರುತ್ತವೆ. ಸಾಮಗಳಲ್ಲಿನ ಭೇದದಿಂದ ಧರ್ಮಗಳು ವ್ಯವಸ್ಥೆಗೊಳ್ಳುತ್ತವೆ. ಹೀಗೆ ವ್ಯವಸ್ಥಿತ ಧರ್ಮಗಳಿಂದ ಕೂಡಿರುವ

ಬೃಹದ್ರಥನ್ತರ ಹೆಸರಿನ ಸಾಮಗಳೆರಡರಿಂದ ರಹಸ್ಯ ೧೫೮,೧೫೯ ಉದಯವಾದ ಸ್ತೋತ್ರದ ವೈದಿಕ ನಾಮಧೇಯವೇ 'ಪೃಷ್ಠಮ್' ಶಬ್ದ ವಾಗಿದೆ. ತ್ರಿವೃತ್ ಶಬ್ದವು ವೇದ ಪ್ರಸಿದ್ಧ ಅರ್ಥದಲ್ಲಿ ಗ್ರಹಿಸಲ್ಪಟ್ಟಿರುವಂತೆಯೇ ಪೃಷ್ಠ ಶಬ್ದವೂ ಸಹ ತ್ರಿವೃತ್ ಶಬ್ದವನ್ನು ಜೈನ್ಯಾ.ವಿ.೧.೩.೫ರಲ್ಲಿ ವಿವೇಚಿಸಲಾಗಿದೆ. **ತ್ರಿವೃದ್ಬಹಿಷ್ಪವ ಮಾನಮ್** ಬಗೆಗೆ ತಾಂ.ಮ.ಬ್ರಾ.೨.೧.೪೩ ತ್ರಿವೃತ್ ಶಬ್ದವು ಲೋಕಪ್ರಸಿದ್ಧವಾದ ತ್ರೈಗುಣ್ಯದ ಅರ್ಥದಲ್ಲಿದ್ದರೂ ವಾಕ್ಯದ ಸಂದರ್ಭದಲ್ಲಿ ಬಹಿಷ್ಪವಮಾನಾದಿ ಸ್ತೋತ್ರಗಳು ಉದಯವಾಗಲು ಸಾಮರ್ಥ್ಯ ಹೊಂದಿರುವ ಮೂರು ಋಕ್ಕುಗಳ ವ್ಯವಸ್ಥೆಯೇ **ತ್ರಿವೃತ್ ಉಪಾಸ್ಮೈಗಾಯತಾ ನರಃ** ೬೫೧, ಇತ್ಯಾದಿ ಋಚೆಗಳಿಗೆ ನವಕವೆಂಬ ಹೆಸರಿದೆ. ತಾಂ.ಮ.ಬ್ರಾ. ೨.೫.೩ದಲ್ಲಿ ಹೇಳಿರುವಂತೆ ಧರ್ಮ ನಿರ್ಣಯಕ್ಕೆ - ವೇದ ಪ್ರಬಲವಾದರೂ ಪದ ಮತ್ತು ಪದಾರ್ಥ ನಿರ್ಣಯಿಸಲು ಲೋಕ ಮತ್ತು ವೇದ ಎರಡೂ ಸಮಾನ ಬಲವಿರುವುದರಿಂದ ಎರಡೂ ಅರ್ಥವನ್ನು ವಿಕಲ್ಪವಾಗಿ ಗ್ರಹಿಸಬಹುದಾಗಿದೆ ಎಂದರೆ ಇದು ಸರಿಯಲ್ಲ. ಲೌಕಿಕಾರ್ಥ ಸ್ವೀಕರಿಸುವ ಪಕ್ಷದಲ್ಲಿ ವಿಧಿವಾಕ್ಯದಲ್ಲಿ ತ್ರೈಗುಣ್ಯವೆಂಬ ಅರ್ಥವೂ ಅರ್ಥವಾದವಾಕ್ಯದಲ್ಲಿ ಸ್ತೋತ್ರೀಯಗಳ ಋಚೆಗಳಿಗೆ ನವಕವೆಂದೂ ಅರ್ಥ. ವಿಧ್ಯರ್ಥ ವಾದದಲ್ಲಿ ಎರಡೂ ಅಧಿಕರಣಗಳಲ್ಲಿ ಏಕವಾಕ್ಯತ್ವವಿಲ್ಲ. ಆದುದರಿಂದ ಏಕವಾಕ್ಯದ ಕಾರಣದಿಂದ ಸ್ತೋತ್ರೀಯಗಳಲ್ಲಿನ ನವಕವೆಂಬ ಅರ್ಥವೇ ವಿಧಿವಾಕ್ಯದಲ್ಲಿ ಸೂಕ್ತವಾದದ್ದು. ಪೃಷ್ಠ ಶಬ್ದದ ನಾಮಧೇಯವನ್ನು ಜೈ.ನ್ಯಾ.ವಿ.೧.೪.೩ರಲ್ಲಿ ಚಿತ್ರ ಶಬ್ದದಂತೆ ನಿರ್ಣಯಿಸತಕ್ಕದ್ದು ಎಂದಿದೆ.

ಪಶುಕಾಮನಾದವನು '**ಚಿತ್ರಾ**'ದಿಂದ ಯಜ್ಞ ಮಾಡಬೇಕು. ಇಲ್ಲಿ ಚಿತ್ರಾ ಶಬ್ದವು ಉದ್ಭಿಚ್ಚಬ್ದದಂತೆ ಯೌಗಿಕ ಶಬ್ದವಲ್ಲ - ಉದ್ಭಿತ್ ಶಬ್ದದ ಯೌಗಿಕತ್ವದಿಂದಲೂ ಮತ್ವರ್ಥ ಲಕ್ಷಣದಿಂದಲೂ ಯಾಗದ ನಾಮಧೇಯವಾಗಿದೆ. ಆದುದರಿಂದ ಪಶುಕಾಮ ನಾದವನು ಉದ್ಭಿದಾ ಯಜ್ಞವನ್ನು ಮಾಡಬೇಕು ಎಂಬ ವಾಕ್ಯದಿಂದ ಫಲ ಪಡೆಯುವ ವಿಧಾನವಾಗಲೀ ಅದರ ಗುಣಗಳಾಗಲೀ ವ್ಯಕ್ತವಾಗುವುದಿಲ್ಲ. ವಾಕ್ಯ ಭೇದದಿಂದ '**ಉದ್ಭಿದ್**' ಎಂದು ಮಾತ್ರ ಅರ್ಥ ಕಲ್ಪಿತವಾಗುತ್ತದೆ. ಗತ್ಯನ್ತರವಾಗಿರುವುದರಿಂದ ಇದು ಅಷ್ಟು ಸಾಧುವಲ್ಲ. ಹೀಗಾಗಿ ಉದ್ಭಿನ್ನಾಮಕ ಯಾಗದಿಂದ ಪಶುವನ್ನು ಭಾವಿಸಿ ಕೊಳ್ಳಬೇಕು ಎಂಬುದೇ ಸಾಧುವಾದುದು. ಈ ವಿಚಾರಗಳನ್ನು ಜೈ.ನ್ಯಾ.ವಿ. ೧.೪.೩ರಲ್ಲಿ ಲೌಗಾಕ್ಷಿ ಆದಿ ಮೀಮಾಂಸಕರು ಸ್ಫುಟವಾಗಿ ಚರ್ಚಿಸಿದ್ದಾರೆ - ಆದರೆ ರೂಢಿವಶದಿಂದ '**ಚಿತ್ರತ್ವ ಸ್ತ್ರೀತ್ವ**' ಎಂಬ ಹೆಸರಿದೆ. ಹೀಗಾಗಿ ಪೂರ್ವನ್ಯಾಯದಂತೆ ಈ ಹೆಸರು ಸರಿಯಲ್ಲ. ಹೀಗಿರುವಲ್ಲಿ ಅಗ್ನಿಷ್ಟೋಮ ಯಾಗದಲ್ಲಿ ಪಶುವನ್ನು ಆಲಭನ ಅರ್ಪಿಸುತ್ತಾರೆ ಎಂಬ ಸಂದರ್ಭದಲ್ಲಿ ವಿಹಿತ ಪಶುಯಾಗವನ್ನು ಸೂಚಿಸುವುದಕ್ಕಾಗಿ '**ಯಜ್ಞ ಮಾಡುತ್ತಾರೆ**' ಪದದಿಂದ ಆ ಪಶುವಿನಲ್ಲಿ ಚಿತ್ರತ್ವ/ ಸ್ತ್ರೀತ್ವ

ಎಂಬೆರಡು ಗುಣಗಳನ್ನೂ ಅವುಗಳ ವಿಧಾನವನ್ನೂ ವಾಕ್ಯದಲ್ಲಿ ಹೆಸರಿಸಿ ಗುರುತಿಸಲಾಗಿದೆ - ಆದುದರಿಂದ ಕರ್ಮದ ಆಚರಣೆಯ ಸಂದರ್ಭದಲ್ಲಿ ಅನೇಕ ಗುಣಗಳನ್ನು ವಿಧಿಸಲಾಗುವುದಿಲ್ಲ. ಅನೇಕ ಗುಣಗಳಲ್ಲಿ ಒಂದನ್ನು ಮಾತ್ರ ವಿಧಿಸಲಾಗುತ್ತದೆ.

ವಾಕ್ಯಭೇದವನ್ನು ಪರಿಹರಿಸಲು ಗುಣದ್ವಯ ವಿಶಿಷ್ಟವಾದ ಪಶುದ್ರವ್ಯ ರೂಪಕಾರಕವಾದುದನ್ನು ವಿಧಿಸಲಾಗುತ್ತದೆ. ಇದರಿಂದ ಅದಕ್ಕೆ ಮಹತ್ವ ಸಿಗುತ್ತದೆ. ಆದುದರಿಂದ '**ಚಿತ್ರಾ**' ಶಬ್ದವು ಪೂರ್ವದಂತೆ '**ಯಜ್**' ಸಮಾನಾಧಿಕರಣದಿಂದ ಯಾಗದ ಹೆಸರಾಗುತ್ತದೆ. ಚಿತ್ರತ್ವವು ಅದರ ವಿಲಕ್ಷಣ ದ್ರವ್ಯದ ಮೂಲಕಬಂದದ್ದಾಗಿದೆ. ಮೊಸರು, ಜೇನುತುಪ್ಪ ನೀರು, ಅಕ್ಕಿಹಿಟ್ಟುಗಳಿಂದ ಸಿದ್ಧವಾದದ್ದು '**ಪ್ರಾಜಾಪತ್ಯ**' ಎಂದರೆ ಮೊಸರು ಆದಿ ಬೇರೆಬೇರೆ ಅರ್ಪಿಸಬೇಕಾದ ದ್ರವ್ಯಗಳು ಆರು ಎಂದು ಶ್ರುತಿ ತಿಳಿಸಿದೆ. ಅದೇ '**ಚಿತ್ರಾ**' ಹೆಸರಿನ ಯಾಗದಲ್ಲಿ ಉತ್ಪತ್ತಿ ವಾಕ್ಯವು ಯಾಗಸ್ವರೂಪಭೂತವಾದ ದಧ್ಯಾದಿ ದ್ರವ್ಯಗಳನ್ನೂ ಪ್ರಜಾಪತಿ ದೇವತೆಯನ್ನೂ ಇಲ್ಲಿ ಉಪದೇಶಿಸಿರುವುದರಿಂದ ಉತ್ಪನ್ನವಾದ ಆ ಯಾಗದ ಚಿತ್ರಯಾ ಯಜೇತ ಪಶುಕಾಮ ಎಂಬುದು ಫಲವಾಕ್ಯವಾಗಿದೆ. ಇದರಿಂದ ಪ್ರಕೃತವಾದ ಅರ್ಥ ಗೊತ್ತಾಗುತ್ತದೆ.

ಅಗ್ನಿಷ್ಟೋಮೀಯ ವಾಕ್ಯದಲ್ಲಿ ಪಶ್ವನುವಾದದಿಂದ ಗುಣವನ್ನು ವಿಧಿಸಿದರೆ ವಿಧಿವಾಕ್ಯಕ್ಕೆ ಅಪ್ರಧಾನ್ಯತೆಯೂ ಪ್ರತಿಷೇಧ ವಾಕ್ಯಕ್ಕೆ ಪ್ರಾಧಾನ್ಯತೆಯೂ ಉಂಟಾಗಿ '**ಲಿಜ್**' ಪ್ರತ್ಯಯದಿಂದ ಅಂಗೀಕಾರವು ಮುಖ್ಯವಾಗಿ ವಿಧ್ಯರ್ಥವು ಬಾಧಿತವಾಗುತ್ತದೆ. ಆದುದರಿಂದ '**ಚಿತ್ರಾ**' ಪದಕ್ಕೆ ನಾಮಧೇಯತ್ವ ಸಿದ್ಧವಾಗಿರುವಂತೆಯೇ ಬಹಿಷ್ಪವಮಾನ ಶಬ್ದದಲ್ಲಿ ಆಜ್ಯ ಶಬ್ದದಲ್ಲಿ ಮತ್ತು ಪೃಷ್ಟ ಶಬ್ದದಲ್ಲಿ ಕೂಡ ಆಯಾ ಕರ್ಮದ ನಾಮಧೇಯವನ್ನೇ ಯೋಜಿಸತಕ್ಕದ್ದು. ಇದೇ ಅಭಿಪ್ರಾಯವು ಶ್ರುತಿಯದೂ ಆಗಿದೆ - **ತ್ರಿವೃದ್ಬಹಿಷ್ಪವಮಾನಮ್, ಪಂಚದಶಾನ್ಯಾಜ್ಯಾನಿ, ಸಪ್ತದಶಾನಿ ಪೃಷ್ಠಾನಿ** ಮುಂತಾದವು ಪ್ರಸ್ತುತ ವಾಕ್ಯದ ಅರ್ಥಗಳನ್ನೇ ಸ್ಪಷ್ಟಪಡಿಸುತ್ತವೆ. ಸಾಮಗಾನದ ಉತ್ತರಗ್ರಂಥಗಳಲ್ಲಿನ ತೃಚಾತ್ಮಕ ಸೂಕ್ತಗಳು ಉಪಾಸ್ಮೈ ಗಾಯತಾನರಃ ೬೫೧, ಎಂಬ ಮೊದಲನೆಯದು ವಿದ್ಯುತತ್ಯಾ ಋಚಾ ೬೫೪ ಎಂಬ ಎರಡನೆಯದು **ಪವಮಾನಸ್ಯತೇ ಕವೇ** ೬೫೭, ಎಂಬ ಮೂರನೆಯದು ಈ ಮೂರು ಸೂಕ್ತಗಳಲ್ಲಿ ಗಾಯತ್ರ ಸಾಮವು ಜ್ಯೋತಿಷ್ಟೋಮದ ಪ್ರಾತಃ ಸವನಾನುಷ್ಠಾನದಲ್ಲಿ ಗಾನಮಾಡಲ್ಪಡಬೇಕು. ಈ ಸೂಕ್ತ ತ್ರಯಗಾನ ಸಾಧ್ಯ ಸ್ತೋತ್ರವೇ ಬಹಿಷ್ಪವಮಾನವೆನಿಸಿಕೊಳ್ಳುವುದು.

ಇಲ್ಲಿರುವ ಋಚೆಗಳಿಗೆ ಪವಮಾನಾರ್ಥವಾಗಿ ಬಾಹ್ಯ ಸಂಬಂಧವಾಗಿರುವುದರಿಂದ ಇತರ ಸ್ತೋತ್ರಗಳಂತೆ ಇದೇನೂ ಸ್ತೋತ್ರವಲ್ಲ. '**ಸದೋ**' ಎಂಬ ಹೆಸರಿನ ಮಂಟಪದ

ಮಧ್ಯೆ ಅತ್ತಿಮರದ ಸ್ತಂಭ/ ಕೊಂಬೆಯ ಸನ್ನಿಧಿಯಲ್ಲಿ ಸದಸ್ಸಿನ ಹೊರಗೆ ಓಡಾಡುತ್ತಾ ಪಠಿಸಲು ಇದು ಬಹಿಷ್ಪವಮಾನದಲ್ಲಿ ತ್ರಿವೃತ್ ಸ್ತೋಮವೆಂಬ ಹೆಸರನ್ನು ಪಡೆದಿದೆ. ತಾಂ.ಮ.ಬ್ರಾ. ೨.೧.೧.ರಲ್ಲಿ ಈ ಸ್ತೋಮವನ್ನು ವಿಧಾಯಕ ಮಾಡಿದೆ. ಪ್ರಥಮದಿಂದಲೂ ಮಧ್ಯಮದಿಂದಲೂ ತೃತೀಯದಿಂದಲೂ ಮೂರುಬಾರಿ ಪಠಿಸಬೇಕು ಅಂದರೆ ಮೂರು ಸೂಕ್ತಗಳಲ್ಲಿ ಪಠಿಸಲಾಗುವ ಒಂಬತ್ತು ಋಚೆಗಳ ಗಾನವನ್ನು ಮೂರು ಪರ್ಯಾಯಗಳಲ್ಲಿ ಮಾಡತಕ್ಕದ್ದು, ಪ್ರಥಮ ಪರ್ಯಾಯದಲ್ಲಿ ಮೊದಲ ಮೂರು ಋಚೆಗಳಿಂದ ಎರಡನೆಯ ಪರ್ಯಾಯದಲ್ಲಿ ಮಧ್ಯಮದ ಮೂರು ಋಚೆಗಳಿಂದ ಮೂರನೆಯ ಪರ್ಯಾಯದಲ್ಲಿ ಕಡೆಯ ಮೂರು ಋಚೆಗಳಿಂದ ತೃತೀಯಾ ವಿಭಕ್ತಿ ಸ್ಥಾನದಲ್ಲಿ ಪಂಚಮೀ ವಿಭಕ್ತಿಯಿಂದ ಗಾನ ಮಾಡಬೇಕು. ಸಾಯಂ ಸವನದಲ್ಲಿ ವಿಧಿ ಪ್ರಕಾರವಾಗಿ ಗಾನ ಮಾಡುವ ತ್ರಿವೃತ್ ಸ್ತೋಮವು, **ವಿಷ್ಟುತಿಃ**. ವಿಶಿಷ್ಟವಾದ ಸ್ತುತಿ ಪ್ರಕಾರವಾಗಿರುತ್ತದೆ. ಈ ವಿಷ್ಟುತಿಗೆ ಉದ್ಯತೀ ಎಂದೂ ಹೆಸರಿದೆ. ಇದಲ್ಲದೆ **ಪರಿವರ್ತಿನೀ ಕುಲಾಯಿನೀ** ಎಂಬ ಎರಡು ಪ್ರಕಾರದ ವಿಷ್ಟುತಿಗಳಿವೆ.

**ಪರಿವರ್ತಿನೀ ಆವರ್ತಿನೀ** ಎಂಬುದಾಗಿ ಅಂದರೆ ಪ್ರಥಮ ಪರ್ಯಾಯದಲ್ಲಿ ಅನಾವೃತ್ತಗಾನವು ಮುಂದೆ ಆವೃತ್ತಿಯಿಂದ ಕೊನೆಯಾಗುತ್ತದೆ ಎಂದು ತಾಂ.ಮ.ಬ್ರಾ. ೨.೨.೧-೪ ತಿಳಿಸುತ್ತಿದೆ. ಅವುಗಳಲ್ಲಿ ಆವರ್ತನೆಯನ್ನೇ ಶ್ರುತಿ ಬಯಸುತ್ತದೆ. **ತಿಸೃಭ್ಯೋ .... ವಿಷ್ಟುತಿಃ** ಹಿಮ್ಮುಖವಾಗಿಯೂ ವ್ಯತ್ಯಸ್ತವಾಗಿಯೂ ಪರಾಚೀ - ಹಿಂದಕ್ಕೆ ಮುಂದಕ್ಕೆ ಗಾನಮಾಡುವ ಪಾಠಕ್ರಮದ ಬಗೆಗೆ ತಿಳಿಸುತ್ತಿದೆ. **ಕುಲಾಯೋ ನೀಡಂ** - ಪಕ್ಷಿಗಳ ಗೂಡು - ಪಕ್ಷಿಗಳು ತಮ್ಮ ಗೂಡುಗಳನು ಹುಲ್ಲು ಮುಂತಾದವುಗಳನ್ನು ವ್ಯತ್ಯಸ್ತವಾಗಿ ಪದರ ಪದರವಾಗಿ ಹಾಸಿ ಮಾಡಿಕೊಳ್ಳುವಂತೆ ವ್ಯತ್ಯಸ್ತವಾದ ಋಚೆಗಳಿಂದ ಉದಯವಾಗುವ ಸಾಮಗಳ ಗಾನಪ್ರಕಾರವು ಈ ನಿರ್ಬಂಧದಿಂದ ಪರಿವರ್ತನವಾಗುವಂತಹ ಪ್ರಥಮ ಪರ್ಯಾಯ - ಎರಡನೆಯ ಪರ್ಯಾಯದಲ್ಲಿ ಹಿಮ್ಮುಖವಾಗಿ ವ್ಯವಸ್ಥಿತವಾದ ಋಚೆಗಳ ಮೇಲೆ ಮಾಡುವ ಗಾನ ಅಂದರೆ ಮಧ್ಯದರ ಮೇಲೆ ಮುಂಚಿನದು, ನಂತರ ಮೊದಲನೆಯದರ ಮೇಲೆ ನಂತರ ಮೂರನೆಯದರ ಮೇಲೆ ಮಾಡುವ ಗಾನ ತೃತೀಯ ಪರ್ಯಾಯದಲ್ಲಿ ವೇದಸಂಹಿತೆಯಲ್ಲಿರುವ ಪ್ರಕಾರ ಉದಯವಾಗುವ ಗಾನ - ತಾಂ.ಮ.ಬ್ರಾ. ೨.೩.೧-೭.

ಪಾಠದ ಕ್ರಮವೇ, ಹೀಗಿರುತ್ತದೆ. ಎರಡನೆಯದರಲ್ಲಿ ಎರಡನೆಯ ಮೂರನೆಯ ಪ್ರಥಮದ ಈ ಕ್ರಮವಿರುತ್ತದೆ. ಮೂರನೆಯದರಲ್ಲಿ ಮೂರನೆಯದು ಮೊದಲನೆಯದು

ಎರಡನೆಯದು ಈ ಕ್ರಮವಿರುತ್ತದೆ. ಹೀಗೆ ವ್ಯತ್ಯಯದಿಂದ ಮನ್ತ್ರಗಳನ್ನು ಗಾನ ಮಾಡತಕ್ಕದ್ದು. ಇದು ವಿಷ್ಟುತಿ ತ್ರಯಂ ಎಂದು ಕಲ್ಪಿಸಲ್ಪಟ್ಟಿದೆ. ತ್ರಿವೃತ್ ಶಬ್ದದಿಂದ ಈ ಬಗೆಯು ಸ್ತೋಮಸ್ವರೂಪವೆಂದು ತಿಳಿಯಬೇಕು. ಉತ್ತರ ಗ್ರಂಥಗಳಲ್ಲಿ ಬಹಿಷ್ಪವಮಾನ ಸೂಕ್ತಗಳಿಂದ ಮೂರಕ್ಕಿಂತ ಹೆಚ್ಚಾದ ನಾಲ್ಕು ಸೂಕ್ತಗಳು ಪಠಿತವಾಗಿವೆ. ಅಗ್ನ ಆಯಾಹಿ ವೀತಯೇ ಋ. ೬೬೦-೬೬೨ಗಳ ಮೊದಲ ಸೂಕ್ತ, ಆನೋಮಿತ್ರಾ ವರುಣಾ ಋ. ೬೬೩-೬೬೫ಗಳ ಎರಡನೆಯ ಸೂಕ್ತ ಆಯಾಹಿ ಸುಷುಮಾ ೬೬೬-೬೬೮ಗಳ ಮೂರನೆಯ ಸೂಕ್ತ **ಇಂದ್ರಾಗ್ನೀ ಆಗತಂ ಸುತಮ್** ೬೬೯, ೬೭೦,೬೭೧ ನಾಲ್ಕನೆಯ ಸೂಕ್ತ, ಇವೆಲ್ಲವನ್ನೂ ಪ್ರಾತಃ ಸವನದಲ್ಲಿ ಗಾಯತ್ರಸಾಮದಂತೆ ಗಾನ ಮಾಡುವುದನ್ನು 'ಚತ್ವಾರ್ಯ್ಯಾರ್ಯ್ಯ ಸ್ತೋತ್ರಾಣಿ' ಎನ್ನಲಾಗುತ್ತದೆ. ಇದರ ನಿರ್ವಚನ - **ಯದಾ ಜಿಮೀಯುಸ್ತದಾಜ್ಯಾನಾಮಾಜ್ಯತ್ವಮ್** ತಾಂ.ಮ.ಬ್ರಾ.೭.೨.

ಆಜ್ಯ ಸ್ತೋತ್ರಗಳಲ್ಲಿ ಪಂಚ ದಶಸ್ತೋಮವೆಂಬುದೊಂದು ಇದೆ. ಇದರಲ್ಲಿ **'ವಿಷ್ಟುತಿ ಸ್ತೋಮ'** ವೆಂಬುದು ಒಂದು **ಪಂಚಭ್ಯೋ ....ತಿಸೃಭಿಃ** ಇತಿ ಎಂಬ ತಾಂ.ಮ.ಬ್ರಾ. ವಿವರಣೆಯಂತೆ ನಾಲ್ಕರಿಂದ ಆರಂಭವಾಗುವ ಮೂರು ಖಂಡಗಳಲ್ಲಿ ಪಠಿಸಿರುವ ಮೂರು ವಿಷ್ಟರಗಳಲ್ಲಿ ಇದು ಮೊದಲನೆಯದು. ಇಲ್ಲಿ ಒಂದೇ ಪರ್ಯಾಯದಲ್ಲಿ ಐದು ಋಚೆಗಳು ಸಮಾವೇಶ ವಾಗಿರುವುದರಿಂದ 'ಪಂಚ ಪಂಚನಿ' ಎಂದು ಪ್ರಸಿದ್ಧವಾಗಿದೆ. ಒಂದು ಸೂಕ್ತವು ಮೂರು ಬಾರಿ ಪಠಿಸಲ್ಪಡುತ್ತದೆ. ಇದರ ಪ್ರಥಮಾವೃತ್ತಿಯಲ್ಲಿ ಮೊದಲಋಚೆ ಮೂರು ಬಾರಿಯೂ ದ್ವಿತೀಯಾವೃತ್ತಿಯಲ್ಲಿ ಮಧ್ಯಮಋಚೆ ಮೂರುಬಾರಿಯೂ ತೃತೀಯಾವೃತ್ತಿ ಯಲ್ಲಿ ಕಡೆಯತೃಚೆ ಮೂರು ಬಾರಿಯೂ ಪಠಿಸಲ್ಪಡುವುದರಿಂದ ವಿಷ್ಟುತಿ ತ್ರಯಾತ್ಮಕ ವಾಗಿದೆ. ಪಂಚದಶ ಸ್ತೋಮವೂ ಮೂರು ಪ್ರಕಾರವಾಗಿದ್ದು ಇದು ಮೊದಲ ಪ್ರಕಾರ ವಾಗಿದೆ.

ಮೇಲೆ ತಿಳಿಸಿರುವ ನಾಲ್ಕು ಸೂಕ್ತಗಳಾದ ನಂತರದ ಊಹದ ಮೂರು ಮಾಧ್ಯನ್ದಿನ ಪವಮಾನ ಸೂಕ್ತಗಳನ್ನು ಪಠಿಸಿದ ನಂತರ ನಾಲ್ಕು ಸೂಕ್ತಗಳು ಪಠಿಸಲ್ಪಡುತ್ತವೆ. ಅವುಗಳಲ್ಲಿ **ಅಭಿತ್ವಾ ಶೂರನೋ** ಋ. ೬೮೦, ಮೊದಲನೆಯದಾಗಿಯೂ **ಕಯಾನಶ್ಚಿತ್ರ ಆಭುವತ್** ೬೮೨ ಎರಡನೆಯದಾಗಿಯೂ, **ತಂವೋದಸ್ಮಮೃತೀಷಹಮ್** ೬೮೫, ಮೂರನೆಯದಾಗಿಯೂ **ತರೋಭಿರ್ವೋ ವಿದದ್ವಸುಮ್** ೬೮೭, ನಾಲ್ಕನೆಯದಾಗಿಯೂ ಕ್ರಮವಾಗಿ ಗಾನ ಮಾಡ ಬೇಕಾದ **ರಥನ್ತರ** ರಹ.೧., **ವಾಮದೇವ್ಯ** ಊಹ.೫, **ನೌಧಸಂ** ಊಹ ೬, **ಕಾಲೇಯ** ಊಹ.೭, ಸಾಮಗಳು ಮಾಧ್ಯನ್ದಿನ ಸವನದಲ್ಲಿ ಪೃಷ್ಠಸ್ತೋತ್ರಗಳೆನಿಸಿಕೊಂಡಿವೆ. ಸ್ಪರ್ಶ

ದಿಂದ ಸ್ಪೃಷ್ಠಾನಿ ಎಂದು ನಿರುಕ್ತದಲ್ಲಿ ತಿಳಿಸಿಯೂ ಇದೆ. ಈ ಸ್ತೋತ್ರಗಳಿಂದ 'ಸಪ್ತದಶ ಸ್ತೋಮ' ಗಳುಂಟಾಗುತ್ತವೆ.

ಸ್ತೋಮದ ವಿಷ್ಟುತಿಃ ತಾಂ.ಮ.ಬ್ರಾ.೨.೭.೧ರಲ್ಲಿ, ವಿವರಿಸಲ್ಪಟ್ಟಿರುವಂತೆ ಮೊದಲ ನೆಯ ಪರ್ಯಾಯದಲ್ಲಿ ಮೊದಲನೆಯ ಋಚೆಯನ್ನೂ, ಎರಡನೆಯ ಪರ್ಯಾಯದಲ್ಲಿ ಮಧ್ಯಮ ಋಚೆಯನ್ನೂ, ಮೂರನೆಯ ಪರ್ಯಾಯದಲ್ಲಿ ಮಧ್ಯದ ಋಚೆಯನ್ನೂ ಅಂತಿಮ ಋಚೆಯನ್ನೂ ಮೂರುಬಾರಿ, ಆವೃತ್ತಿ ಮಾಡುವುದರಿಂದ - ಇದು ಸಪ್ತದಶ ಸ್ತೋಮವೆನಿಸಿಕೊಳ್ಳುತ್ತದೆ. ಹೀಗೆ ಹೇಳಿರುವುದನ್ನು ಹಿಂದೆಯೇ ಒಪ್ಪಿದೆ. ಇಲ್ಲಿನ ಮೂರು ವಾಕ್ಯಗಳಲ್ಲೂ ತ್ರಿವೃತ್, ಪಂಚದಶ ಶಬ್ದಗಳು, ಗುಣವಿಧಾಯಕದವುಗಳೆಂದು ಮಾನ್ಯ ಮಾಡಲ್ಪಟ್ಟಿವೆ. ಬಹಿಷ್ಪವಮಾನ ಆಜ್ಯಪೃಷ್ಠಶಬ್ದಗಳೂ ಗುಣವಿಧಾಯಕ ವೆಂದರೆ ಎರಡು ಗುಣವಿಧಾನವಾಗಿ ಪ್ರತ್ಯುದಾಹರಣ ರೂಪದಲ್ಲಿ ವಾಕ್ಯಭೇದವೆಂದು ತಿಳಿಯಬೇಕು. ಆದುದರಿಂದ ಬಹಿಷ್ಪವಮಾನಾದಿ ಶಬ್ದಗಳೂ ಸ್ತೋತ್ರ ನಾಮಧೇಯ ವಾಗಿದ್ದು ಅವುಗಳ ಹೆಸರುಗಳಿಂದ ಕರ್ಮಗಳನ್ನು ಊಹೆ ಮಾಡದೆ ತ್ರಿವೃದಾದಿ ಗುಣಗಳು ವಿಧಿಸಲ್ಪಡುತ್ತವೆ ಎಂದು ಜೈ.ನ್ಯಾ.ವಿ. ೧.೪.೩ ತಿಳಿಸುತ್ತಿದೆ.

ಪಠಿಸಲಾದ ಪೃಷ್ಠಾದಿ ಸ್ತೋತ್ರದ ಪ್ರಧಾನ ಕರ್ಮತ್ವವು ಜೈ.ನ್ಯಾ.ವಿ. ೨.೧.೫ರಲ್ಲಿ ನಿರ್ಣಯಿಸಲ್ಪಟ್ಟಿದೆ. **'ಪ್ರಉಗ' 'ಶಂಸತೀ'** ಇತ್ಯಾದಿಗಳಲ್ಲಿ ಗುಣಾತೀತ ಪ್ರಧಾನತೆ ಇದೆ. ನೋಡುತ್ತಿದ್ದಂತೆಯೇ ಸ್ತುತಿಯಿಂದ ಗುಣಗಳನ್ನು ಹೊಗಳುವುದೇ ಸ್ತೋತ್ರಶಸ್ತ್ರಗಳು, ಸ್ತುತ್ಯರ್ಥದಿಂದಲೇ ಸ್ತುತಿ ಕೊಂಡಾಟಗಳು. ಇದರಿಂದಲೇ ಕೇಳಿಸಿಕೊಳ್ಳುವ ಅರ್ಹತೆ ಆದಿ ಅರ್ಥಕ್ಕೆ ಬಾಧೆಯುಂಟಾಗುತ್ತದೆ. ಇದರಿಂದ ಅದೃಷ್ಟಾರ್ಥಾದಿಗಳಿಗೆ ಪ್ರಾಧಾನ್ಯವೆಂಬುದು ಶ್ರುತಿಯ ಅಭಿಪ್ರಾಯ. ಹೀಗಾಗಿಯೇ **ಜ್ಯೋತಿಷ್ಟೋಮೇ ಶ್ರೂಯತೇ ....ಸ್ತುವತೇ** ಇತ್ಯಾದಿ ಇದಕ್ಕೆ ಉದಾಹರಣೆಗಳು.

**'ಪ್ರಉಗ' 'ನಿಷ್ಕೇವಲ್ಯ'** ಶಬ್ದಗಳು - ಶಸ್ತ್ರ ವಿಶೇಷಗಳ ಹೆಸರುಗಳು 'ಪ್ರಾಜ್ಯ' 'ಪೃಷ್ಠ' ಶಬ್ದಗಳನ್ನು ಹಿಂದೆ ವಿವರಿಸಿದೆ. ಅಗ್ರಗೀತ ಮನ್ತ್ರ ಸಾಧ್ಯವಾದ ಸ್ತುತಿ 'ಶಸ್ತ್ರ' ಪ್ರಗೀತ ಮನ್ತ್ರಸಾಧ್ಯವಾದಸ್ತುತಿ 'ಸ್ತೋತ್ರ' - ಸ್ತುತಿ ಶಸ್ತ್ರಗಳೆರಡರಲ್ಲೂ ಗುಣಕರ್ಮಗಳು ಕೂಡಿವೆ. ಹೇಗೆಂದರೆ - ತುಷ - ಅಕ್ಕಿಯ ಮೇಲಿನ ಹೊಟ್ಟು ಹೋಯಿತೆಂಬುದು ದೃಷ್ಟಾರ್ಥ ಫಲವನ್ನು ಪಡೆದ ನಂತರ ಅದಕ್ಕೆ ಅದೃಷ್ಟ ಫಲದ ಕಲ್ಪನೆ ಮಾಡುವಂತಿಲ್ಲ ವೆಂಬುದು ಸಿದ್ಧಾಂತ. ಪಠಿತವಾಗಿರುವ ಮನ್ತ್ರಗಳಿಂದ ದೇವತೆಗಳು ಸಂಸ್ಕಾರಗೊಳ್ಳುತ್ತವೆ ಎಂಬ ಪಕ್ಷದಲ್ಲಿ ಸ್ತೋತ್ರ ಮಾಡಿಸಿಕೊಳ್ಳುವ ದೇವತೆಗಳ ಹಾಗೂ ಸ್ತೋತ್ರ ಮಾಡುವವರ ಗುಣ

ಗಳೊಂದಿಗಿರುವ ಸಂಬಂಧವೇ ಕೀರ್ತನೆಯಾಗಿದ್ದು 'ಸ್ತುತಿ' 'ಶಂಸತಿ' ಧಾತುಗಳ ವಾಚ್ಯಾರ್ಥ ವಾಗಿದೆ.

ಮನ್ತ್ರ ವಾಕ್ಯಗಳು ಗುಣಸಂಬಂಧಗಳನ್ನು ಗುರುತಿಸುವಂತಾಗಿದ್ದಾಗ ಧಾತುಗಳು ಮುಖ್ಯಾರ್ಥಲಾಭಕ್ಕಾಗಿ ಶ್ರುತಿಯಿಂದ ಅನುಗ್ರಹಿಸಲ್ಪಡುತ್ತವೆ. ಗುಣಗಳ ಮೂಲಕ ಸ್ಮರಣೀಯವಾದ ದೇವತಾ ಸ್ವರೂಪಪ್ರಕಾಶನ ಪರವಾಗಿ ಮನ್ತ್ರವಾಕ್ಯಗಳಿದ್ದಾಗ ಧಾತುಗಳ ಮುಖ್ಯಾರ್ಥವಿರುವುದಿಲ್ಲ - ವ್ಯವಹಾರ ದಲ್ಲಿಯೂ **'ದೇವದತ್ತನು ಚತುರ್ವೇದಗಳನ್ನೂ ತಿಳಿದವನು'** ಎಂಬಲ್ಲಿ ಈ ವಾಕ್ಯವು ಗುಣದ ಮೂಲಕ ದೇವದತ್ತನ ಸ್ವರೂಪೋಪಲಕ್ಷಣ ಪರವಾಗಿಯೂ ಗುಣಸಂಬಂಧ ಪರವಾಗಿಯೂ ಇರುವುದರಿಂದ ಸ್ತುತಿಯೇ ಆಗಿರುತ್ತದೆ. ದೇವದತ್ತ ಸ್ವರೂಪ ಪರವಾದ **'ಆ ಚತುರ್ವೇದಿಗಳನ್ನು ಆಹ್ವಾನಿಸಿ'** ಎಂಬಲ್ಲಿ ಸ್ತುತಿಪ್ರಮೇಯವಿಲ್ಲ. ಏಕೆಂದರೆ ಚತುರ್ವೇದ ಸಂಬಂಧದಿಂದ ದೇವದತ್ತ ಸ್ವರೂಪದ ಪರವಾಗಿರುವುದರಿಂದ ಗುಣಸಂಬಂಧಪರವಾಗಿಲ್ಲ. ಹೀಗೆಯೇ ಆಜ್ಯದಿಂದ ದೇವತೆ ಯನ್ನು ಪ್ರಕಾಶಗೊಳಿಸು. ಪೃಷ್ಠಗಳಿಂದ ದೇವತೆಯನ್ನು ಪ್ರಕಾಶಗೊಳಿಸು, ಇತ್ಯಾದಿಗಳು ವಿಧ್ಯರ್ಥವಾಗಿದ್ದು, ಕಡೆಯಲ್ಲಿ ಧಾತುವಿನ ಮುಖ್ಯಾರ್ಥವು ಬಾಧಿಸಲ್ಪಡುತ್ತದೆ. ಹೀಗಾಗಿ ಧಾತು ಶ್ರುತಿಯಿಂದ ಬಾಧಿತವಾಗದಂತೆ ಸ್ತೋತ್ರ ಶಸ್ತ್ರಗಳು ಪ್ರಧಾನ ಕರ್ಮಪರವಾಗಿರುವು ವೆಂಬುದನ್ನು ಅಂಗೀಕರಿಸಬೇಕಾಗುತ್ತದೆ. ಹೀಗೆ ದೃಷ್ಟ ಪ್ರಯೋಜನವಿರುವುದಿಲ್ಲ ವೆಂದಾದರೆ - ಅಪೂರ್ವವಿರುತ್ತದೆ ಎಂದೇ ಇದರ ಆಶಯ.

ಇದೇ ಜೈ.ನ್ಯಾ.ವಿ. ೨.೨.೧೨ರಲ್ಲಿ ಸೂಚಿಸಿರುವಂತೆ ಸಾಮ ವಿಶೇಷಗಳ ವಿನಿಯೋಗದಿಂದಾಚರಿಸುವ ಅನ್ಯಕರ್ಮಗಳನ್ನು ಪರಿಶೀಲಿಸಬಹುದು. ಅಗ್ನಿಷ್ಟುತಮದಲ್ಲಿ ವಾರವನ್ತೀಯ ಸಾಮವನ್ನು ಗಾನ ಮಾಡುತ್ತಾ ಪಶುಫಲ ಪ್ರಾಪ್ತಿಗಾಗಿ ರೇವತಿ ಸಾಮದ ಋಚೆಯಿಂದ ಕಾರ್ಯ ನೆರವೇರಿಸಬೇಕೆಂದಿದೆ. ರೇವತ್ಯಾದಿಗಳ ಗುಣಕರ್ಮಗಳಿಗಿಂತ ಬೇರೆಯಾದ ಅಪೂರ್ವ ಎಂಬುದಿದೆ. ರೇವತೀ ವಾರವನ್ತೀಯ ಸಂಬಂಧದಿಂದ ಪಶುಪ್ರದ ರೂಪೀ ಫಲವಿದೆ. ಈ ಫಲ ಕರ್ಮಗಳೆರಡರ ಸಂಬಂಧದಿಂದ ಆಗಿರುವ ಸಾಮದ ಫಲವು ವಾಕ್ಯದ ಭಿನ್ನತೆಯಿಂದಾಗಿದೆಯಾಗಿ ಉಕ್ತವಾದ ಗುಣ ಸಂಯೋಗದಿಂದ ಫಲಕ್ಕಾಗಿ ಅನ್ಯವಾದ ಕರ್ಮವನ್ನು ಹೇಳಲಾಗಿದೆ. ತ್ರಿವೃದಗ್ನಿಷ್ಟೋಮದ ವಾಯವ್ಯಾದಿ ಋಚೆಗಳಲ್ಲಿ ಏಕವಿಂಶಾಗ್ನಿಷ್ಟೋಮವನ್ನು ಮಾಡಿದರೆ **'ಬ್ರಹ್ಮವರ್ಚಸ್ಕಾಮೋ ಯಜೇತ'** ಎಂಬ ಶ್ರುತಿ ವಚನವನ್ನು ಅನುಷ್ಠಾನಗೊಳಿಸಿ ದಂತಾಗುತ್ತದೆ.

**ತಾಂ.ಮ.ಬ್ರಾ. ೭.೧೭.೧ ಶ್ರುತಮೇತತ್ ಪರಮ ಋಚ್ಯಾದಿ ಕೃತ್ವೇತ್ಯನ್ತ ಪಾಠೋ ಅತ್ರ ಅಧಿಕೋ ಲಕ್ಷ್ಯತೇ । ತತಃ ತಸ್ಯಾ ಏವ ಶ್ರುತೇರಭಿಪ್ರೇತೋ ಅರ್ಥೋऽಯಂ ನ ತು ಸಾಕ್ಷಾತ್**

**ಶ್ರುತಿರಿತಿ ಗಮ್ಯತೇ ॥** ಇದೇ ತಾಂ.ಮ.ಬ್ರಾ ವಾಕ್ಯದ **ಏಕಸ್ಮೈವ.... ಯಜೇತ ।** ದ ಅಭಿಪ್ರಾಯ. ಅಗ್ನಿಷ್ಟೋಮದ ವಿಕೃತಿ ರೂಪವಾದ '**ಅಗ್ನಿಷ್ಟು**' ಎಂಬ ಹೆಸರಿನ ಏಕಾಹವು.... ಪೃಷ್ಠಸ್ತೋತ್ರದಲ್ಲಿ ತ್ರಿವೃತ್ ಸ್ತೋಮ ಯುಕ್ತವಾಗಿದ್ದು. '**ತ್ರಿವೃತ್**' ಎನಿಸಿಕೊಂಡಿದೆ. ಅಗ್ನಿಷ್ಟೋಮೋಕ್ಥಾದಿ ಸಪ್ತಸ್ತೋಮಸಂಸ್ಥೆಗಳಲ್ಲಿ - ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ ಷೋಡಶ, ತ್ರಿರಾತ್ರಃ, ವಾಜಪೇಯ, ಆಪ್ತೋರ್ಯಾಮ ಎಂದು ಲಾ.ಶ್ರೌ.ಸೂ.೫.೪. ಹೇಳಿರುವ ಅಗ್ನಿಷ್ಟೋಮ ಸಂಸ್ಥೆಯನ್ನು ಅಗ್ನಿಷ್ಟೋಮವೆಂದೂ ಕರೆಯಲಾಗುತ್ತಿದೆ. ಇದರಲ್ಲಿನ ತೃತೀಯ ಸವನದಲ್ಲಿ ಆರ್ಭವ ಪವಮಾನದ ಮೇಲೆ ಯಜ್ಞಾಯಜ್ಞೀಯ ಗ್ರಾ.೫೯, ಸಾಮವನ್ನು ಗಾನ ಮಾಡಲಾಗುತ್ತದೆ. ಈ ಸಾಮದಿಂದ ಅಗ್ನಿಷ್ಟೋಮ ಯಾಗವು ಸಮಾಪ್ತಿಯಾಗುವುದ ರಿಂದ ಅಗ್ನಿಷ್ಟೋಮ ಸಾಮವೆನಿಸಿದ ಈ ಯಜ್ಞಾಯಜ್ಞಾವೋ ಅಗ್ನಯೇ ಎಂಬ ಆಗ್ನೇಯ ಕಾಂಡ ೩೫ನೆಯ ಋಚೆಯ ಮೇಲೆ ಉತ್ತರಾರ್ಚಿಕದ ೭೦೩-೭೦೫, ಊಹ ೧೪, ಗಾನ ಮಾಡಲ್ಪಟ್ಟಿದೆ.

ಈ ಅಗ್ನಿಷ್ಟುತಿಯಲ್ಲಿ ಬ್ರಹ್ಮವರ್ಚಸ್ಕಾಮನಾದವನು ಉತ್ತರ ಋಚೆಯಲ್ಲಿ ಆ ಸಾಮ ವನ್ನು ಗಾನ ಮಾಡಬೇಕು. ಅದು ಏಕವಿಂಶಸ್ತೋಮವುಳ್ಳದ್ದಾಗಿರುತ್ತದೆ. ಪಶುಕಾಮನಾದ ವನು **ರೇವತೀರ್ನಃ ಸಧಾಮಾದೇ** ಇತ್ಯಾದಿ ೧೫೩.೧೦೮೪. **ವಾರವನ್ತೀಯಮ್** ಊಹ. ೧೦೮ ಗಾನ ಮಾಡಬೇಕಾಗಿದೆ. ರೇವತೀ ಋಚೆಗೂ ವಾರವನ್ತೀಯಂ ಸಾಮಗಾನಕ್ಕೂ ಅಗ್ನಿಷ್ಟುತಿಯಲ್ಲಿ ಪಶು ಫಲ ಲಾಭಕ್ಕಾಗಿ ಸಂಬಂಧವನ್ನು ವಿಧಿಸಲಾಗಿದೆ. ಪ್ರಕೃತ ಈ ಶಬ್ದದ ಪರಾಮರ್ಶೆಯಿಂದ ಪರಸ್ಪರ ಭೇದ ತೋರಿಸುವ ಕ್ರಮವು ಅಗ್ನಿಷ್ಟುತದಲ್ಲಿ ಸಮರ್ಪಕವಾಗಿದ್ದು ಇನ್ದ್ರಿಯ ಫಲಕ್ಕಾಗಿಯೇ ಅಗ್ನಿಹೋತ್ರದ ದಧಿಗುಣವಿಹಿತ ಪ್ರಕರಣದಲ್ಲಿ '**ದಧ್ನೇನ್ದ್ರಿಯ ಕಾಮಸ್ಯ ಜುಹುಯಾತ್**' ಎಂಬ ವಿಷಯ ವಾಕ್ಯವು - ಜೈ.ನ್ಯಾ.ವಿ. ೨.೨.೧೧ರಲ್ಲಿ ಚರ್ಚಿಸಲ್ಪಟ್ಟಿದೆ.

ಈ ದೃಷ್ಟಾನ್ತವು ಅನುರೂಪವಾಗಿಲ್ಲ ಗೂಢವಾಗಿದೆ. ಮೊಸರಿನಿಂದ ಹೋಮ ಮಾಡುವುದನ್ನು ಶಾಸ್ತ್ರದಲ್ಲಿ ಹೇಳಿಲ್ಲ. ಪರಂಪರೆಯಿಂದ ಲೋಕದ ಅರಿವಿಗೂ ಬಂದಿಲ್ಲ. ಫಲ ಸಂಬಂಧವೆಂಬ ಒಂದೇ ಕಾರಣಕ್ಕಾಗಿ ಶಾಸ್ತ್ರ ಬೋಧಿಸಿದೆ ಎಂದರೆ ಅಲ್ಲ - ವಾಕ್ಯಭೇದವಿಲ್ಲ. ರೇವತಿ ಋಚೆಯ ಯೋನಿಯಲ್ಲಿನ ವಾರವನ್ತೀಯ ಸಾಮ ಅಗ್ನಿಷ್ಟುತ್ ಕರ್ಮ ಫಲ ಸಾಧನಕ್ಕಾಗಿ ಎಂದರೆ ಈ ಎರಡರ ಶಾಸ್ತ್ರೈಕ್ಯ ಬೋಧನೆಯಿಂದ ವಾಕ್ಯಭೇದ ಕ್ಲಿಷ್ಟವಾಗಿದೆ. ಇದರಿಂದ ಪಶುಫಲ ರೂಪವಾದ ಗುಣವಿಶಿಷ್ಟವಾದ ಕರ್ಮಾನ್ತರವನ್ನು ವಿಧಿಸಲಾಗಿದೆ. ಈ 'ಏವ ಕಾರ' ಶಬ್ದವು ವಿಧಿಸಲಾಗುತ್ತಿರುವ ಕರ್ಮಾನ್ತರ ವಿಷಯದಲ್ಲಿ

ಅಂದರೆ ಏತಸ್ಮೈವೇತ್ಯಾದಿ ಪೂರ್ವದರ್ಶಿತ ವಾಕ್ಯದಲ್ಲಿ ಯೋಜಿಸಲ್ಪಡ ಬೇಕಾಗುತ್ತದೆ. ಜೈ.ನ್ಯಾ.ವಿ. ೨.೨.೧೨.

ಮುಂದಿನ ಅಧಿಕರಣದಲ್ಲಿ **'ನಿಧನ'** ಭಕ್ತಿಯೊಂದಿಗೆ ಸಂಬಂಧಿಸಿದ ವಿಶೇಷ ಕಾಮನೆಗಳನ್ನು ವಿವರಿಸಲಾಗಿದೆ. ಮಳೆ, ಅನ್ನ, ಸ್ವರ್ಗ ಕಾಮನೆಯುಳ್ಳವರಿಗೆ ಸೌಭರಂ ಸ್ತೋತ್ರವು ಹೇಳಲ್ಪಟ್ಟಿದೆ, **'ಹೀ' 'ಷೂ' 'ಗೂರ್'** ಎಂಬ ನಿಧನವನ್ನೂ ಹೇಳಿದೆ. ಹೀಗಿರುವಾಗ ಎರಡೂ ಪ್ರಕಾರಗಳಿಗೆ ಫಲದಲ್ಲಿರುವ ವ್ಯತ್ಯಾಸವೇನು? ಎಂದರೆ **'ಸೌಭರಿ'** ಗಿರುವ ಫಲಕ್ಕಿಂತ ನಿಧನದ ಫಲ ಭಿನ್ನವಾಗಿರುವುದನ್ನು ತಿಳಿಸಲಾಗುತ್ತಿದೆ. **'ವೃಷ್ಟಿಕಾಮಾ ಹೀಷಿತಿ'** ಎಂಬುದು ನಾಲ್ಕನೆಯದಾದ ಫಲಾನ್ತರವಾಗಿದೆ. **'ಸೌಭರ'** ದ ಫಲವು **'ವೃಷ್ಟಿರ್ಹೀಷೀ'** ಎಂದು ಇನ್ನೂ ಮುಂದುವರೆದಿದೆ. ವೃಷ್ಟಿ ಅನ್ನ ಆದಿ ಅನ್ಯ ಕಾಮನೆಗಳನ್ನು ಗುರುತಿಸಿ ಹೇಳಿಲ್ಲ. ನಿಯಮವಾಗಿಯೂ ಈ ನಾಲ್ಕೂ ಆ ಅರ್ಥದಲ್ಲೇ ಕಂಡು ಬರುತ್ತಿದೆ. ವೃಷ್ಟಿಕಾಮನೆಯುಳ್ಳವನೂ ಅನ್ನಾದಿ ಕಾಮನೆಯುಳ್ಳವನೂ ಸ್ವರ್ಗ ಕಾಮನಾದವನೂ **'ಸೌಭರ'** ದಿಂದ ಸ್ತುತಿಸಬೇಕು, ಅಂದರೆ **'ಸೌಭರಮ್'** ಸ್ತುತಿ ಯಿಂದ ಸರ್ವಕಾಮಗಳೂ ಲಭ್ಯ ಎಂಬುದನ್ನು ತಾಂ.ಮ.ಬ್ರಾ. ೮.೮ ಸಮರ್ಥಿಸುತ್ತಿದೆ. ಸೌಭರೇ ಪಾಠವೇ ಬಹಳ ಗ್ರಂಥಗಳಲ್ಲಿದ್ದರೂ ಇದರಲ್ಲಿರುವ 'ಸೌಭರಮ್' ಪಾಠವೇ ಸಾಧುವಾಗಿದೆ. **'ಸಮೂಮ್ನಾಯ'** ಎಂಬ ತ್ಯವನ್ತ ಪದವೇ ಸರ್ವತ್ರ ಕಂಡುಬರುತ್ತಿದೆ. ಇದು ತಾಣ್ಡ್ಯ ಪಾಠಕ್ಕೆ ವಿರೋಧವಾಗಿರುವುದರಿಂದ ಸರಿಯಲ್ಲ. ತಾಂಡ್ಯ ಬ್ರಾಹ್ಮಣದಲ್ಲಿ **'ಸ್ತುವೀತ'** ನಂತರ **'ಸರ್ವೇ'** ಶಬ್ದಕ್ಕೆ ಮೊದಲು **'ಹೀಷೀ'** ಇತ್ಯಾದಿಗಳು ಪಠಿತವಾಗಿವೆ. **'ಸ್ತುವೋತೇ'** ಅನಂತರ **'ಸರ್ವೇ'** ಇತ್ಯಾದಿ ಪಠನಾನನ್ತರವಲ್ಲ. ಸರ್ವೇತ್ಯಾದಿಗಳ ಪಠನಾನಂತರ **'ಹೀಷೀ'** ಇತ್ಯಾದಿ ಗಳಿವೆ. ತಾಂಡ್ಯ ಭಾಷ್ಯದಲ್ಲೂ ನ್ಯಾಯ ವಿಸ್ತರ ಗ್ರಂಥದಲ್ಲೂ ಇದು ಉದ್ಧೃತವಾಗಿದ್ದು ಅಲ್ಲಿಯೂ ಪ್ರಥಮಾನ್ತಪಾಠವಿದೆ.

ವೃಷ್ಟಿಕಾಮನಾದವನು **'ಹೀಷೀ'** ನಿಧನವನ್ನೂ, ಅನ್ನಾದಿ ಕಾಮನೆಯವನು **'ಉರ್ಗೀ'** ನಿಧನವನ್ನೂ ಸ್ವರ್ಗಕಾಮನಾದವನು **'ಊ'** ಎಂಬ ನಿಧನವನ್ನೂ ಗಾನ ಮಾಡ ಬೇಕು. ಸೌಭರಮ್ ಊಹ.೧೬, ಎಂಬ ಐದು/ ಏಳು ಭಾಗದಿಂದ ಕೂಡಿರುವ ಸಾಮದ ಅನ್ತಿಮ ಭಾಗವು **'ಹೀಷ್ಯಾದಿ'** ನಿಧನಗಳಿಂದ ಕೂಡಿದ 'ಸಾಧ್ಯಾಸ್ತೋತ್ರ' ವಾಗಿದ್ದು ವೃಷ್ಟ್ಯಾದಿ ಫಲಗಳುಂಟಾಗಲು ವಿಧಿಸಲಾಗಿದೆ. ಸಾಮದ ಆದಿಭಾಗವನ್ನು ಪ್ರಸ್ತೋತೃ ಋತ್ವಿಜನೂ ಪ್ರತಿಹಾರನೆಂಬ ಋತ್ವಿಜನು ನಾಲ್ಕನೆಯ ಭಾಗವನ್ನೂ ಉಪ ದ್ರವ ಭಕ್ತಿಯನ್ನೂ ಪುನರಂಗವಾಗಿ ಇಲ್ಲಿ ಗಾನ ಮಾಡುವುದು. ಐದನೆಯದಾದ ನಿಧನ ಭಾಗವನ್ನು ಎಲ್ಲರೂ

ಒಟ್ಟಿಗೆ ಗಾನ ಮಾಡುವುದು. ಇದಿಷ್ಟನ್ನು ಎಲ್ಲರೂ ಸಮ್ಮತಿಸಿದ್ದಾರೆ. ಕೆಲವರ ಪಕ್ಷದಲ್ಲಿ - ಗಾನಾರಂಭವನ್ನು ಎಲ್ಲಾ ಋತ್ವಿಜರೂ 'ಓಮ್' ಎಂದುಚ್ಚರಿಸಿ, ಹಿಂಕಾರದಿಂದ ನಿಧನಾನ್ತ ದವರೆಗೆ ಯಜಮಾನನು ಗಾನ ಮಾಡುವುದು. ಹೀಗೆಯೇ ಓಂಕಾರ ಪ್ರಣವವನ್ನೂ ಸಹ. ಈ ಎರಡೂ ಸಾಮಾಂಗತ್ವವಾಗಿ ಗಣ್ಯವಾಗಿರುವುದರಿಂದ ಪಂಚ ಭಕ್ತಿಕ ಅಥವಾ ಸಪ್ತಭಕ್ತಿಕ ಸಾಮವೆಂದು ಹೇಳಲಾಗಿದೆ. ಮನ್ತ್ರ ಬ್ರಾಹ್ಮಣದ ನಾಲ್ಕನೆಯ ಪ್ರಪಾಠಕದಲ್ಲಿ ಪಂಚ ಭಕ್ತಿಸಾಮ, ಸಪ್ತಭಕ್ತಿಸಾಮಗಳ ಬಗೆಗೆ ಪ್ರಸ್ತಾಪವಿದೆ. ಯಜ್ಞತತ್ತ್ವ ದೀಕ್ಷೆಯಲ್ಲಿ ಉದ್ಗಾತೃ ಪ್ರಯೋಗದಲ್ಲಿ ಇದಕ್ಕೆ ಉದಾಹರಣೆಗಳಿವೆ. ಪ್ರಸ್ತಾವ, ಉದ್ಗೀಥ ಪ್ರತಿಹಾರ ಉಪದ್ರವ ನಂತರ ಐದನೆಯದು ಹಿಂಕಾರವೂ ಪ್ರಣವವೂ ನಿಧನವೆಂದು ಮಾಧವರ ವಿವರಣೆಯಲ್ಲಿದೆ.

'ಹೀಷ್ಯಾ'ದಿ ವಿಧಿವಾಕ್ಯದಲ್ಲಿ ವೃಷ್ಟಿಕಾಮ್ಯಾದಿಗಳಿಗೆ ನಾಲ್ಕನೆಯದನ್ನು ಶ್ರವಣ ಮಾಡಬೇಕು - ತದರ್ಥೇ ಚತುರ್ಥೀ ಎಂದು ಕಾತ್ಯಾಯನರು ಹೇಳಿರುವುದನ್ನು ಇಲ್ಲಿ ಗಮನಿಸಬೇಕು. ಈ ಅರ್ಥದಲ್ಲಿ ಹೀಷ್ಯಾದಿಗಳು ವೃಷ್ಟ್ಯಾದಿ ಕಾಮನೆಗಳಾಗಿದ್ದು ಪುರುಷ ಶೇಷತ್ವದ ಕಡೆಗೆ ಒಯ್ಯುತ್ತವೆ. ಈ ಶೇಷತ್ವವು ಪುರುಷಾಭೀಷ್ಟ ಫಲಸಾಧನವಾಗಿ ರೂಪಿತ ವಾಗುತ್ತದೆ. ಆಚಾರ್ಯ ಬಾದರಿಯವರ ಅಭಿಪ್ರಾಯದಲ್ಲಿ ಕ್ರಿಯೆಗಳ ಶೇಷತ್ವವು ದ್ರವ್ಯ ಗುಣ ಸಂಸ್ಕಾರಗಳಲ್ಲಿ ಮಾತ್ರವೆಂಬ ನಿಯಮವಿರುವುದರಿಂದ ಕ್ರಿಯಾಶೇಷತ್ವವೆಂಬು ದಿಲ್ಲ. ಪಾರಾರ್ಥ್ಯದಲ್ಲೇ ಆ ಲಕ್ಷಣದ ಅಭಿಪ್ರಾಯದಲ್ಲೇ ಶೇಷತ್ವವಿದೆ. ಇದಕ್ಕೆ ಇದೆ ಎಂಬ ನಿಯಮವಿಲ್ಲವಾಗಿ ಶೇಷತ್ವಕ್ಕೆ ಬಾಧೆ ಇಲ್ಲ. ಜೈ.ನ್ಯಾ.ಮಾ. ೩.೧.೪-೬. ಕರ್ಮಗಳನ್ನಾಚರಿ ಸುವುದು ಫಲಪ್ರಾಪ್ತಿಗಾಗಿ, ಫಲವಾದರೋ ಪುರುಷಾರ್ಥಕ್ಕಾಗಿ ಅಂದರೆ ಪುರುಷಾರ್ಥ ದಿಂದ ಫಲಸಿದ್ಧಿಯಾಗುವುದರಿಂದ ಕರ್ಮಾರ್ಥಕ್ಕಾಗಿಯೇ ಪುರುಷನಿರುವುದು ಎಂದು ಜೈಮಿನಿಗಳು ಹೇಳುತ್ತಾರೆ. ಹೀಗಾಗಿ 'ಸೌಭರ' ದ 'ಹೀಷಿ' ಇತ್ಯಾದಿ ನಿಧನ ವಿಶೇಷದ ಫಲವಾಗಿ ಎರಡು ವೃಷ್ಟಿಗಳಾಗುತ್ತವೆ. ಇವೆರಡರ ಸಮ್ಮಿಲನದಿಂದ ಮಹದ್ವೃಷ್ಟಿಯಾಗುತ್ತದೆ.

ಈ ಸಂದರ್ಭದಲ್ಲಿ ಹೀಗೆ ಹೇಳಬಹುದು. ಸೌಭರ ವಿಧದಲ್ಲಿರುವ ವೃಷ್ಟ್ಯಾದಿಕಾಮನೆಗಳೇ 'ಹೀಷ್ಯಾದಿ' ವಿಧದಲ್ಲಿಯೂ ಗುರುತಿಸಲ್ಪಡುತ್ತವೆ. ಆದುದರಿಂದ 'ಸೌಭರ' ದಿಂದುಂಟಾದ ವೃಷ್ಟ್ಯಾದಿ ಫಲಗಳೇ ಹೀಷ್ಯಾದಿ ಶಾಸ್ತ್ರದಲ್ಲಿ ಉದಯವಾಗುವು ದಿಲ್ಲ ಎಂಬ ಫಲಾನ್ತರ ಸಾಧುವಲ್ಲ. ಹೊಸ ಫಲಾನ್ತರವಿಲ್ಲವಾದುದರಿಂದ ಹೀಷ್ಯಾದಿಗಳು ಕೂಡ ನಾನಾ ಶಾಖೆಗಳ ಅಧ್ಯಯನದಂತೆ 'ಸೌಭರ' ದಿಂದುಂಟಾದರೆ ಅನರ್ಥವಾಗುತ್ತ ದೆಂಬ ವಿಧಿಯಾದರೂ ಯಾವುದು ಎನ್ನುವುದೂ ಸರಿಯಲ್ಲ. ಫಲತ್ರಯ ಕಾಮನೆಗಳಿಗೆ

ಮೂರು ನಿಯಮಗಳಲ್ಲೇ '**ಹೀಷ್ಯಾ**'ದಿಗಳ ಮಧ್ಯೆ ಯಾವುದೇ '**ನಿಧನ**' ಬಂದರೆ ವಿಧಿಯ ನಿಯಮಾರ್ಥದ ಕಾರಣ ಫಲಾನ್ತರಾಭಾವವಿದ್ದರೂ ಸೌಭರ ವಾಕ್ಯೋಕ್ತ ವೃಷ್ಟ್ಯಾದಿ ಫಲ ಸಾಧನೆಯಲ್ಲಿ ಹೀಷ್ಯಾದಿಗಳ ನಿಯಮದಿಂದಾಗಿ ಫಲೋದಯವಾಗುತ್ತದೆ. ಹೀಗಾಗಿ ಇದು ನಿಧನ ವಿಶೇಷವಾದ ನಿಯಮವಾಗಿದ್ದು ವಿಧಿಯಾಗಿರುವುದಿಲ್ಲ.

ಜೈ.ನ್ಯಾ.ವಿ.೩.೩.೧,೨ರಲ್ಲಿ ಸಾಮಗಾನದ ಉಚ್ಚತ್ವ ನೀಚತ್ವ ಧರ್ಮವನ್ನು ವಿವೇಚಿಸಲಾಗಿದೆ. '**ಸಾಮ**' ಮತ್ತು '**ಋಚೆ**' ಗಳನ್ನು ಎತ್ತರಿಸಿದ ಧ್ವನಿಯಲ್ಲೂ ಯಜುಸ್ಸನ್ನು ಉಪಾಂಶು ತುಟಿಯಲ್ಲಾಡಿಸುವಷ್ಟು ಮೆಲ್ಲದನಿಯಲ್ಲೂ ಪಠಿಸುವುದು ಕರ್ತವ್ಯವಾಗಿದೆ. ಮನ್ತ್ರಗಳ ಹಾಗೂ ವೇದಗಳ ಧರ್ಮವೇ ಮನ್ತ್ರಗಳು ದೀರ್ಘ/ ಉದ್ದವಾಗಿ ಎಳೆಯಲ್ಪಡುವುದಾಗಿದೆ. ವಿಧ್ಯುಕ್ತ ದೇಶದಲ್ಲಿ ಮನ್ತ್ರವೆನಿಸಿದ ಶಬ್ದಗಳು ಋಗಾದಿಗಳೆಂದು ಹೇಳಲ್ಪಡುತ್ತವೆ. ಋಗ್ವೇದವು ಅಗ್ನಿಯಿಂದುತ್ಪನ್ನವಾಗಿದೆಯೆಂದೇ ವೇದದ ವಾಕ್ ಪ್ರಾರಂಭವಾಗುತ್ತದೆ ಎಂದಿರುವುದರಿಂದ ಅಸಂಜಾತ - ಹುಟ್ಟಿದ್ದಲ್ಲ ಎಂಬ ವಿರೋಧವು ಇಲ್ಲಿ ಉಪಸಂಹೃತವಾಗಿದೆ, ಹಿಂದೆಳೆಯಲ್ಪಟ್ಟಿದೆ. ಈ ಒಯ್ಯುವಿಕೆಯ ವಾಕ್ಯಧರ್ಮದಿಂದಲೇ ವೇದದನಡೆಯ ಮುಂದುವರಿಕೆ ಇದೆ. ಋಚೆಗಳು 'ಎತ್ತರಧ್ವನಿ'ಯಲ್ಲೂ 'ಉಪಾಂಶು ತುಟಿಯೊಳಗೆ, ಮೆಲುದನಿ'ಯಲ್ಲಿ ಯಜುಸ್ಸೂ, 'ಏರಿದ ಧ್ವನಿ'ಯಲ್ಲಿ ಸಾಮವೂ ಪಠಿಸಲ್ಪಡುತ್ತವೆ ಎಂದು ಜ್ಯೋತಿಷ್ಟೋಮದಲ್ಲಿ ತಿಳಿಸುತ್ತಾರೆ. ಇಲ್ಲಿ ವಿಧಿವಾಕ್ಯದಲ್ಲಿ ಮನ್ತ್ರವಾಚಿಗಳಾದ ಋಗಾದಿ ಶಬ್ದಗಳ ಪ್ರಯೋಗದಿಂದ ಏರಿಸಿದ ಧ್ವನಿ ಇತ್ಯಾದಿ ಮನ್ತ್ರ ಧರ್ಮಗಳಾಗಿವೆ. ಹೀಗಿರುವಾಗ ಯಜುರ್ವೇದದಿಂದುತ್ಪನ್ನವಾದ ಅಧ್ವರ್ಯುಗಳಿಂದ ಪಠಿಸಲ್ಪಡುವ ಋಚೆಗಳೂ ಸಹ ಎತ್ತರಿಸಿದ ಧ್ವನಿಯಲ್ಲೇ ಪಠಿತವಾಗತಕ್ಕದ್ದು ಎಂಬುದು ಸರಿಯಲ್ಲ. ಪ್ರಬಲವಾದ ಉಪಕ್ರಮವನ್ನು ಅನುಸರಿಸಿ ಅದರ ಕಾರಣದಿಂದ ಉಪಸಂಹರಿಸಿ ಮುನ್ನಡೆಸಬೇಕಾದುದರಿಂದ ಹಾಗೆ ಮಾಡಿದರೆ ಅಸಂಜಾತ ವಿರೋಧವಾಗುತ್ತದೆ. ಉಪಕ್ರಮದಲ್ಲೇ ವೇದ ಶಬ್ದ ಶ್ರುತವಾಗಿದೆ.

ಅಗ್ನಿಯಿಂದ ಋಗ್ವೇದ. ವಾಯುವಿನಿಂದ ಯಜುರ್ವೇದ. **ಆದಿತ್ಯನಿಂದ ಸಾಮವೇದ** ಎಂದು - ಷ.ವಿಂ.ಬ್ರಾ. ೪.೧ರಲ್ಲಿ ಹೇಳಿರುವುದಕ್ಕೂ ಛಾಂ.ಉ. ೪.೭ರಲ್ಲಿ ಹೇಳಿರುವುದಕ್ಕೂ ಪಾಠಭೇದವಿರುವುದನ್ನು ಗಮನಿಸಬಹುದು. '**ಉಪಕ್ರಮಗತ**' ವೇದಾನುಸಾರ ವಾಗಿಯೂ ವಿಧಿಯ ಉದ್ದೇಶಾನುಸಾರಿಯಾಗಿಯೂ ಕೂಡ ಋಗಾದಿ ಶಬ್ದಗಳು ವೇದ ಪರತ್ವವಾಗಿದ್ದರೂ ಯಜುರ್ವೇದೋತ್ಪನ್ನ ಋಚೆಗಳು ಉಪಾಂಶುವಿನಲ್ಲೇ ಪಠಿತವಾಗತಕ್ಕದ್ದು. ಇದಕ್ಕೆ ಕಾರಣ ಉಪಕ್ರಮದ ಅರ್ಥವಾದವು ದುರ್ಬಲವೆಂದಲ್ಲ. ಉಪ

ಸಂಹಾರ ವಿಧಿಯು ಉದ್ದೇಶದಕಾರಣ ಪ್ರಬಲವೆಂದರೆ ಒಪ್ಪಬಹುದು. ಉದ್ದೇಶ ವಿಧಿಯ ಪ್ರಾಬಲ್ಯವಿದ್ದಾಗ - **ಪೂರ್ವೋಪಕ್ರಮ ಸಂಜಾತ ವಿರೋಧಿತ್ವೇನೇತಿ ಅತ್ರ ಸ್ಫುಟೌ ಭವಿಷ್ಯತಿ ।** ಪೂರ್ವೋಪಕ್ರಮದಿಂದುಂಟಾದ ವಿರೋಧದಿಂದ ಇಲ್ಲಿ ಸ್ಫುಟ ವಾಗುತ್ತದೆ - ಮೊದಲು ಬುದ್ಧ್ಯುತ್ಪಾದಕದಿಂದ ಅನಲಭ್ಯ ಪ್ರಾರಂಭವಾಗಿ ಈಗ ಲಭ್ಯವಾಗಿರುವುದರಿಂದ ಅದರ ಬಾಧಕತ್ವವೆಂದಲ್ಲ. ನಂತರದ ವಾಕ್ಯದಲ್ಲಿ ಏಕತ್ವಕ್ಕಾಗಿ ಅದಕ್ಕೆ ಅವಿರೋಧವಾಗಿಯೇ ನಮ್ಮ ಪರವಾಗಿರುತ್ತದೆ. ಆಗ ಉಪಕ್ರಮ ಉಪಸಂಹಾರದ ಐಕ್ಯತೆಯ ಬಲದಿಂದ ನಿರ್ಣಯವಾದ ವಾಕ್ಯವಾಗುತ್ತದೆ.

ಯಜುರ್ವೇದದ ಆಧಾನಾಂಗವಾಗಿ ಉಚ್ಚಸ್ವರದಲ್ಲಿ ಸಾಮಗಾನ ಮಾಡಬೇಕೆ? ಉಪಾಂಶುವಾಗಿ ಮಾಡಬೇಕೆ? ಉಚ್ಚಸ್ವರದಲ್ಲಿ ಗಾನ ಮಾಡುವುದರಿಂದ ಶೀಘ್ರಪ್ರವೃತ್ತಿ ಯಾಗುತ್ತದಷ್ಟೆ. **'ಉತ್ಪತ್ತೇರ್ವಿನಿಯೋಗಃ'** ಎಂಬುದು ಇಲ್ಲಿ ಪ್ರಬಲವಾಗಿರುವುದರಿಂದ ಅದನ್ನೇ ಅನುಸರಿಸುತ್ತಾ ಮುಖ್ಯ ಅಂಗವಾಗಿ ಕರ್ತವ್ಯ ನೆರವೇರಿಸಬೇಕಾದುದರಿಂದ ಗಾನ ವನ್ನು ಉಪಾಂಶುವಾಗಿಯೇ ಮಾಡಬೇಕು. ಇಲ್ಲಿ ಆಧಾನದ ಪ್ರಾಮುಖ್ಯತೆಯನ್ನು ಗಮನಿಸಿ ಗಾನದ ಸ್ಥಾನ ಗುಣವಾಗಿರುತ್ತದೆಯೇ? ಅಥವಾ ವಿನಿಯೋಗ ಪ್ರಧಾನ ವಾಗಿದ್ದು ಉತ್ಪತ್ತಿಯದು ಗುಣಸ್ಥಾನವಾಗಿರುತ್ತದೆಯೇ? ಆಧಾನದಲ್ಲಿ ವಾಮದೇವ್ಯಾದಿ ಸಾಮಗಳು ಲಿಂಗತ್ವವಾಗಿ ವಿಹಿತವಾದುದಾಗಿರುತ್ತವೆ. ಇವು ಯಜುರ್ವೇದಗತ ಆಧಾನದ ಅಂಗ ವಾಗಿದ್ದರೂ ಸಾಮವೇದದಲ್ಲಿ ಅವು ಉದಯವಾಗಿರುವುದರಿಂದಲೂ ಶೀಘ್ರವೇ ಬುದ್ಧಿಗೆ ಹೊಳೆಯುವುದರಿಂದಲೂ ಸಾಮವೇದದ ಧರ್ಮದಲ್ಲೇ ಗಾನ ಮಾಡತಕ್ಕದ್ದೆಂದರೆ, ವಿನಿ ಯೋಗದ ಪ್ರಾಬಲ್ಯದಿಂದ ಅದು ಸಾಧುವಲ್ಲ. ಇದನ್ನು ಯಜುರ್ವೇದದಲ್ಲಿ ವಿದ್ವಾಂಸರು ಹೀಗೆ ವಾಮದೇವ್ಯ ಗಾನ ಮಾಡುತ್ತಾರೆ ಎಂದು ತಿಳಿಸಿಯೂ ಇದೆ. ಮುಖ್ಯವಾದುದನ್ನು ಗುಣವು ಅನುಸರಿಸಬೇಕು ಎಂಬುದು ನ್ಯಾಯ. ಗುಣ ಯಾವುದು? ಮುಖ್ಯ ಯಾವುದು? ಎಂದರೆ - ಅಂಗಿ ಭಾವದಿಂದ ಆಧಾನ **'ಮುಖ್ಯ'**ವಾದದ್ದು. ಅಂಗಭಾವ ದಿಂದ ಸಾಮ ಗಾನವು **'ಗುಣ'**ವಾಗಿರುತ್ತದೆ. ಶರೀರ - ಶಿರ ಇತ್ಯಾದಿಗಳಂತೆ ಇವು ಧರ್ಮವಾಗಿವೆ.

ಆಧಾನಾಂಗ ಭೂತವಾದ ಮನ್ತ್ರಗಳು ಉಪಾಂಶುವಾಗಿಯೇ ಪಠಿಸಲ್ಪಡುತ್ತವೆ. ಹಾಗಾದರೆ ಸಾಮಾನ್ಯ ಸಂದರ್ಭದಲ್ಲೂ ಉಪಾಂಶುವಾಗಿ ಗಾನ ಮಾಡಬೇಕೆ? ಅಥವಾ ವಿನಿಯೋಗದ ಅನುಷ್ಠಾನಪರ ವಿಧಿಯು ಮುಖ್ಯವೆಂದೆಣಿಸಿಯೆ? ಉತ್ಪತ್ತಿ ವಿಧಿ ಹಾಗೂ ವಿಧಿರೂಪವಾದ ಗುಣಗಳನ್ನು ಪರಿಗಣಿಸಿ ಇಲ್ಲಿರುವ ವಿನಿಯೋಗದಂತೆ ವೇದ ವಾಕ್ಯಾನುಸಾರವಾಗಿ ಉಪಾಂಶುವಾಗಿಯೇ ಗಾನಮಾಡತಕ್ಕದ್ದು.

ಜೈ.ನ್ಯಾ.ವಿ. ೫.೩.೪,೫ ರಲ್ಲಿ ಸ್ತೋಮ ವಿಚಾರವು ಪ್ರಸ್ತಾಪಿಸಲ್ಪಟ್ಟಿದೆ. ಸ್ತೋಮ ವೃದ್ಧಿಯ ಮಧ್ಯದಲ್ಲಿ ಅಂತ್ಯದಲ್ಲಿ ಅಥವಾ ಮಧ್ಯದಲ್ಲಿ ಏನಾಗುತ್ತದೆ? ದ್ವಾದಶಾಹದಂತೆ ಮಧ್ಯವು ಅನುಕ್ತವಾಗಿದ್ದರೆ '**ಮಧ್ಯಮಃ**' ಇರುವುದಿಲ್ಲ. ಪ್ರಜಾಕಾಮ ನಾದವನು ಏಕವಿಂಶೀ ನಾತಿರಾತ್ರದಿಂದಲೂ ಓಜಸ್ಕಾಮನಾದವನು ತ್ರಿಣವದಿಂದಲೂ ಪ್ರತಿಷ್ಠಾಕಾಮನಾದವನು ತ್ರಯಸ್ತ್ರಿಂಶದಿಂದಲೂ ಯಜ್ಞ ಮಾಡಬೇಕು ಎಂದು ಶ್ರುತಿ ತಿಳಿಸುತ್ತದೆ - ತಾಂ.ಮ.ಬ್ರಾ. ೨.೧೪-೧೭, ೨.೩೩-೩೬. ಬಹಿಷ್ಪವಮಾನ ಸ್ತೋತ್ರದಲ್ಲಿ ಮೂರು ತೃಚೆಗಳಿವೆ, **ಉಪಾಸ್ಮೈ ಗಾಯತಾ** - *ಸಾ.ಋ.೬೫೧-೬೫೩.* // **ದವಿದ್ಯುತತ್ಯಾ** ಸಾ.ಋ.೬೫೪-೬೫೬ ಎರಡನೆಯದು 'ಪವಮಾನಸ್ಯಕೇತವೇ' ಸಾ.ಋ.೬೫೭-೬೫೯, ಮೂರನೆಯದು ಹೀಗೆ ಈ ಮೂರು ತೃಚೆಗಳ ಮೇಲಿನ ಗಾನದಿಂದ ತ್ರಿವೃತ್ ಸ್ತೋಮವಾಗುತ್ತದೆ. **ಪ್ರಕೃತಿವದ್ ವಿಕೃತಿಃ ಕರ್ತವ್ಯಃ** ತಾಂ.ಮ.ಬ್ರಾ. ೨.೧-೩, ಎಂಬ ವಚನದಂತೆ ಅಲ್ಲಿ ಪಂಚದಶ ಸಪ್ತದಶ ಸ್ತೋಮಾದಿಗಳ ನಂತರ ಆವೃತ್ತ ಗಾನವಿರುವುದಿಲ್ಲ. ಅದು ಬಹಿಷ್ಪವಮಾನ ವಿಕೃತಿಯಂತೆ ಅತಿರಾತ್ರದಲ್ಲಿ ಚೋದಕದಿಂದ ಬಂದಿದೆಯಾಗಿ ಅತಿರಾತ್ರವು ವಿಕೃತಿಯಾಗವಾಗಿರದೆ. ಅಲ್ಲಿ ತ್ರಿವೃತ್ ಸ್ತೋಮವನ್ನು ಬಾಧಿಸಲು ಏಕವಿಂಶಾದಿ ಸ್ತೋಮಗಳು ವಿಹಿತವಾಗಿವೆ.

ಬಹಿಷ್ಪವಮಾನದಲ್ಲಿ ಆವೃತ್ತಗಾನಾಭಾವದಿಂದಾಗಿ ಮೂರೂ ತೃಚೆಗಳಲ್ಲಿರುವ ಒಂಬತ್ತು ಋಚೆಗಳು, ಏಕವಿಂಶತ್ ಸ್ತೋಮವನ್ನು ಪೂರ್ಣಮಾಡದಿರುವುದರಿಂದ ಅದನ್ನು ಪೂರ್ಣವಾಗಿಸಲು ನಾಲ್ಕು ತೃಚೆಗಳೂ, ತ್ರಿಣವ ಸ್ತೋಮವನ್ನು ಪೂರ್ಣ ವಾಗಿಸಲು ಆರು ತೃಚೆಗಳೂ ತ್ರಯಸ್ತ್ರಿಂಶಸ್ತೋಮವನ್ನು ಪೂರ್ಣವಾಗಿಸಲು ಎಂಟು ಋಚೆಗಳೂ ಬರಬೇಕಾದುದನ್ನು - '**ಕಾ ಋಚಃ ಆಗಮಿತವ್ಯಃ**' **। ತ್ರೀಣಿ ಹವ್ಯೆ** ಇತ್ಯಾದಿ ಗಳೆಂದು ವಿವರಿಸಲಾಗುತ್ತಿದೆ. ಆಗಮನವಾದ ಮನ್ತ್ರಗಳನ್ನು ಬಹಿಷ್ಪವಮಾನದ ಮಧ್ಯದಲ್ಲಿ ಸೇರಿಸುವ ಕ್ರಮವನ್ನು ದ್ವಾದಶಾಹದಲ್ಲಿ ಹೀಗೆ ತಿಳಿಸಲಾಗಿದೆ. ತೃಚೆಗಳು ಸ್ತೋತ್ರೀಯಾನುರೂಪವಾಗಿ ವೃಷಣ್ವನ್ತಃ ಋಚೆಯಾಗುತ್ತದೆ. ಪರಿವರ್ತವಾದವುಗಳು, ಪ್ರಾಕೃತವಾದವುಗಳು. ಬಹಿಷ್ಪವಮಾನ ಗತವಾದ ಮೂರು ಋಚೆಗಳ ಸ್ತೋತ್ರೀಯ ರೂಪದವು ಎಂದು ಮೂರು ಬಗೆಯನ್ನು ತಾಂ.ಮ.ಬ್ರಾ. ೧೦.೬.೬-೮ ವಿವರಿಸುತ್ತದೆ.

ಇಲ್ಲಿ ವಿಧಿಪ್ರೇರಿತಾನುರೂಪವಾದ ಮತ್ತು ಪರಿವರ್ತನೆಯಾಗಿರುವುಗಳ ಮಧ್ಯೆ '**ವೃಷಣ್ವ**' ಶಬ್ದಯುಕ್ತವಾದ ತೃಚೆಗಳು ಕರ್ತವ್ಯರೂಪವಾಗಿರುತ್ತವೆಯೇ ವಿನಾ ಅತಿ ರಾತ್ರದ ಮಧ್ಯದಲ್ಲಿ ನಿವೇಶನ ಮಾಡಬೇಕೆಂಬ ವಚನಕ್ಕಾಗಿ ಅಲ್ಲ. ಆದುದರಿಂದ ಸಮರ್ಥವಾದ ಕ್ರಮವು ಅಬಾಧಿತವಾಗಿರಲು ಆಗನ್ತವಾದವುಗಳ ಅಂತ್ಯದಲ್ಲೇ ನಿವೇಶನ ಮಾಡತಕ್ಕದ್ದು.

ಜೈ.ನ್ಯಾ.ವಿ. ೫.೩.೫ರಲ್ಲಿ ಹೀಗಿದೆ. 'ಆರ್ಭವ' ದಲ್ಲಿ ಆಗನ್ತವಾದ ಸಾಮವನ್ನು ಅನ್ತ್ಯದಲ್ಲಿ/ ಮಧ್ಯದಲ್ಲಿ/ ಕಡೆಯಲ್ಲಿ/ ನಿವೇಶನ ಮಾಡಬೇಕೆ? ಹಿಂದಿನಂತೆ, 'ತ್ರೀಣಿ ಯಜ್ಞಸ್ಯೈತ್ಯುಕ್ತಾ' ಹೇಳಿರುವಂತೆ ಮಧ್ಯದಲ್ಲಿ ನಿವೇಶನ ಮಾಡಬೇಕು. ಈಗಾಗಲೇ ಉದಾಹರಿಸಿರುವ ಅತಿರಾತ್ರ ಮಾಧ್ಯನ್ದಿನ ಆರ್ಭವ ಪವಮಾನಗಳ ವಿಧಿ ಪ್ರೇರಣೆಯಂತೆ ಪಂಚದಶ ಸಪ್ತದಶ ಸ್ತೋಮಗಳು - ಈ ಸನ್ತತ ಯಜ್ಞದಲ್ಲಿ ಎರಡೆರಡು ಸ್ತೋಮಗಳೇ ತ್ರಿವೃತ್ ಪಂಚದಶಗಳ ಪ್ರಾತಸ್ಸವನಗಳನ್ನೂ, ಪಂಚದಶ ಸಪ್ತದಶಗಳ ಮಾಧ್ಯಂದಿನ ಸವನಗಳನ್ನೂ ಸಪ್ತದಶ ಏಕವಿಂಶತಿಗಳ ತೃತೀಯ ಸವನಗಳನ್ನೂ ನಿರ್ವಹಿಸುತ್ತವೆ ಎಂಬ ತಾಂ.ಮ.ಬ್ರಾ. ೧೬.೧.೬., ವಚನದಿಂದ ಬಾಧಿತವಾಗುವುದರಿಂದ ಏಕವಿಂಶಾದಿ ವಿವೃದ್ಧ ಸ್ತೋಮೋ ಎಂಬ ವಚನಾನುಸಾರವಾಗಿ ಅನುಷ್ಠಾನ ಮಾಡಲ್ಪಡುತ್ತದೆ. ಅಲ್ಲಿ ಬಹಿಷ್ಪವ ಮಾನದಂತೆ ಋಚೆಯ ಆಗಮನವಿರುವುದಿಲ್ಲವಾಗಿ ಸಾಮಾಗಮನದಿಂದಲೇ ಸ್ತೋಮ ಪೂರಣವಾಗುತ್ತದೆಂದು ಜೈ.ನ್ಯಾ.ವಿ. ಅಧಿ ೧೦ರಲ್ಲಿ ತಿಳಿಸಲಾಗಿದೆ. ಅಲ್ಲೂ ಆಗನ್ತವಾದ ಸಾಮವನ್ನು ಹಿಂದೆ ಹೇಳಿದ ಋಚೆಗಳ ಅನ್ತ್ಯದಲ್ಲಿ ನಿವೇಶನ ಮಾಡುವುದರಿಂದ ಪಠಿತ ಋಚೆಗಳ ಮಧ್ಯೆ ಇದ್ದಂತಾಗಿ ಕಡೆಯ ತೃಚೆಯಲ್ಲೇ ಗಾನಮಾಡಬೇಕಾಗುತ್ತದೆ.

ತಾಂ.ಮ.ಬ್ರಾ. ೭.೩.ರಲ್ಲಿ 'ತ್ರೀಣಿಹವೈ ....ದ್ವಪನ್ತಿ' ಎಂದು ಶ್ರುತಿ ತಿಳಿಸುತ್ತಿದೆ. ಅಂದರೆ ಸ್ತೋಮದ ವಿವೃದ್ಧಿಗಾಗಿ ಸಾಮವು ಆಕ್ಷೇಪ ಹ್ರಾಸ ಯಾ ನ್ಯೂನತೆಗಾಗಿ ಎಂಬುದು ಉತ್‌ಕ್ಷೇಪ. ಈ ಎರಡೂ ಆವೋಪೋದ್ವಾಪಗಳು ಗಾಯತ್ರ್ಯಾದಿಗಳಲ್ಲೇ ಹೊರತು ಅನ್ಯತ್ರ ಇಲ್ಲ. ಉಚ್ಚಾ ತೇ ಜಾತಮನ್ಧಸಃ ಎಂಬ ಮಾಧ್ಯಂದಿನ ಪವಮಾನದ ಮೊದಲ ತೃಚೆಗಳು ಸಾ.ಋ. ೬೭೨-೬೭೪. ಸ್ವಾದಿಷ್ಠಯಾ ಎಂಬುದರ ಗಾಯತ್ರೀ ಛನ್ದಸ್ಸಿನ ಆರ್ಭವ ಪವಮಾನಗಳೆರಡೂ ಸಾ.ಋ.೬೮೯-೬೯೧. ತೃಚೆಗಳು ಇವುಗಳ ಬಗೆಗೆ ಈ ಆಕ್ಷೇಪಣೆಗಳಿವೆ. ತ್ರಿಷ್ಟುಪ್ ಮತ್ತು ಜಗತೀ ಛನ್ದಸ್ಸಿನ ಹಾಗೂ ಇತರ ತೃಚೆಗಳ ಸಾಮಗಳ ಬಗೆಗೆ ಆಕ್ಷೇಪಣೆಗಳಿಲ್ಲ.

ಇಲ್ಲೇ ಜೈ.ನ್ಯಾ.ವಿ. ೫.೩.೧೫ರಲ್ಲಿ ಸ್ತೋಮ ವಿಚಾರವಿದೆ. ಏಕಸ್ತೋಮದಲ್ಲಿ ಅನ್ಯಶಬ್ದವಿದ್ದರೆ ಬಹುಸ್ತೋಮದಲ್ಲಿ ಮಾನ್ಯತೆ ಇರುತ್ತದೆ. 'ತ್ರಿವೃದನ್ಯೇತಿ' ಯ ಅರ್ಥವಾದದಿಂದ ಅನ್ಯಮಾತ್ರೆಗಳೇನೂ ಸಂಭವಿಸುವುದಿಲ್ಲ. ಇಲ್ಲಿ, ಹಿಂದೆ ಉದಾಹೃತ ವಾದ ಅನ್ಯೇನೇತಿ ಎಂಬುದು ಅನ್ಯಶಬ್ದವೆಂಬುದು ಜೈ.ನ್ಯಾ.ಮಾ. ೫.೩.೧೪ರಿಂದ ತಿಳಿದು ಬರುತ್ತದೆ. ತಾಂ.ಮ.ಬ್ರಾ. ೧೬.೧. ರಲ್ಲಿ ಅಪೇಕ್ಷಿತ ಧಾನ್ಯಗಳಿಂದ ಯಜ್ಞವನ್ನಾಚರಿಸಿದರೆ ಹಳ್ಳದಲ್ಲಿ/ ಕಷ್ಟದಲ್ಲಿ ಬಿದ್ದರೂ ಸಹ ಅದರಿಂದ ಬಿಡುಗಡೆಯಾಗಿ ಗೆಲ್ಲುತ್ತಾನೆ ಎಂದಿದೆ.

ಏಕಸ್ತೋಮದ ಕ್ರತುವಿರುವುದು ಅರ್ಥವಾದದಿಂದ ತಿಳಿದು ಬರುತ್ತದೆ. ಇದಲ್ಲದೆ ತ್ರಿವೃದನ್ಯ ಯಜ್ಞಕ್ರತುವು ಲಭ್ಯವಾದಾಗ ಪಂಚದಶವು ಲಭ್ಯವಾದಾಗ ಸಪ್ತದಶ ಲಭ್ಯವಾದಾಗ ಏಕವಿಂಶ ವಾದಾಗ ಅದು ಅದನ್ನು ದೀಪ್ತಿಗೊಳಿಸುತ್ತದೆಂಬುದು ಅರ್ಥ ವಾದವಾಗಿರುತ್ತದೆ - ತಾಂ.ಮ.ಬ್ರಾ. ೧೬.೧.೪. **ತ್ರಿವೃತ್, ಪಂಚದಶಃ ಸಪ್ತದಶಃ ಏಕವಿಂಶಃ** ಎಂಬ ನಾಲ್ಕು ಸ್ತೋಮಗಳು ಅಗ್ನಿಷ್ಟೋಮದಲ್ಲಿರುತ್ತವೆ. ಅವುಗಳಲ್ಲಿ ತ್ರಿವೃತ್ ಸ್ತೋಮದ ವಿಕೃತರೂಪ ವಾದ ಯಜ್ಞಾನುಷ್ಠಾನದಿಂದ ಆ ತ್ರಿವೃತ್ ಸ್ತೋಮವು ಆ ಯಜ್ಞವನ್ನು ದೀಪ್ತಿಗೊಳಿಸುತ್ತದೆ. ಪ್ರಕಾಶಗೊಳಿಸುತ್ತದೆ. ಸರ್ವತ್ರವೂ ವ್ಯಾಪ್ತ ವಾಗುತ್ತದೆ. ಸ್ತೋಮಾನ್ತರದ ಪ್ರವೇಶದಿಂದ, ತ್ರಿವೃತ್ ಎಂಬುದೇ ಸಮಸ್ತ ಯಜ್ಞ ಸ್ವರೂಪದಲ್ಲೂ ವ್ಯಾಪ್ತವಾಗಿ ಒಂದು ಏಕಸ್ತೋಮಕದ ಕ್ರತುವಾಗುತ್ತದೆ. ಹೀಗೆಯೇ ಪಂಚದಶಾದಿ ಸ್ತೋಮವ್ಯಾಪ್ತಿಯನ್ನೂ ಯೋಜಿಸಬಹುದು. ಹೀಗಿರುವಾಗ ಅರ್ಥವಾದದಿಂದಾಗಿ ಏಕಸ್ತೋಮಕವನ್ನೇ ಬುದ್ಧಿಸ್ಥವಾಗಿರುವ ಅನ್ಯಶಬ್ದ ಗಳಿಂದ ಹೇಳಲಾಗುತ್ತದೆ. ಏಕಸ್ತೋಮಕವಾದ ಷಟ್‌ರಾತ್ರಾದಿ ಅಷ್ಟ ಅಹೀನಗಳಲ್ಲಿ ತ್ರಿವೃದಗ್ನಿಷ್ಟೋಮವಾಗುತ್ತದೆ. ಪಂಚದಶ ಉಕ್ಥಗಳಾಗುತ್ತವೆ ಇತ್ಯಾದಿ ಎಂದು ಶ್ರುತಿತಿಳಿಸು ತ್ತಿದೆ. ಆದುದರಿಂದ ಆ ವಿಷಯಗಳು ಅನ್ಯಶಬ್ದಗಳೆಂದು ಹೇಳಿದರೆ ಅದು ಅದನ್ನು ದೀಪ್ತಿ ಗೊಳಿಸುತ್ತದೆ ಎಂದು ಪ್ರಕಾಶತ್ವವನ್ನು ಮಾತ್ರ ಹೇಳಲಾಗುತ್ತದೆ. ಇದರಿಂದ ವ್ಯಾಪ್ತಿಯ ಅನ್ತರದಿಂದ ಸಂಬಂಧ ಮಾತ್ರ ಉಂಟಾಗುತ್ತದೆ. ಹೀಗಾಗಿ ಅಗ್ನಿಷ್ಟೋಮದ ಪ್ರತಿಯೋಗಿತೆ ಯಿಂದಲೂ ಬಹುಸ್ತೋಮಗಳ ಏಕಸ್ತೋಮದ ಸಾಧಾರಣತೆಯಿಂದಲೂ ಕೇಳಿಸಿ ಕೊಳ್ಳುವ ಅನ್ಯಶಬ್ದಗಳ ಸಂಕೋಚಕ್ಕೆ ಕಾರಣವಿಲ್ಲದಿರುವುದರಿಂದಲೂ ಸರ್ವ ವಿಷಯಗಳಲ್ಲೂ ಇದು ಅನ್ಯಶಬ್ದವಾಗಿದೆ.

ಜೈ.ನ್ಯಾ.ವಿ. ೭.೩.೩ರಲ್ಲಿ ಸರ್ವಪೃಷ್ಠಾತಿದೇಶವು ಚಿಂತಿಸಲ್ಪಟ್ಟಿದೆ ರಥನ್ತರ ಅಥವಾ ಬೃಹತಾ ಅಥವಾ ಸಮುಚ್ಚಯವಾದದ್ದೇ ಅಥವಾ **'ಷಾಡಹಿಕಾನಿ ಷಟ್'** ಆಗಿದೆಯೇ? ಅಲ್ಲಿ ಮಹೇನ್ದ್ರಾದಿ ಚತುಷ್ಟಯದಲ್ಲಿ ಅತಿದೇಶ್ಯಾದಿಗಳಾಗಿವೆಯೇ? ಎಂದರೆ ಪೃಷ್ಠ ಶಬ್ದದ ಚೋದಕಾದಿಗಳು ಇಲ್ಲಿ ಉಂಟಾಗಿವೆ. ಸಮುಚ್ಚಯ ಅಥವಾ ವಿಧಿಯಿಂದ ಬಹು ಅಪೇಕ್ಷೆ ಯಿಂದಾಗಿ ಸರ್ವತ್ವವಾಗಿದೆ. ಆದುದರಿಂದ ಎರಡರೊಳಗೆ **ಷಣ್ಣಾಂ ಪೃಷ್ಠಾನಾಂ** ಅತಿದೇಶವಿಲ್ಲ.

ವಿಶ್ವಜಿತ್ ಸರ್ವಪೃಷ್ಠವಾಗುತ್ತದೆ. **ಇಹೈವ ಸ್ಪರ್ಶನಾತ್** ವಿಗ್ರಹದಿಂದಲೂ ಈ ಅಭಿಪ್ರಾಯವೇ ಬರುತ್ತದೆ. ಆದರೆ ತಾಂ.ಮ.ಬ್ರಾ ದ ಪಾಠದಲ್ಲಿಲ್ಲ. ಆದರೆ ಜೈ.ನ್ಯಾ.ಮಾ. ೬.೬.೫ರಲ್ಲಿನ ಪೃಷ್ಠ ಶಬ್ದದಿಂದ ಪೃಷ್ಠ ದೇಶ ಲಭ್ಯವಾದರೆ ಎಂಬುದು ಯುಕ್ತಿಗೆ

ವಿರುದ್ಧವಾಗಿರುವುದು ತಾಂ.ಮ.ಬ್ರಾ. ೬.೩ ದಿಂದ ತಿಳಿಯುತ್ತದೆ. ಆದರೆ ಅಲ್ಲಿ ಈ ಪಾಠವಿಲ್ಲ. ಅಲ್ಲಿ ಸರ್ವಪೃಷ್ಠಶಬ್ದದ ಅನುವಾದವಾಗಿದೆ. ಅಂದರೆ ಜ್ಯೋತಿಷ್ಟೋಮದಲ್ಲಿ **ಮಾಧ್ಯನ್ದಿನ ಪವಮಾನಾನನ್ತರಭಾವೀನಿ ಮಹೇನ್ದ್ರಾದಿ** ನಾಲ್ಕು ಸ್ತೋತ್ರಗಳಿವೆ - **ಅಭಿತ್ವಾ ಶೂರನೋನುಮಃ** ೬೮೦,೬೮೧. **ಕಯಾನಶ್ಚಿತ್ರ ಆಭುವತ್** - ೬೮೨-೬೮೪. **ತಂ ವೋ ದಸ್ಮಮೃತೀಷಹಮ್** ೬೮೫-೬೮೬. **ತರೋಭಿರ್ವೋವಿದದ್ವ ಸುಮ್** ೬೮೭-೬೮೮. ಈ ನಾಲ್ಕು ಸೂಕ್ತಗಳಲ್ಲಿನ ಆ ಸ್ತೋತ್ರಗಳಲ್ಲಿ ಸಪ್ತದಶ ಸ್ತೋಮತ್ವವನ್ನು ಪಡೆದು ಗಾನ ಮಾಡಲಾಗುತ್ತದೆ. ಒಂದೇ ಸೂಕ್ತದಲ್ಲಿರುವ ಮೂರು ಋಚೆಗಳ ಬ್ರಾಹ್ಮಣೋಕ್ತ ವಿಧಾನ ದಿಂದ ಸಪ್ತದಶಧಾಭ್ಯಾಸಗಳೊಂದಿಗೆ ಸಪ್ತದಶ ಸ್ತೋಮವಾಗುತ್ತದೆ. ಇಂತಹ ಸ್ತೋತ್ರ ಗಳಲ್ಲಿ **'ಸಪ್ತದಶಾನಿ ಪೃಷ್ಠಾನಿ'** ಎಂದು ಪೃಷ್ಠ ಶಬ್ದವು ಕೇಳಿಬರುತ್ತದೆ.

ಆ ಪೃಷ್ಠಗಳು ಹೀಗೆ ವಿಶ್ವಜಿತಿಯಲ್ಲಿ ಚೋದಕ ಆಜ್ಞೆ/ ಪ್ರೇರಣೆ ಆದ ಪಕ್ಷದಲ್ಲಿ ಸರ್ವಪೃಷ್ಠ ಶಬ್ದದಿಂದ ಏನೂ ಉದಯವಾಗುವುದಿಲ್ಲ ಎಂಬುದೊಂದು ಪಕ್ಷ ರಥನ್ತರ ಪೃಷ್ಠ ಬೃಹತ್ಪೃಷ್ಠಗಳನ್ನು ಜ್ಯೋತಿಷ್ಟೋಮದಲ್ಲಿ ವಿಕಲ್ಪಿತವಾಗಿರುವಂತೆ ಇಲ್ಲಿಯೂ ಆಜ್ಞೆ/ ಪ್ರೇರಣೆಯಿಂದಾದವುಗಳೂ ವಿಕಲ್ಪವೆನ್ನುವುದಾದರೆ ಸರ್ವಶಬ್ದದಿಂದ ಸಮುಚ್ಚಯವು ವಿಧಿಸಲ್ಪಡುವುದರಿಂದ ಅನುವಾದಮಾಡಿಕೊಂಡದ್ದು ವ್ಯರ್ಥವಾಗುವುದಿಲ್ಲವೆಂಬುದು ಎರಡನೆಯ ಪಕ್ಷ. ಸರ್ವತ್ವದಲ್ಲಿ ಹೆಚ್ಚಿನವು ಮುಖ್ಯವಾಗುವುವೇ ವಿನಃ ಬರೀ ಎರಡಲ್ಲ. ಆದುದರಿಂದ ಈ ಸರ್ವಪೃಷ್ಠ ಶಬ್ದದಿಂದ ಆರು ಸಂಖ್ಯಕವಾದ ಪೃಷ್ಠಗಳನ್ನೇ ಅತಿದೇಶ ಮಾಡಿಕೊಳ್ಳುವುದು ಕರ್ತವ್ಯವೆಂದೆಣಿಸಿದರೆ ಷಡಹದಲ್ಲಿ ಪ್ರತಿದಿನವೂ ಒಂದೊಂದು ಪೃಷ್ಠವು ವಿಹಿತವಾಗಿರುತ್ತದೆ. ಈ ಆರು ಪೃಷ್ಠಗಳು ರಥನ್ತರ ಬೃಹದ್ವೈರೂಪ ವೈರಾಜ ಶಾಕ್ವರ ರೈವತ ಎಂಬ ಊಹ್ಯಗಾನಾದ ಸಾಮಗಳಿಂದ ಉದಯವಾಗುತ್ತವೆ.

ವಿಶ್ವಜಿತ್ ಏಕಾಹದ ಕಾರಣದಿಂದ ಜ್ಯೋತಿಷ್ಟೋಮ ವಿಕೃತ್ವ ಉಂಟಾಗುತ್ತದೆ ಯೇವಿನಾ ಷಡಹದ ವಿಕೃತತ್ವದಿಂದಾಗುವುದಿಲ್ಲ. ಆದರೂ ಸರ್ವಪೃಷ್ಠೋಕ್ತಿ ಬಲದಿಂದ ಆ ಷಟ್‌ಪೃಷ್ಠಗಳ ಅತಿದೇಶವು ಕರ್ತವ್ಯವೇ ಆಗಿರುತ್ತವೆ. ಜೈ.ನ್ಯಾ.ವಿ. ೭.೩.೧೦ರಲ್ಲಿ ಸ್ವರಸಾಮ ವಿಕಾರದ ಚಿಂತನೆ ಇದೆ. ಗವಾಮಯದಲ್ಲಿ ಎರಡು ಮಾಸ ಷಟ್ಕಗಳ ಮಧ್ಯೆ ತಾಂ.ಮ.ಬ್ರಾ. ४.೧.೧,೨, ೧೮೦ ದಿನಗಳ ನಂತರ ವಿಷುವನ್ನಾಮಕ - ತಾಂ.ಮ.ಬ್ರಾ.४.೬.೧. - ಪ್ರಧಾನ ಭೂತವಾದ ಒಂದು ಹವಿರ್ಯಜ್ಞವಿದೆ. ಅದಕ್ಕೆ **ದಿವಾಕೀರ್ತ್ಯಮ್** ಎಂದು ಹೆಸರು. ಗವಾ ಮಯವು ದಶಮಾಸ ಸಾಧ್ಯವಾದುದು ಮತ್ತು ದ್ವಾದಶಮಾಸ ಸಾಧ್ಯವಾದುದು ಎಂದು ಎರಡು ಬಗೆಯಾಗಿದೆ. ಆದುದರಿಂದ ಪ್ರಾಚೀನ ತ್ರಯವೆನಿಸಿದ ಸ್ವರ ಸಾಮ ನಾಮಕಗಳು

ಅಹರ್ವಿಶೇಷಗಳಾಗಿದ್ದು ನಂತರವೂ 'ತ್ರಯಃ ಸ್ವರಃಸಮಾನಃ' ಎಂಬ ಅಭಿಪ್ರಾಯದಿಂದಲೇ, ಯಜ್ಞೀಯ ಪಾತ್ರ ವಿಶೇಷವಾದ 'ಗ್ರಹ' ಹಾಗೂ ಸಾತತ್ಯ ಸಪ್ತದಶ ಸ್ತೋಮಾದಿಗಳು ಧರ್ಮವಿಹಿತವಾಗಿದೆಯೆಂದು ತಾಂ.ಮ.ಬ್ರಾ. ೪.೩ನೆಯ ಖಂಡ ತಿಳಿಸುತ್ತದೆ. ಇದನ್ನೇ ಜೈ.ನ್ಯಾ.ಮಾ. ೭.೮ನೆಯ ಅಧ್ಯಾಯಗಳಲ್ಲಿ - **ಪ್ರಕೃತಿ ಯಾಗೇ ಪ್ರಕೃತೇರತಿದೇಶೋ ವಿಕೃತಿಃ। ಯತ್ರ ವಿಶೇಷರೂಪಮೇವ ಕರ್ತವ್ಯಂ ಶ್ರುತ್ಯೋಪದಿಶ್ಯತೇ ಇತರತ್ ಸರ್ವಂ ಕರ್ಮಾನ್ತರಾದತಿದಿಶ್ಯತೇ ಸಾ ವಿಕೃತಿಃ। ನ ಚಾತಿದೇಶಃ ಪ್ರತ್ಯಕ್ಷ ಶ್ರುತಿವಚನಾದ್ ಸಾಮ್ಯಾದ್ವಾ ಲಿಂಗಾದ್ ವಾ ಅವಗನ್ತವ್ಯಃ** - ಎಂದು ಅತಿದೇಶ ವಿಶೇಷಾತಿದೇಶದ ಬಗೆಗೆ ಬಹುವಿಧವಾಗಿ ಚರ್ಚಿಸಲಾಗಿದೆ.

**ಪೃಷ್ಠಃ ಷಡಹೋ ದ್ವೌ ಸ್ವರ ಸಾಮಾನೀ** ಎಂದೂ **ತಾವೇತಾವಹರ್ವಿಶೇಷೌ ಪೂರ್ವೋಕ್ತಾನಾಂ ಸ್ವರಸಾಮ್ನಾಂ ನ ವಿಕಾರಃ** ಎಂದೂ ತಿಳಿಸಿ ಉದಾಹರಣೆಗಾಗಿ **ವೈಷ್ಣವ ಸಮಾನತ್ವಾತ್ - ವೈಷ್ಣವಾದ್ಯಮ್ ವೈಷ್ಣವೋತ್ತರಮ್** ಎಂಬ ಈ ಊಹ ೭೭೮,೭೭೯ ಸಾಮಗಳನ್ನು ಜೈ.ನ್ಯಾ.ವಿ.೮.೯ನೆಯ ಅಧಿಕರಣದಲ್ಲಿ ವಿಚಾರ ಮಾಡಿದ್ದಾರೆ. ವೈಷ್ಣವ ಶಬ್ದ ಸಾಮಾನ್ಯದಿಂದಾಗಿ ವೈಷ್ಣವಶಬ್ದ ದೇವತಾ ರೂಪ ಗುಣಗಳ ಮುಖ್ಯ ವೃತ್ತಿಯ ಲಕ್ಷಣದಿಂದ ಆಯಾ ಧರ್ಮಗಳನ್ನು ಅತಿದೇಶ ಇನ್ನೊಂದರಲ್ಲಿ ಆರೋಪ ಮಾಡುವಂತೆಯೇ ಸಾಮ ವಿಶೇಷ ರೂಪ ಗುಣವಿಧಾಯಕವಾದ **'ಸ್ವರ ಸಾಮ'** ವೆಂಬ ಶಬ್ದವಿದೆ. ಈ ಪ್ರಸಂಗದಲ್ಲಿ **'ಅನನ್ಯ ಲಿಂಗ'** ಗಳನ್ನನುಸರಿಸಿ ಸ್ವರಸಾಮಗಳಲ್ಲಿ ವಿಕಾರಗಳು ಉಂಟಾಗುತ್ತವೆ. ಹಾಗೆಯೇ ಷಡಹೌಸ್ವರ ಸಾಮಗಳೆರಡರಲ್ಲೂ ಇದೆ. ಅಷ್ಟಾಹದಲ್ಲಿ ಇದನ್ನು ತಿಳಿಸಿದಂತೆಯೇ ಆ ಆರು ಅಹಸ್ಸುಗಳಲ್ಲೂ ಕ್ರಮೇಣ ತ್ರಿವೃತ್ ಪಂಚದಶ ಸಪ್ತದಶ ಏಕವಿಂಶ, ತ್ರಿಣವ, ತ್ರಯಸ್ತ್ರಿಂಶ - ಹೀಗೆ ಸ್ತೋಮ ಷಟ್ಕಗಳು ವಿಧ್ಯುಕ್ತವಾಗಿ ಪ್ರಾಪ್ತವಾಗುತ್ತವೆ. ಹೀಗಿರುವಾಗ ಮೂರು, ಆರು ದಿವಸಗಳ ಕಾಲ ನೆರವೇರಿಸಬೇಕಾದ ಸಪ್ತದಶ ತ್ರಯಸ್ತ್ರಿಂಶಗಳ ವ್ಯತ್ಯಾಸವನ್ನು ವಿಧಿಸಿ ಸಪ್ತಮ, ಅಷ್ಟಮ ಅಹ್ನಗಳಲ್ಲಿ ಸಪ್ತದಶ ಸ್ತೋಮವನ್ನು ಸಿದ್ಧಮಾಡಿ ತ್ರಿಷು ಚರಮೇಷು ಅಹಸ್ಸುಗಳಲ್ಲಿ ಸಪ್ತದಶಸ್ತೋಮವನ್ನು ನಿರಂತರವಾದ ಅರ್ಥವಾದದಿಂದ ಅನುವಾದ ಮಾಡಿ ಕೊಳ್ಳಲಾಗುತ್ತದೆ.

ಮೂರನೆಯದಾದ ಸಪ್ತದಶಮಹಸ್ಸು ತ್ರಯಸ್ತ್ರಿಂಶ ಸ್ಥಾನವನ್ನು ಆವರಿಸಿಕೊಳ್ಳುತ್ತದೆಂಬುದು ವ್ಯತ್ಯಾಸ ವಿಧಿಯಾಗಿರುತ್ತದೆ. ಮೂರೂ ಸಪ್ತದಶಗಳಿಂದ ಸಂಪಾದಿತವಾಗುತ್ತದೆಂಬುದು ಅರ್ಥವಾದವು - **ತಥಾಹಿ** ಶಬ್ದದಿಂದ ಈವರೆಗಿನ ವಿಷಯಗಳನ್ನು ತಾಂ.ಮ.ಬ್ರಾ. ಗವಾಮಯನ ಸತ್ರ ಪ್ರಕರಣಗಳ ಸಮಾಲೋಚನೆಯಿಂದ ತಿಳಿಯಲಾಗಿಲ್ಲ - ಅಲ್ಲಿ ಆದಿ ಅನ್ತಿಮ ಅಹ್ನಗಳಲ್ಲಿ ಸಪ್ತದಶಸ್ತೋಮವನ್ನು ಸ್ವರಸಾಮ ಶಬ್ದಗಳಿಂದ

ಅತಿದೇಶ/ ಅದರ ಧರ್ಮಗಳಿಂದ ಆರೋಪಮಾಡಿದರೆ ನೈರನ್ತರ್ಯವು ಲಭಿಸುತ್ತದೆ. ಅತಿದೇಶಮಾಡಿರದಿದ್ದರೆ ಇಲ್ಲ. ಆದುದರಿಂದ ವೈಷ್ಣವ ನ್ಯಾಯದಿಂದ ಗುಣವಿಧಿಸಿದರೂ ಧರ್ಮದಲ್ಲಿ ಅತಿದೇಶವಿರುತ್ತದೆ. ಜೈ.ನ್ಯಾ.ವಿ. ೧೦.೪.೯ ಚರ್ಚಿಸಿರುವಂತೆ ಹಾಗೂ ತಾಂ.ಮ.ಬ್ರಾ. ೫.೪.೧೦ರಲ್ಲಿ ಸ್ಪಷ್ಟಮಾಡಿರುವಂತೆ ಅಲ್ಲಿ ಗಾನ ಮಾಡಬೇಕಾದ ಗ್ರಾ.೭೭೨ -೭೭೫ ಸಾಮಗಳಿಗೆ ಶ್ಲೋಕಾನುಶ್ಲೋಕವೆಂಬ ಸಂಜ್ಞೆ ಇದ್ದು ಮಹಾವ್ರತದಲ್ಲಿ ಹವಿರ್ದಾನಕ್ಕೆ ಮುಂಚೆ ಶ್ಲೋಕನಾಮಕ ಸಾಮಗಾನದಿಂದಲೂ ನಂತರ ಅನುಶ್ಲೋಕ ನಾಮಕ ಸಾಮಗಾನ ದಿಂದಲೂ ಸದಸ್ಸಿನವರು ಸ್ತುತಿಸುತ್ತಾರೆ ಎಂದು ತಿಳಿದುಬರುತ್ತದೆ. ಇಲ್ಲಿ ಆದಿ ಪದದಿಂದ ಯಾಮಾದಿಗಳೆಂದು ಸೂಚಿತ ವಾಗಿರುವ ಯಾಮಮ್ ಅರ.೧೪೪, ಆಯುಃ ಅರ.೧೨೪, ಋಶ್ಯ.ಅರ.೨೨೮, ಈ ಸಾಮಗಳನ್ನೂ ಪ್ರಕೃತಿಯಾಗದಲ್ಲಿನ ಆಜ್ಯ ಪೃಷ್ಠಾದಿ ಸ್ತೋತ್ರ ಗತವಾದ ರಥನ್ತರ ವಾಮದೇವ್ಯ ಆದಿ ಸಾಮಗಳನ್ನೂ ಗ್ರಹಿಸಬಹುದಾಗಿದೆ.

ಈ ವಿಚಾರವನ್ನು ಪ್ರಕೃತಿಯಾಗದಲ್ಲಿ ಗುರುತಿಸಬಹುದಾಗಿದೆ. **ಯತ್ರ ಕರ್ತವ್ಯಂ ಸರ್ವಂ ಪ್ರಕರ್ಷೇಣ ಕರ್ಮಾನ್ತರ ನೈರಪೇಕ್ಷೇಣ ಉಪದಿಶ್ಯತೇ ಸಾ ಪ್ರಕೃತಿಃ ತತ್ರ ಚಾಸ್ತಿ ಮೂಲಾವಾನ್ತರ ಭೇದಾತ್ ವೈವಿಧ್ಯಮ್ । ಸರ್ವಾತ್ಮನಾ ಕರ್ಮಾನ್ತರ ನಿರಪೇಕ್ಷಾ ಮೂಲ ಪ್ರಕೃತಿಃ । ಕತಿಪಯೇಷ್ವಂಗೇಷು ಕರ್ಮಾನ್ತರಂ ಚಾಪೇಕ್ಷತೇ । ಸ್ವಯಂ ಚ ಕಶ್ಚಿತ್ ಕರ್ಮಭಿಃ ಅಪೇಕ್ಷಣೀಯೋ ಭವತಿ । ಸೇಯಮವಾನ್ತರ ಪ್ರಕೃತಿಃ ತತ್ರ ತಿಸ್ರೋ ಮೂಲ ಪ್ರಕೃತಯಃ ॥** ಈ ವಿಷಯವನ್ನು ಜೈ.ನ್ಯಾ.ವಿ.೮.೧.೩ರಲ್ಲಿ ಚರ್ಚಿಸಲಾಗಿದೆ.

**ಆಜ್ಯೈಸ್ತುವತೇ ಪೃಷ್ಠೈಃ ಸ್ತುವತೇ** ಎಂದು ಹೇಳುವುದು. ಸಾರವಿಲ್ಲದ್ದು, ಹಾಗಾದರೆ ಸ್ತುತಿಯನ್ನು ಲೆಕ್ಕಿಸದೆ ದೇಶ ಸಾಮ ಗುಣಗಳನ್ನು ವಿಧಿಸಲಾಗುತ್ತದೆಯೇ? ಅಥವಾ ಗುಣದ್ವಯ ವಿಶಿಷ್ಟವಾದ ಸ್ತುತಿಯೇ ಅಂದರೆ ಆದ್ಯವಾಕ್ಯದಲ್ಲಿ ಭೇದಾಪತ್ತಿ ಇರುವುದಿಲ್ಲ. ಎರಡನೆಯ ವಾಕ್ಯದಲ್ಲಿ ಕಾರ್ಯಭೇದದಿಂದಾಗಿ ಬಾಧ್ಯಾಭಾವವಿರುವುದ ರಿಂದ ಸಮುಚ್ಚಯವಿದೆ.

ಕೌತ್ಸಾದಿ ಸಾಮಗಳು ಪ್ರಾಕೃತ ಯಾಗದಲ್ಲಿ ಬಾಧಿತವಾಗಿರುವುದನ್ನು ಜೈ.ನ್ಯಾ.ವಿ. ೧೦.೪.೧೦ರಲ್ಲಿ ವಿಚಾರಿಸಿ ಆದಿ ಅಂತ್ಯದಲ್ಲಿ ಸ್ತುತಿಯ ಅಭಾವದ ಎರಡು ಪ್ರಕರಣಗಳಲ್ಲೂ ಸಮುಚ್ಚಯವು ಪ್ರಾಕೃತದಿಂದ ಬಾಧಿತವಾಗಿರುವುದನ್ನು ತೋರಿಸಿದೆ. ತಾಂ.ಮ.ಬ್ರಾ. ೧೩.೯ರಲ್ಲಿ ಅವುಗಳ ಸ್ವರೂಪವನ್ನು ಗೇಯಗಾನದ ೧೦೬೨-೧೦೬೪ ಸಂದರ್ಭದಲ್ಲಿ ವಿಕೃತಿ ವಿಶೇಷವೆಂದು ಕೌತ್ಸಂ ಭವತಿ ಕಾಣ್ವಂ ಭವತಿ ಎಂದಿದ್ದಾರೆ. ಈ ಕೌತ್ಸಾದಿ ಹೆಸರಿನ ಸಾಮಗಳು ಪ್ರಾಕೃತ ಯಾಗದಲ್ಲಿ ಸಮುಚ್ಚಯಗೊಂಡಿದ್ದು, **'ಸ್ತುತಿ'** ಚಿಹ್ನೆಯ ಅಭಾವದಿಂದ

ಕಾರ್ಯದ ಏಕತೆಯ ಅಭಾವವಾಗಿದೆ ಎಂಬುದು ಸರಿಯಲ್ಲ. ಪ್ರಕರಣದ ಸಂದರ್ಭದಲ್ಲಿ 'ಕ್ರತುವಿನ' ಅಂಗಿತ್ವದಿಂದ ಋಗಾಕ್ಷರ ಅಭಿವ್ಯಕ್ತಿ ಲಕ್ಷಣವಾದ 'ಪ್ರಾಕೃತ' ಎಂಬ ಚಿಹ್ನೆಯಕಾರಣ ಕಾರ್ಯೈಕ್ಯವಾಗಿರುವುದರಿಂದ ಬಾಧಕವಾಗಿದೆ.

ಜೈ.ನ್ಯಾ.ವಿ.೧೦.೪.೧೧ರಲ್ಲಿ ಪ್ರಕೃತವಾದ ಬಾಧಕತ್ವವನ್ನು ಹೀಗೆ ತಿಳಿಸಿದ್ದಾರೆ. ಅದು ಸರ್ವಬಾಧಕತ್ವವನ್ನು ತಿಳಿಸುವ ಒಂದೇ ಉಕ್ತಿಯೇ ಅಥವಾ ವಿಶೇಷವಲ್ಲದುದಕ್ಕೆ ಅನ್ವಯ ವಾಗುವ ಒಂದು ಉಕ್ತಿ ವಿಶೇಷವೇ? ಅದು ಪೂರ್ವೋಕ್ತವಾದ ಕೌತ್ಸಾದಿ ಸಾಮವಿಷಯ ಕ್ಕಾಯಿತು. ಹಾಗಾದರೆ ಅಲ್ಲಿ ಕೌತ್ಸಂ ಸಾಮವು ಪ್ರಾಕೃತಯಾಗದಲ್ಲಿ ಹಿಂತಿರುಗಿಸುವ ಅಥವಾ ತಡೆದು ನಿಲ್ಲಿಸುವಂತಹುದೇನು? ಕಾಣ್ವರೂ ಸಹ ಅದು ಸರ್ವವನ್ನೂ ಹಿಂತಿರುಗಿ ಸುವ/ ತಡೆದು ನಿಲ್ಲಿಸುವ ಏಕೈಕ ಸಾಮವೆನ್ನುತ್ತಾರೆ. ಪ್ರಶ್ನೆಯು ಏಕವಚನಾನ್ತವಾಗಿದ್ದು ನಿರ್ದಿಷ್ಟವಾದ ಒಂದನ್ನೇ ನಿವರ್ತಕವೆಂದೂ ದ್ವಿವಚನಾನ್ತ ವಾಗಿದ್ದರೆ ಎರಡೂ ನಿವರ್ತಕ ವೆಂದೂ ಬಹುವಚನಾನ್ತವಾಗಿದ್ದರೆ ಅನೇಕವು ನಿವರ್ತಕ ಗಳೆಂದೂ ಖಚಿತ ಪಡಿಸಬಹು ದಾಗಿತ್ತು. ಇಂತಹ ನಿಯಮದ ಅಭಾವದಿಂದ ಮೊದಲ ಪಕ್ಷ ಪ್ರಾಧಾನ್ಯವಾಗಿ ಏಕವಚನ ರೂಪಾದಿಗಳು ಶ್ರುತಿ ನಿಯಾಮಕವಾದುದರಿಂದ ಅನ್ಯಪಕ್ಷವು ಅಂಗೀಕಾರಾರ್ಹವಾಗಿರು ತ್ತದೆ. ಹೀಗೆಯೇ **ಕೌತ್ಸಂ ಭವತಿ** - ಕೌತ್ಸಸ್ವ ರೂಪವು ಊಹ ಸಾ.೩೦ರಲ್ಲೂ ಕಾಣ್ವಸ್ವರೂ ಪವು ಊಹ.೨೦ರಲ್ಲೂ ತಿಳಿಯುತ್ತದೆ. **ವಸಿಷ್ಠಸ್ಯ ಜನಿತ್ರೇ ....ಭವತಃ** ತಾಂ.ಮ.ಬ್ರಾ. ೧೯.೩.೮, **ಕ್ರೌಂಚಂ ಭವನ್ತಿ** - ತಾಂ.ಮ.ಬ್ರಾ. ೧೩.೯.೧೦, ಇತ್ಯಾದಿ ಹಿಂಜರಿಕೆಯ ಉಕ್ತಿ ಪ್ರತ್ಯಾಸತ್ಯಗಳಲ್ಲಿರುವ ಬಹು ವಚನಗಳು ಆ ಸಂಖ್ಯಾವತ್ವವನ್ನೂ ಪ್ರತ್ಯಾಸತ್ಯವನ್ನೂ ತಿಳಿಸುತ್ತವೆ. ಹೀಗಿರುವಲ್ಲಿ ಅಬಾಧಿತ ಸಾಮ ವಿಷಯವೂ ಮುನ್ನಡೆಗಾಗಿಯೇ ಅನುಗೃಹಿತವಾಗುತ್ತದೆ. ಸ್ವಲ್ಪ ಬಾಧಿತವಾದರೂ ಎಲ್ಲಕ್ಕೂ ತಡೆಯನ್ನೊಡ್ಡುತ್ತದೆಯಾದುದ ರಿಂದ ಎಲ್ಲಕ್ಕೂ ಬಾಧಕವಾಗುವುದಿಲ್ಲ.

ಜೈ.ನ್ಯಾ.ವಿ.೧೦.೪.೧೨ರಲ್ಲಿ ಸ್ತೋಮದ ವೃಧ್ಯ ವೃಧ್ಯೆಗಳ ನಡುವಿನದು ಪ್ರಾಕೃತ ಬಾಧಿತವೆಂಬುದನ್ನು ತಿಳಿಸುತ್ತಿದ್ದಾರೆ. ವೃದ್ಧಿಸ್ತೋಮಕಗಳ ಹಾಗೂ ಪ್ರವೃದ್ಧಸ್ತೋಮಕಗಳ ವಿಕೃತಿರೂಪವಾದ ಕ್ರತುಗಳಿವೆ. ಸಾಮಾನ್ಯುಪದಿಷ್ಟವಾದ ಆ ಎರಡೂ ಪ್ರಕರಣಗಳಲ್ಲಿ ಅತಿದಿಷ್ಟವಾದ ಸಾಮಗಾನಗಳಿರುವುದಿಲ್ಲವಾದರೆ '**ಅನ್ಯಥಾ ಸಾಮೋತ್ಪತ್ತಿ**' ವಿಷಯ ವ್ಯರ್ಥ ವಾಗುತ್ತದೆಂಬುದು ಪೂರ್ವಪಕ್ಷ. ಸ್ಪಷ್ಟವಾಗಿರುವ ಅರ್ಥವೇ ಸಿದ್ಧಾನ್ತ. ಜೈ.ನ್ಯಾ.ಮಾ. ೧೦.೪.೧೩ರಲ್ಲಿ ಪ್ರಕ್ಷೇಪವಲ್ಲದ್ದನ್ನು ಸೇರಿಸುವ ಛನ್ದೋ ವಿಶೇಷಗಳನ್ನು ತಿಳಿಸುತ್ತಿದ್ದಾರೆ ಮೊದಲಿಗೆ ಅನ್ಯತ್ರ ಪ್ರಾಪ್ತವಾದ ನಿಯಮವನ್ನು ಅಪೂರ್ವ ವಿಧಿಯೆಂದು ಗಣಿಸಲಾಗಿದೆ.

ಅವೃದ್ಧ ಸ್ತೋಮಕಗಳ ಪ್ರಾಕೃತ ಕ್ರತುವಿನಲ್ಲಿ ಒಂದರ ಧರ್ಮವನ್ನು ಇನ್ನೊಂದರಲ್ಲಿ ಆರೋಪಿಸುವುದೆಂಬ ಅತಿದಿಷ್ಟವಾದ ಸಾಮವು ಬಹಿಷ್ಕೃತವಾಗಿರುತ್ತದೆ.

ಪ್ರತ್ಯಕ್ಷವಾಗಿ ಉಪದೇಶಿಸಿರುವುದು ಪ್ರಕ್ಷೇಪವಾಗಿಲ್ಲವಾದುದರಿಂದ ಆವಾಪ ಮಾಡಿರುವುದನ್ನೂ ವೃದ್ಧಸ್ತೋಮಕದಲ್ಲಿ ಸೇರಿಸಿರುವುದನ್ನೂ ಹಿಂದಿನ ಅಧಿಕರಣದಲ್ಲಿ ತಿಳಿಸಿದೆ. ಯಾವುದಕ್ಕೋ ಸೇರಿಸಬಹುದೆಂದು ಹೇಳಿರುವುದನ್ನು ಇನ್ನಾವುದೋ ಸ್ತೋತ್ರ ದಲ್ಲಿ ಯಾವುದೋ ಋಕ್ಕನ್ನು ಸೇರಿಸುವುದಕ್ಕೆ ನಿಯಮವಿಲ್ಲದಿರುವುದರಿಂದ ಹೇಗೆ ಸಾಧ್ಯ ವೆಂಬ ಪೂರ್ವಪಕ್ಷ ಸರಿಯಲ್ಲ 'ಏವ' ಶಬ್ದದ ಪ್ರಯೋಗದಿಂದ ಪ್ರಕೃತವಾದ ಪವಮಾನ ವ್ಯತಿರಿಕ್ತವಾದ ಆಜ್ಯಾದಿ ಸ್ತೋತ್ರಗಳಲ್ಲಿ ಗಾಯತ್ರೀ ಬೃಹತೀ ಅನುಷ್ಟುಪ್ ವ್ಯತಿರಿಕ್ತ ವಾದ ಋಚೆಗಳಲ್ಲಿ ಆವಾಪ ಉದ್ವಾಪ, ಅಂದರೆ ಪುರಸ್ಕರಿಸುವ ತಿರಸ್ಕರಿಸುವುಗಳೆರಡರಲ್ಲಿ ಪರಿ ಸಂಖ್ಯಾತತ್ವವು, ಅಂದರೆ ಒಂದನ್ನು ಮಾತ್ರ ಗ್ರಹಿಸುವಿಕೆ ಮಾನ್ಯವಾಗಿರುತ್ತದೆ. 'ಏವ' ಕಾರದಿಂದ ಗಾಯತ್ರೀ ಬೃಹತೀ ಅನುಷ್ಟುಪ್ ಈ ಮೂರೂ ಒಂದರಲ್ಲೇ ಸೇರಿಕೊಂಡು ಮಿಶ್ರವಾಗಿರುವಲ್ಲಿ ಒಂದನ್ನು ಬಹಿಷ್ಕರಿಸುವ ಕ್ರಿಯೆ ನಿರ್ದಿಷ್ಟ ಸಂದರ್ಭದಲ್ಲಿ ಹೇಗೆ? ಈ ಸಂದರ್ಭದಲ್ಲಿ ಈ ವಾಕ್ಯವಿಧಾನದಲ್ಲೇ ಇದನ್ನು ತೋರಿಸಬಹುದು. ಅನನ್ಯ ಶೇಷತ್ವ ವಿರುವುದರಿಂದ ಇದೇನೂ ಅರ್ಥವಾದವಲ್ಲ. ಅಪೂರ್ವ ಅರ್ಥವನ್ನು ಒಳಗೊಂಡಿರುವುದ ರಿಂದ ಅನುವಾದವೂ ಅಲ್ಲ. ಆದುದರಿಂದ ಪವಮಾನದಲ್ಲೇ ಗಾಯತ್ರ್ಯಾದಿಗಳಲ್ಲಿ ಪುರಸ್ಕಾರವಾಗಲೀ ತಿರಸ್ಕಾರವಾಗಲೀ ನಡೆಯ ಬೇಕು. ಜೈ.ನ್ಯಾ.ವಿ. ೧.೪.೨೪ರಂತೆ ಕಣ್ವ ರಥನ್ತರಗಳು ಸ್ವಯೋನಿಯಲ್ಲೇ ಇವೆ. ಬೃಹದ್ರಥನ್ತರಗಳೂ ಸ್ವಯೋನಿಯಲ್ಲಿವೆ.

ರಥನ್ತರದ್ದು ಸ್ವಯೋನಿಯೇ ಅಥವಾ ಮುಂದಿನದೆ? ಚೋದಕದ/ ವಿಧಿಯ ವಿಶೇಷವೇನನ್ನೂ ಹೇಳಿಲ್ಲವಾದುದರಿಂದಲೂ ಸಾಮ್ಯದಿಂದಲೂ ಎರಡನೆಯದೇ ಯೋನಿ ಯಾಗಿದೆ. ಅಂಗವಾಗಿಲ್ಲವಾಗಿ ಸ್ವಯೋನಿಯಲ್ಲಿ ಪಠಿತವಾಗಿರುವುದರಿಂದ ಒಂದರ ಧರ್ಮ ವನ್ನು ಇನ್ನೊಂದರಲ್ಲಿ ಹೇಳುವ ಅತಿದೇಶವೂ ಇಲ್ಲ. ವೈಶ್ಯಸ್ತೋಮ ದಲ್ಲೂ ಪೃಷ್ಠಸ್ತೋತ್ರ ದಲ್ಲೂ ಸಾಮವಿಶೇಷವು ವಿಹಿತವಾದದ್ದು.

ತಾಂ.ಮ.ಬ್ರಾ. ೧೮.೯, ಊಹ ೧೨೪ರಂತೆ ಪ್ರಕೃತಿಯಾಗದ ಪೃಷ್ಠಸ್ತೋತ್ರದಲ್ಲಿ ಬೃಹದ್ರಥನ್ತರ ಸಾಮವನ್ನು 'ತ್ವಾಮಿದ್ಧಿಹವಾಮಹೇ' ಋ.೮೯೯ರಲ್ಲಿಯೂ ಅಭಿತ್ವಾಶೂರ ನೋ ೬೮೦ರಲ್ಲಿಯೂ ರಥನ್ತರಸಾಮವನ್ನೂ ಪುನಾನಃ ಸೋಮ ೬೭೫ರಲ್ಲಿಯೂ ಕಣ್ವ ರಥನ್ತರವನ್ನು ಕಲ್ಪಿಸಲಾಗಿದೆ. ಹೀಗಿರುವಲ್ಲಿ ಬೃಹದ್ರಥನ್ತರದ ಅನ್ಯಯೋನಿಯಲ್ಲಿ ಕಣ್ವ

ರಥನ್ತರದ ಗಾನ ಹೇಗಾಗುತ್ತದೆ? **'ಚೋದಕ'** ದಿಂದ ಲಭಿಸಬೇಕಾದ ವಿಶೇಷ ನಿಯಮ ವಾವುದೂ ಇಲ್ಲವಲ್ಲ? ರಥನ್ತರ ಯೋನಿಯಲ್ಲಿ ಗಾನ ಹೇಗೆ ಸಾಧ್ಯ? ಪ್ರಕೃತಿ ವತ್ ವಿಕೃತಿಃ ಕರ್ತವ್ಯೇತಿ' ಎಂದಿರುವಂತೆ **'ರಥನ್ತರ'** ಸಾಮದ ಧರ್ಮ ಅತಿದೇಶಾರ್ಥದ ನಿಯಮ ವಾಗಿರುವುದರಿಂದ ಸಾಧ್ಯ ಎಂಬ ಉತ್ತರವಾದರೆ ಇದು ಯುಕ್ತವಲ್ಲ. ಬೃಹದ್ರಥನ್ತರ ಸಾಮಗಳ ಅಂಗತ್ವದ ಕಾರಣ, ಇದರ ವಿಧಾನ ಆಗಬಹುದು. ಅವೆರಡ ರಲ್ಲಿ ಅನ್ಯೋನ್ಯತೆ ಇರುವಾಗಲಾಗಲೀ ಅಥವಾ ಇಲ್ಲದಿರುವಾಗಲೀ ಅತಿದೇಶ ಸಾಧುವಲ್ಲವಾಗಿ ಅದು ಸಾಧ್ಯವಲ್ಲ - ಆಯೋನಿಯಲ್ಲಿ ಯಾವಾಗಲಾದರೂ ಅತಿದೇಶ ವಿದ್ದರೆ ಪ್ರಕೃತಿಯಾಗದಲ್ಲಿ **'ಸ್ತುತಿ'** ರೂಪದ ಅಂಗತ್ವ ವಿಧಾನದಿಂದ ಅದು ಸಾಧ್ಯ, ಈಗ ಅವೆರಡರ ನಡುವೆ ಅಂಗತ್ವವಿಲ್ಲವಾಗಿ, ವಿಕೃತವತ್ ಆದೇಶವೂ ಇಲ್ಲ, ಅತಿದೇಶವೂ ಇಲ್ಲ, ಹೀಗಾಗಿ ಸ್ವಯೋನಿ ಯಲ್ಲೇ ಗಾನಮಾಡಬೇಕೆಂದು, ಸಿದ್ಧವಾದಂತಾಗಿದೆ. ಸ್ವಯೋನಿಯಾದ **ಪುನಾನಃ ಸೋಮ** ಋಚೆಯಲ್ಲಿ ಕಣ್ವರಥನ್ತರವನ್ನು ಗಾನಮಾಡ ತಕ್ಕದ್ದು. ಈ ತೃಚೆಯಿಂದ ನಿಷ್ಪಾದ್ಯವಾದ ಕಣ್ವರಥನ್ತರ ಪೃಷ್ಟಗಾನವು ಊಹ.೧೨೪, ಗ್ರಾ.೯೪೬ ಪ್ರಸಿದ್ಧವೇ ಆಗಿದೆ. ರಹಸ್ಯ ಅಭಿತ್ವೇತಿ ೧೫೫, **ತ್ವಾಮಿದ್ಧಿಹೇತಿ** ೧೬೦ **ಪುನಾನಃ ಸೋಮೇತಿ** ೧೫೮ ಗಾನಗಳಲ್ಲೂ ಇದು ಕಂಡು ಬರುವುದರಿಂದ ಅನ್ಯ ರೀತಿಯಲ್ಲಿ ಕಲ್ಪಿಸುವುದು ಶ್ರುತಿವಿರುದ್ಧವಾಗುತ್ತದೆ - ಜೈ.ನ್ಯಾ.ವಿ. ೧೦.೪.೨೫.

ಕಣ್ವರಥನ್ತರವನ್ನು, ಜೈ.ನ್ಯಾ.ಮಾ ೧೦.೪.೨೫, ತನ್ನ ಹಾಗೂ ಅನಂತರದ ಋಚೆಗಳ ಯೋನಿಯಲ್ಲೂ ಗಾನಮಾಡುವುದೆಂದರೆ ಒಂದು ಸಾಮವು ತೃಚೆಯಲ್ಲಿ ಉದಯ ವಾಗುವುದು ಎಂದು ಶ್ರುತಿ ಇರುವುದರಿಂದ ಕಣ್ವ ರಥನ್ತರ ಸಾಮವು ಮೂರು ಋಕ್ಕು ಗಳನ್ನಾಶ್ರಯಿಸಿರುತ್ತದೆ. ಸ್ವಯೋನಿಯಾಗಿರುವ ಒಂದು ಋಕ್ ಮತ್ತು ನಂತರದ ಎರಡು ಋಕ್. ಇದೇ ಕ್ರಮ ಬೃಹದ್ರಥನ್ತರದಲ್ಲೂ ಇದೆ. ಬೃಹದುತ್ತರದ ಹಾಗೂ ರಥನ್ತರ ದುತ್ತರದ ಋಕ್‌ಗಳಲ್ಲಿ ಅತಿದೇಶದಿಂದ ಪಡೆದ ವಿಶೇಷತೆಯ ಕಾರಣ ಸ್ವೇಚ್ಛೆಯಿಂದ ಗಾನ ಮಾಡಬಹುದೆಂಬುದು ಪ್ರಥಮ ಪಕ್ಷ. ನಾಮಸಾಮ್ಯದಿಂದ ರಥನ್ತರೋತ್ತರದಲ್ಲೇ ಗಾನ ಮಾಡಬೇಕೆಂಬುದು ಎರಡನೆಯ ಪಕ್ಷ. ಪ್ರಕೃತ ಈ ಋಚೆಗಳಲ್ಲಿ ಸಾಕ್ಷಾತ್ ಅಂಗತ್ವದ ಅಭಾವವಿದ್ದರೂ ಸಾಮದ ಮೂಲಕ ಅಂಗತ್ವವನ್ನು ಅಂಗೀಕರಿಸಿ ಚೋದಕತ್ವವನ್ನು ಪಡೆಯಬಹುದೆಂಬುದು ಎರಡೂ ಪಕ್ಷಕ್ಕೆ ಅನ್ವಯ ಮಾಡಬಹುದು. ಮುಂದಿನ ಗ್ರಂಥ ಗಳಲ್ಲಿ, ಯೋನಿಯಂತೆ ಪಠಿತವಾಗಿರುವುದರಿಂದ ಸ್ವಯೋನಿಯಲ್ಲಿ ಗಾನ ಮಾಡಬಹು ದೆಂಬ ಸಿದ್ಧಾಂತ ಮೂರನೆಯ ಪಕ್ಷ.

ಪೂರ್ವಾಧಿಕರಣದಲ್ಲಿರುವುದಕ್ಕಿಂತ ವಿಶೇಷವಾಗಿರುವ ವಿಚಾರವನ್ನು ಬೃಹದಿತ್ಯಾದಿಗಳಿಂದ ತಿಳಿಸಲಾಗಿದೆ. ಬೃಹದ್ರಥನ್ತರಗಳು ಮುಂದೆ ಸ್ವಯೋನಿಯಲ್ಲಾಗಲೀ ಅಥವಾ ಉತ್ತರ ಯೋನಿಯಲ್ಲಾಗಲಿ ಗಾನ ಮಾಡಲ್ಪಡಬಹುದು. ಸರ್ವಥಾ ಸ್ವಯೋನಿ ಋಕ್ ತ್ಯಾಗ ಮಾಡಿ ಗಾನಮಾಡುವುದರಲ್ಲಿ ಋಗನ್ತರ ಪರಿಗ್ರಹವು ಸಮಾನವಾಗಿರುವುದರಿಂದ ಚೋದಕವು ಇಲ್ಲಿ ಸಂಪಾದಿಸಿಕೊಡುವ ಪ್ರಾಪಕವಾಗಿದೆ. ಅಕ್ಷರವಿಶಿಷ್ಟವಾದ ಸ್ವರಾದಿಗಳಿಗೆ ಸಾಮತ್ವವಿಲ್ಲದಿದ್ದರೂ ಸ್ವರಾದಿಗಳು ಇರುತ್ತವೆಂದು ಹಿಂದೆ ಸಿದ್ಧಾಂತ ಮಾಡಲ್ಪಟ್ಟಿದೆ. **ಆದೂ 'ಪುನಾನ'** ಸೂಕ್ತದ **'ದುಹಾನ'** ಎಂಬ ಎರಡನೆಯ ಋಚೆಯ ತನಿಖೆ ಮಾಡಬೇಕಾದುದಿಲ್ಲವೆಂದರೆ ಮೂರನೆಯ ಋಚೆಯು ಕಣ್ವರಥನ್ತರ ಗಾನ ಕಾಲದಲ್ಲಿ **ಪುನಾನ** ಇತ್ಯಾದಿ ಋಚೆಗಳನ್ನು ತ್ಯಾಜ್ಯ ಮಾಡುವುದೆಂದರೆ ಸ್ವಯೋನಿತ್ಯಾಗ ಋಗನ್ತರಗ್ರಹಣವೆಂಬುದು ಕೊರಳಿಗೆ ಬಿದ್ದಂತೆ ಅನಿವಾರ್ಯವಾಗಿದೆ. ನಿಶ್ಚಯವಾಗಿಯೂ ಮತ್ತೊಂದು ಋಚೆಯನ್ನು ಆಧಾರವಾಗಿ ಗ್ರಹಿಸುವಲ್ಲಿ ವೈಷಮ್ಯವಿಲ್ಲವೆಂಬುದಕ್ಕೆ **'ಪ್ರಕೃತಿ ವಿಕೃತಿರಿತಿ ಚೋದಕ ಬಲಾತ್'** ಎಂಬುದೇ ಕಾರಣವಾಗಿದೆ. ಪ್ರಕೃತಿ ಯಾಗದಲ್ಲಿ ರಥನ್ತರ ಬೃಹದ್‌ಗಳ ಯೋನಿಗಳಲ್ಲಿ ಇದರ ಆಧಾರವಿದೆ ಎಂಬುದು ಪೂರ್ವಪಕ್ಷಿಗಳನ್ನು ಬಾಧಿಸುವ ಶಂಕೆಯಾಗಿದೆ. ತೃಚ ಶಬ್ದವು ಸಮಾನ ಛಂದಸ್ಸಿನ ಏಕದೇವಾತ್ಮಕವಾದ ಮೂರು ಋಚೆಗಳು ಎಂಬುದು ತಾಂಡ್ಯಬ್ರಾಹ್ಮಣಾದಿಗ್ರಂಥಗಳಲ್ಲಿ ಪ್ರಸಿದ್ಧವಾಗಿದೆ. ಆದುದರಿಂದ ತೃಚವು ವೇದದ ಪ್ರತ್ಯಕ್ಷ ಚೋದಕ/ ಪ್ರೇರಣೆಯಿಂದ ಬಾಧಿತವಾಗುತ್ತದೆಂಬುದು ಸಿದ್ಧಾನ್ತದ ಆಶಯವಾಗಿದೆ.

ಜೈ.ನ್ಯಾ.ವಿ. ೧೦.೫.೨ ಮೂರು ಋಚೆಗಳಲ್ಲಿ ಮೊದಲಿನದಾವುದೆಂಬುದನ್ನು ತಿಳಿಸುತ್ತದೆ. ಪರಸ್ಪರ ಬದಲಾವಣೆ/ ಅದಲುಬದಲು ವಿಧಾನದಿಂದ ನೆರವೇರಿಸುವ ಒಂದು ಸಂಖ್ಯೆಯ/ ಮೂರು ಸಂಖ್ಯೆಯ **'ಏಕತ್ರಿಕ'** ಎಂಬ ಹೆಸರಿನ ಒಂದಾನೊಂದು ಕ್ರತುವಿದೆ. ಇದರ ತ್ರಿಕದೊಂದರಲ್ಲಿನ 'ಬಹಿಷ್ಪವಮಾನಂ' ಸ್ವರೂಪದ ಆಧಾರ ರೂಪಾದಿಗಳನ್ನು ವರ್ಣಿಸುತ್ತಾ ಮೂರರಲ್ಲೂ ಆಜ್ಯವನ್ನು ಹೋಮ ಮಾಡಲಾಗುತ್ತದೆ. **ಪಾನ್ತಮಾವೋ ಅನ್ಧಸಃ ।** ಸಾ.ಋ.೧೫೫ ದಿಂದ ಉತ್ಪನ್ನವಾದ ಗ್ರಾ.೨೬೧-೨೬೩, ವೈತಹ್ಯ ಸಾಮವಿದೆ. **ತ್ರಿಸೃಷ್ಟಿ** ಎಂದಾಗ ಕಡೆಯಲ್ಲಿ **ಓಕೋ ನಿಧನಂ** ಇರುವ **ವೈತಹವ್ಯಂ** ಎಂಬುದು ಇಲ್ಲಿ ಗ್ರಾಹ್ಯವಲ್ಲ. ಊಹ ಸಾ.೧೮, ಓಕೋ ನಿಧನವಿರುವ **ವೈತಹವ್ಯಂ** ಎಂಬುದೇ ಗ್ರಾಹ್ಯ. ಇದಕ್ಕೆ ಆಧಾರಭೂತವಾದ **ಪಾನ್ತಮಾವಃ** ಸಾ.ಋ. ೭೧೩, **ಪುರುಹೂತಮ್** ೭೧೪, ಇನ್ದ್ರ ಇನ್ದ್ರಃ ೭೧೫, ಹೀಗೆ ಪ್ರಥಮ ಪರ್ಯಾಯದಲ್ಲಿ ಆಜ್ಯವನ್ನು ಹೋಮ ಮಾಡಬೇಕು. ದ್ವಿತೀಯ

ಪರ್ಯಾಯದಲ್ಲಿ **ಅಯನ್ತ ಇನ್ದ್ರಸೋಮ** ಸಾ.ಋ.೭೨೫, ಊಹ.೨೨, **ದೈವೋದಾಸಮ್,** ತೃತೀಯ ಪರ್ಯಾಯದಲ್ಲಿ **ಇದಹ್ಯನ್ವೋಜಸಾ** ಸಾ.ಋ.೭೩೭, ಊಹ.೪೪, **ಮಾಧುಚ್ಛನ್ದಸಮ್** ಸಾಮವಾಗಿರುತ್ತದೆ.

**ಪ್ರವ ಇನ್ದ್ರಾಯ ಮಾದನಜ್** ೭೧೬ ರಿಂದ ಉತ್ಪನ್ನವಾದ ಆರು ಸಾಮಗಳಲ್ಲಿ **'ಗೌರೀವಿತಂ'** ಎಂಬುದೇ ಪ್ರಥಮ ಪರ್ಯಾಯದಲ್ಲಿ ಮೈತ್ರಾವರುಣವಾಗಿರುತ್ತದೆ. **ಆತೂನ ಇನ್ದ್ರಕ್ಷುಮನ್ತಂ** ೭೨೮ ರಿಂದ ಉತ್ಪನ್ನವಾದ ನಾಲ್ಕು ಸಾಮಗಳಲ್ಲಿ **'ಆಕೂಪಾರಮ್'** ಊಹ.೨೪, ದ್ವಿತೀಯ ಪರ್ಯಾಯದಲ್ಲಿ ಮೈತ್ರಾವರುಣವಾಗಿರುತ್ತದೆ. **ಆತ್ವೇತಾ ನಿಷೀದತ** ೧೬೪ ರಿಂದ ಉತ್ಪನ್ನವಾದ **'ದೇವಾತಿಥಂ'** ಗ್ರಾ.೨೯೦,೪೦೭ ಸಾಮವು ಎರಡನೆಯ ಪರ್ಯಾಯದಲ್ಲಿ ಮೈತ್ರಾವರುಣವಾಗಿರುತ್ತದೆ. ಇದಕ್ಕೆ ತಾಂ.ಮ.ಬ್ರಾ.೯.೨ ಪ್ರಮಾಣ ವಾಗಿದೆ. ಆದರೆ **ಪ್ರವ ಇನ್ದ್ರಾಯ** ೭೧೬ ಆದಿ ಋಚೆಗಳಿಂದಾದ ಗಾನದ ಹೆಸರುಗಳು ಊಹ ದಲ್ಲಿ ಪ್ರಸಿದ್ಧವಾಗಿದ್ದರೂ ಅವುಗಳನ್ನು ಇಲ್ಲಿ ಗ್ರಹಿಸಿಲ್ಲ. ಒಂದರಿಂದ ಮೈತ್ರಾವರುಣ ಋತ್ವಿಜ, ಮೂರರಿಂದಲೂ ಬ್ರಾಹ್ಮಣಾಚ್ಛಂಸಿ ಋತ್ವಿಜ - **ವಯಮುತ್ವಾ ತದಿದಾರ್ಥಾ** ಸಾ.ಋ.೭೯೮ರ **ಕಾಣ್ವಸಾಮ** ಊಹ.೨೦ ಪ್ರಪ್ರಥಮ ಪರ್ಯಾಯದಲ್ಲೂ **ಅಭಿತ್ವಾ ವೃಷಭಾಸುತಃ ।** ಸಾ.ಋ.೭೩೧ರ **ಆರ್ಷಭ** ಸಾಮ, ಊಹ ೨೫ ದ್ವಿತೀಯ ಪರ್ಯಾಯ ದಲ್ಲೂ **'ಯೋಗೇಯೋಗೇ ತವಸ್ತರಂ'** ಸಾ.ಋ.೭೪೩, ಊಹ ೨೯ ತೃತೀಯ ಪರ್ಯಾಯ ದಲ್ಲೂ ಗ್ರಾಹ್ಯವಾಗಿದೆ.

ಒಂದರಿಂದ **ಆಚ್ಛಾವಕ ಋತ್ವಿಜ - ಇನ್ದ್ರಾಯಮದ್ವನೇ ಸುತಮ್ ।** ಸಾ.ಋ.೧೫೮, ೭೨೨, ಶ್ರೌತಕಕ್ಷ ಗ್ರಾ.ಸಾಮ.೧೮೮, ಊಹ ಸಾಮ.೨೬ ಪ್ರಥಮ ಪರ್ಯಾಯದಲ್ಲಿ ಗಾನಗಳನ್ನು ಮಾಡುವುದರಿಂದ **ಇದಂ ವಸೋ ಸುತಮನ್ಧಃ ।** ಸಾ.ಋ.೧೨೪,೭೩೪, **ಗಾರಾಣಿ** ಗ್ರಾ.೨೦೧-೨೦೩, ದ್ವಿತೀಯ ಪರ್ಯಾಯದಲ್ಲಿ **ಇನ್ದ್ರಸುತೇಷು ಸೋಮೇಷು,** ಸಾ.ಋ.೩೮೧, ಇದರಿಂದ ಉತ್ಪನ್ನವಾದ ಕೌತ್ಸ, ಗ್ರಾ.ಸಾ.೬೫೪, ತೃತೀಯ ಪರ್ಯಾಯ ದಲ್ಲಿ - ಗ್ರಹಣೀಯವೆಂದು ತಾಂ.ಮ.ಬ್ರಾ. ೬.೨ ಮತ್ತು ಆರ್ಷೇಯ ಬ್ರಾಹ್ಮಣಗಳಲ್ಲಿ ತಿಳಿಸಲಾಗಿದೆ.

ಪ್ರಕೃತಿಯಾಗದ ಮಾಧ್ಯಂದಿನ ಪವಮಾನದ ಮೂರು ತೃಚೆಗಳಲ್ಲಿ ಪ್ರಥಮವಾದ **ಉಚ್ಚಾತೇ ಜಾತಮ್** ೬೭೨-೬೭೪, ಗಾಯತ್ರೀ ಛಂದಸ್ಸಿನದು, ಎರಡನೆಯದಾದ **ಪುನಾನಃ ಸೋಮ** ೬೭೫-೬೭೭, ಬೃಹತೀ ಛಂದಸ್ಸಿನದು, ಮೂರನೆಯದಾದ **ಪ್ರತುದ್ರವಾ**

೬೭೭-೬೭೯, ತ್ರಿಷ್ಟುಪ್ ಛಂದಸ್ಸಿನದು, ಇದನ್ನು ಕುರಿತೇ **ತ್ರಿಚ್ಛನ್ದಾ ಆಪೋವಾ ಮಾಧ್ಯನ್ದಿನ** - ತಾಂ.ಮ.ಬ್ರಾ. ೭-೩ರಲ್ಲಿ ಸ್ಫುಟವಾಗಿದೆ. **ತ್ರಿಭಿಶ್ಚ ಛನ್ದೋಭಿಃ** ಅಂದರೆ ಗಾಯತ್ರೀ ತ್ರಿಷ್ಟುಪ್ ಬೃಹತೀ ಎಂದೇ ಭಾಷ್ಯ ಇರುವುದರಿಂದ - ತ್ರಿಕದಲ್ಲಿ ಮಾಧ್ಯನ್ದಿನ ಪವಮಾನದಲ್ಲಿ ಹೇಳಿರುವ ತ್ರಿಸೃಷ್ಟಿತಿಯಲ್ಲಿ ಮೊದಲಿನ ಮೂರು ಮೂರು ಋಚೆಗಳು ಗ್ರಾಹ್ಯವೇ? ಅಥವಾ ಪ್ರಥಮ ತೃಚೆಗಳಿರುವ ಕ್ರಮದಲ್ಲೇ ಮೂರನ್ನೂ ಪಠಿಸಬೇಕೇ? ಎಂಬುದು ಸಂಶಯ - ಜೈ.ನ್ಯಾ.ವಿ. ೧೦.೫.೨, ಇಲ್ಲಿ **ತ್ರಿಚ್ಛನ್ದಸ್ತ್ವ** ಶ್ರುತಿಯು ಪ್ರಬಲವಾಗಿದ್ದು ಗ್ರಾಹ್ಯವಾಗಿದೆ ಎಂಬ ಪಕ್ಷದಲ್ಲಿ - **ತ್ರಿಚ್ಛನ್ದಸ್ತ್ವವೇ** ಪ್ರಾಕೃತವಾಗಿದ್ದು ಇಲ್ಲಿ ಮೂರು ಛನ್ದಸ್ಸುಗಳಿಂದ ಕೂಡಿದ ತೃಚವನ್ನೇ ಮೂರು ಋಚೆಗಳ ಗುಂಪನ್ನೇ ಉಪದೇಶಿಸಲಾಗಿದೆ. ವಿಕೃತವಾದರೂ ಅದೆಲ್ಲವೂ - ಒಂದರ ಧರ್ಮವನ್ನು ಇನ್ನೊಂದರಲ್ಲಿ ಆರೋಪಿಸುವ - **'ಅತಿದಿಷ್ಟ'** ವಾಗಿದೆ ಎಂಬ ಪಕ್ಷದಲ್ಲಿ ಅದನ್ನು ಒಪ್ಪಬಹುದು. ಇದರಿಂದ ಪಾಠಕ್ರಮವೂ ಅತಿದಿಷ್ಟವೇ ಆದಂತಾಯಿತು. ಹೀಗಿರುವಲ್ಲಿ ಪ್ರಾರಂಭಿಸಿದ ಗಾಯತ್ರೀ ಛನ್ದಸ್ಸಿನ ತೃಚೆ ಸಮಾಪ್ತವಾಗುತ್ತಿದ್ದಂತೆಯೇ ಬೃಹತೀ ಛನ್ದಸ್ಸಿನ ತೃಚೆಯ ಪ್ರಥಮ ಋಕ್ಕನ್ನು ಪ್ರಾರಂಭಿಸುವಾಗ ಅದು **'ಆರಂಭಿಸ್ತಿಸ್ರಷು'** ಎಂಬ ವಿಶೇಷ ವಿಧಾನದಿಂದ ಬಾಧಿತವಾಗುತ್ತದೆ. ಆದುದರಿಂದ ಇಲ್ಲಿ ತೃಚೆಗಳನ್ನು ಸಮಷ್ಟಿಯಾಗಿ ಗ್ರಹಿಸುವುದೇ ಸೂಕ್ತವಾಗಿರುತ್ತದೆ.

**ಉಚ್ಚಾತೇ ಜಾತಮನ್ಧಸಃ** ಋ.೬೭೨, ಮೊದಲನೆಯದು, **ಸ ನ ಇನ್ದ್ರಾಯ ಯಜ್ಯಮೇ** ೬೭೩, ಎರಡನೆಯದು, ಏನಾವಿಶ್ವಾನ್ಯರ್ಯ ಆ ೬೭೪ ಋಕ್ಕು ಮೂರನೆಯದು. ಇವುಗಳ ಊಹಗಾನ ೭೬೮ರ ತ್ರಿಚ್ಛನ್ದಸ್ತ್ವವು ಮೂರು ಪರ್ಯಾಯಗಳ ರೂಪದಲ್ಲಿ ಸಿದ್ಧಿಸುತ್ತದೆಯೇ ಹೊರತು ಒಂದೇ ಪರ್ಯಾಯದಲ್ಲಿ ಸಿದ್ಧಿಸುವುದಿಲ್ಲವೆಂಬುದು, ಸಿದ್ಧಾಂತದ ಆಶಯ.

ಜೈ.ನ್ಯಾ.ವಿ.೧೦.೫.೩, ಒಂದು ಋಕ್ಕಿನಲ್ಲಿ, 'ಧೂರ್ಗಾನ' ಮಾಡುವುದು ಕರ್ತವ್ಯವೆಂಬುದನ್ನು ತಿಳಿಸುತ್ತಾ ಏಕ ತ್ರಿಕ ಕ್ರತುಗಳಲ್ಲೇ ಪರಸ್ಪರ ಸಂಬಂಧವಿರುವ, ವ್ಯತಿಷಂಗದ ಸ್ತೋತ್ರಗಳಲ್ಲಿ ಸಂಪಾದಿಸಬೇಕಾದ ಧೂರ್ಗಾನದಲ್ಲಿ ತೃಚೆ ಇರಬೇಕೆ? ಇರಬೇಕಾದರೆ ಆ ಒಂದು ತೃಚೆಯಾವುದಿರಬೇಕು ಎಂಬುದು ಸಂಶಯ. ಚೋದಕ/ ಪ್ರೇರಣೆಯಿಂದ ತೃಚೆಯಾಗುತ್ತದೆ ಎಂದಾದರೆ - ಇಲ್ಲಿ ತ್ರಿಕ ಒಂದೇ ಆಗಿದೆ. ಕ್ರತುವಿನಲ್ಲಿ, **'ಆವೃತ್ತ ಧೂರ್ಷು ಸ್ತುವತೇ'** ಆವೃತ್ತಿ ವಿಧಾನದಿಂದ ಒಂದೇ ಋಕ್ಕಿನಿಂದ ಧೂರ್ಗಾನವಾಗುತ್ತದೆ. ಹೀಗಾಗಿ ಇಲ್ಲಿರುವ ತೃಚೆಯಿಂದಲೇ ಗಾನವೂ ಸಹ ತ್ರಿರಾವೃತ್ತಿ ಆಗುತ್ತದೆಯೆಂದರೆ **ಆವೃತ್ತೇಃ** ಜೊತೆಯಲ್ಲಿ ಸ್ತುತಿ ವಿಶೇಷಣವಿರುವುದರಿಂದ ಹಾಗಾಗುವುದಿಲ್ಲ. ಕಾರಣ ಸಂಕೀರ್ತನ ಪರವಾದ

ಪದ ಸಮೂಹಕ್ಕೆ ಸ್ತುತಿ ಎನ್ನುತ್ತಾರೆ ಹಾಗೂ ಈ ಸ್ತುತಿಯು ಋಗಾವೃತ್ತಿಯಾಗದೆ ಮೂರು ಋಕ್ಕುಗಳಿಂದ ಸಿದ್ಧಿಸುವುದಿಲ್ಲ. ಆದುದರಿಂದ ಧೂರ್ಗಾನದಲ್ಲಿ ಮಾತ್ರ ಇದು ಸಾಧ್ಯ.

ಜೈ.ನ್ಯಾ.ವಿ. ೧೦.೫.೬, ವಿವೃದ್ಧ ಸ್ತೋಮಕವು ಕ್ರತುವೆಂದೇ ಪರಿಗಣಿಸಲಾಗಿದೆ. ಪ್ರಜಾಕಾಮನಾದವನು ಏಕವಿಂಶಾತಿರಾತ್ರದಿಂದ ಯಜ್ಞಮಾಡಬೇಕು. ಓಜಸ್ಕಾಮನಾದ ವನು ತ್ರಿಣವ/ ೨೭ರಿಂದಲೂ, ಪ್ರತಿಷ್ಠಾಕಾಮನಾದವನೂ ತ್ರಯಸ್ತ್ರಿಂಶ ೩೩ರಿಂದಲೂ ಯಜ್ಞಮಾಡಬೇಕು. ಪ್ರಕೃತಿ ಯಾಗಗಳು ಜ್ಯೋತಿಷ್ಟೋಮಾದಿಗಳ ಅಂತರ್ಗತ ವಾದವು ಗಳಾಗಿವೆ. ತ್ರಿವೃತ್ ಪಂಚದಶಾದಿ ಸ್ತೋಮಗಳು ವಿವೃದ್ಧಯಾಗಗಳು. ಏಕವಿಂಶ ತ್ರಿಣವ ತ್ರಯಸ್ತ್ರಿಂಶಗಳು ಸ್ತೋಮಗಳು. ಈ ಪ್ರಕರಣದಲ್ಲಿ ತಾಂ.ಮ.ಬ್ರಾ. ೬.೨ ಆದಿ ಖಂಡಗಳೂ ಮತ್ತು ಈ ವಾಕ್ಯಗಳೂ ಮನನೀಯವಾದವು. **ಆದಿತ್ಯ ಏವೈಕವಿಂಶತ್ಯಾಯ ತನಮ್** ತಾಂ.ಮ.ಬ್ರಾ. ೧೦.೧.೧೦, **ತ್ರಿವೃದೇವ ತ್ರಿಣವ ಸ್ಯಾಯತನಮ್** ತಾಂ.ಮ.ಬ್ರಾ. ೧೦.೧.೧೩, **ದೇವತಾ ಏವ ತ್ರಯಸ್ತ್ರಿಂಶಸ್ಯಾಯತನಮ್** ೧೦.೧.೧೬, ಇತ್ಯಾದಿ. ಇವುಗಳಲ್ಲಿ ಪ್ರಾಕೃತಗಳೆಂದರೆ ಪ್ರಕೃತಿ ಯಾಗ ಗತವಾದ ತ್ರಿವೃದಾದಿ ಸ್ತೋಮ ಮೂಲಕವಾದವುಗಳು ಎಂದರ್ಥ. ಸಾಮಗಳ ಅಭ್ಯಾಸದಿಂದ 'ವೃದ್ಧಿ' ಯಾಗುತ್ತದೆಯೇ ಅಥವಾ ಸಾಮಾನ್ತರಗಳ ಆಗಮದಿಂದ ವೃದ್ಧಿಯಾಗುತ್ತ ದೆಯೇ ಎಂಬುದು ಸಂಶಯ. ಶ್ರುತಿಯಲ್ಲಿ ಹೇಳದಿರುವ/ ಕೇಳದಿರುವ ಸಾಮಗಳನ್ನು ಕಲ್ಪನೆ ಮಾಡಿಕೊಳ್ಳುವುದು ಅಸಾಧ್ಯ. ಅಭ್ಯಾಸದಿಂದ ವೃದ್ಧಿ ಎಂದರೆ - ಜೈ.ನ್ಯಾ.ವಿ.೫.೩.೫ರ ವ್ಯಾಖ್ಯಾನದಲ್ಲಿ ಈಗಾಗಲೇ ತಿಳಿಸಿರುವಂತೆ **'ಕಿನ್ತು, ಸಾಮಾ ಗಮೇನ ಸ್ತೋಮ ಪೂರಣಮಿತಿ ದಶಮೇವಕ್ಷ್ಯತೇ'** ಅಭ್ಯಾಸಾದಿಗಳಿಂದಲೇ ಎಂಬುದೇ ಮರ್ಯಾದೆ.

**'ಅಭ್ಯಾಸ'** ಎಂಬುದು ಸಾಕ್ಷಾತ್ ಶ್ರುತಿಯದಲ್ಲ, ಆದರೆ ಏಕವಿಂಶಾದಿ ಸಂಖ್ಯಾ ಪೂರಣಕ್ಕಾಗಿ ಕಲ್ಪಿಸಲಾಗಿದೆ. ಸಂಖ್ಯೆಯು ದ್ರವ್ಯಗತವಾಗಿಯೂ ಭಿನ್ನ ದ್ರವ್ಯಗಳಿಂದಲೂ ಸಾರ್ಥಕವಾಗುತ್ತದೆಯೇ ಹೊರತು ಒಂದೇ ದ್ರವ್ಯದ ಆವೃತ್ತಿಯಿಂದೇನಲ್ಲ. ಎಂಟರಿಂದಾ ಗಿರುವ ಒಂದು ಕುಂಭವನ್ನು ತೆಗೆದುಕೊಂಡು ಬಾ ಎಂದು ಯಾರೂ ಹೇಳುವುದಿಲ್ಲ. ನನ್ನ ಮನೆಯಲ್ಲಿ ಎಂಟು ಕುಂಭಗಳಿವೆ ಎಂದೇ ವ್ಯವಹರಿಸುತ್ತಾರೆ. ಹೀಗೆಯೇ ಸ್ತೋಮಾವಯವ ದ್ರವ್ಯಗತ ಸಂಖ್ಯೆಯ ಅವಯವ ಭೂತವಾದ ಸಾಮಗಳು ಪದ ಅರ್ಥಗಳ ಭೇದಗಳಿಂದ ಮುಂದುವರೆಯುತ್ತವೆ. ಈ ಭೇದವೇ ಸಾಮಾನ್ತರಾಗಮದ ಸಂಕೇತ/ ಲಿಂಗವಾಗಿದೆ. **ಏವಾವಪನ್ತೀತ್ಯಾವಾಪ** ಉದ್ದೇಶದಿಂದ ದೇಶವಿಶೇಷ ವಿಧಿಯು ಮತ್ತೊಂದು ಸಂಕೇತ/

ಲಿಂಗವಾಗಿದೆ. ಸಾಮಾನ್ತರ್ಯೋತ್ಪತ್ತಿಯ ಅರ್ಥವು ಮತ್ತೊಂದು ಸಂಕೇತವಾಗಿದೆ. ಆದುದರಿಂದ ಆಗಮದಿಂದಲೇ ವೃದ್ಧಿ ಎಂಬುದು ಸಿದ್ಧವಾಗಿದೆ. ತಾಂ.ಮ.ಬ್ರಾ. ೨.೧೪-೧೬ ಖಂಡಗಳಲ್ಲಿಯೂ, ೩-೧,೭ ಖಂಡಗಳಲ್ಲಿಯೂ ಇದನ್ನು ತಿಳಿಸಲಾಗಿದೆ. ಪ್ರಕೃತ ವರ್ಧಮಾನವಾದ ಸ್ತೋಮಗಳಲ್ಲಿ ಪ್ರಥಮ ಪರ್ಯಾಯದಲ್ಲಿನ ಪ್ರಥಮ ತೃಚೆಯ ಭಾಗದಲ್ಲಿ ಮೂರು ವಚನಗಳಿವೆ - ಮಧ್ಯಮಾವಾಪಸ್ಥಾನ ಉತ್ತಮಾ ಪರಿಚರಾ ತೃಚೆ ಭಾಗಾ ವಾಪಸ್ಥಾನ - ಎಂದು ಲಾಟ್ಯಾಯನ ಸೂತ್ರ ಪರ್ಯಾಲೋಚನೆಯಿಂದ ತಿಳಿಯುತ್ತದೆ. ಇದೆಲ್ಲಾ ಚರ್ಚೆಗಾಗಿ ಮಾತ್ರ. ಬೋಧನೆಗಾಗಿ/ ತಿಳುವಳಿಕೆಗಾಗಿ ಮಾತ್ರ ವಿವಾದಗಳೇನೂ ಇಲ್ಲ.

ಜೈ.ನ್ಯಾ.ವಿ.೧೦.೫.೭ರಲ್ಲಿ **'ವೃದ್ಧಾವೃಚ ಆಗಮಃ'** ಎಂಬುದನ್ನು ವಿವರಿಸುತ್ತಿದ್ದಾರೆ. ಬಹಿಷ್ಪವಮಾನದ ಪ್ರಾತಃ ಸವನದಲ್ಲಿ **'ಸ್ತೋಮವು ಅವಿವೃದ್ಧ'** ಅದರ ವಿಕೃತಿಯಲ್ಲಿ ವೃದ್ಧಿ ಇರುವಾಗ ಹಿಂದೆ ತಿಳಿಸಿದಂತೆ ಸಾಮಾನ್ತರಗಮವಾದರೆ - **ಏಕಂ ಹಿ ತತ್ರ ಸಾಮ** ಎಂದು ಬಹಿಷ್ಪವಮಾನದ ಪ್ರಕೃತಿಯ ಸಾಮ್ಯೈಕತ್ವವನ್ನು ಶ್ರುತಿ ತಿಳಿಸುತ್ತಿದೆಯಾದುದರಿಂದ ಸಾಮಾನ್ತರಾಗಮವಿರುವುದಿಲ್ಲ. ಹೀಗಿರುವಾಗ ಅಭ್ಯಾಸದಿಂದ ಸಂಖ್ಯಾಪೂರಣವಾಗುತ್ತದೆಂದು ಪಠಿಸಬಾರದು. **'ಪರಾಗ್'** ಬಹಿಷ್ಪವಮಾನೇನ ಸ್ತುವನ್ತಿ - ಶ್ರುತಿಪಾಠ ಹೀಗಿಲ್ಲದಿದ್ದರೂ ಅಭಿಪ್ರಾಯ ಇದೇ ಆಗಿದೆ. ಹಾಗೆಯೇ **ಅಮುಕ್ಷೈವಾ .... ಸ್ತುವನ್ತಿ** ಇತ್ಯಾದಿ, **ಪರಾಚೀಭಿಃ .... ಸ್ತುವತೇ** ಇತ್ಯಾದಿಗಳನ್ನು ತಾಂ.ಮ.ಬ್ರಾ. ೬.೮ರಲ್ಲಿ ನೋಡಬಹುದು - ಪರಾಕ್ ಶಬ್ದದಿಂದ ಅಭ್ಯಾಸ ಮಾಡಬಾರದೆಂದಿರುವುದರಿಂದ **'ಋಗ್ಗಾ'** ಗಮವಿದೆ.

ಜೈ.ನ್ಯಾ.ವಿ.೧೦.೬.೧, ತೃಚೆಯಲ್ಲಿ ಒಂದು ಸಾಮವನ್ನು ಗಾನ ಮಾಡಬೇಕು ಎಂಬುದರ ವಿಚಾರ ಮಾಡುತ್ತಾ ಪವಮಾನಾಜ್ಯ ಪೃಷ್ಠಾದಿ ಸ್ತೋತ್ರಗಳಲ್ಲಿ ವಿಹಿತವಾದ ರಥನ್ತರ ಬೃಹತ್ ವೈರೂಪಾದಿ ಸಾಮಗಳ ಅಧ್ಯಯನಶೀಲರು ಒಂದೇ ಋಚೆಯಲ್ಲಿ ಅಧ್ಯಯನ ಮಾಡುತ್ತಿದ್ದಾರೆ. ಹೀಗಿರುವಾಗ ಸ್ತೋತ್ರ ಪ್ರಯೋಗ ಕಾಲದಲ್ಲಿಯೂ ಸಹ ಒಂದೇ ಋಚೆಯಲ್ಲಿ ಗಾನ ಮಾಡಬೇಕೆ ಅಥವಾ ತೃಚೆಯಲ್ಲಿ ಗಾನಮಾಡಬೇಕೆ? ಎಂಬುದು ಸಂಶಯ. ಆರ್ಷೇಯ ಬ್ರಾಹ್ಮಣ ೬.೧.೧ರಲ್ಲಿ ತಿಳಿಸಿರುವ ತತ್ವ ಹೀಗಿದೆ. ಸಾ.ಋ. ೨೩೩ರ ರಥನ್ತರ ಸಾಮ, ಅರಣ್ಯ ೭೬, ಸಾ.ಋ. ೨೩೪ರ ಬೃಹತ್‌ಸಾಮ, ಅರಣ್ಯ ೨೭, ಸಾ.ಋ.೨೭೮ರ **ಅಂಜೋ ವೈರೂಪಮ್, ಹ್ರಸ್ವಾ ವೈರೂಪಮ್, ಪಂಚನಿಧನ ವೈರೂಪಮ್, ಷಣ್ಣಿಧನ ವೈರೂಪಮ್, ಸಪ್ತನಿಧನ ವೈರೂಪಮ್, ಅಷ್ಟಾನಿಧನ ವೈರೂಪಮ್,**

**ದ್ವಾದಶನಿಧನ ವೈರೂಪಮ್ ಪುಷ್ಟಮ್ ವೈರೂಪಮ್** ಎಂಬ ಅರಣ್ಯ ೧.೮ ಎಂಟು ಸಾಮಗಳು, ಸಾ.ಋ.೬೮೦ರ **ರಥನ್ತರ** ಸಾಮ ರಹಸ್ಯ ೧, ಸಾ.ಋ. ೮೦೯ರ, **ಬೃಹತ್** ಸಾಮ ರಹಸ್ಯ ೫, ಸಾ.ಋ. ೮೬೨ರ **ಪಂಚನಿಧನಮ್ ವೈರೂಪಮ್**, ರಹಸ್ಯ ೭, ಈ ಹಿನ್ನೆಲೆಯಲ್ಲಿ ರಥನ್ತರವನ್ನು ಗಾನ ಮಾಡಬೇಕೆಂದು ವಿಧಿಸಿರುವಾಗ ಒಂದೇ ಋಕ್ಕಿನ ಮೇಲಿರುವ ಅರಣ್ಯಗಾನದಲ್ಲಿರುವ ರಥನ್ತರವನ್ನು ಗಾನ ಮಾಡಬೇಕೆ ಅಥವಾ ರಹಸ್ಯ ಗಾನದಲ್ಲಿರುವ ತೃಚೆಯ ರಥನ್ತರವನ್ನು ಗಾನಮಾಡಬೇಕೆ? ಹೀಗೆಯೇ ಬೃಹತ್, ವೈರೂಪಾದಿ ಅನ್ಯ ತೃಚೆಗಳ ಗಾನಗಳ ಬಗೆಯೂ ಎಂಬುದು ಸಂಶಯ. ಅಧ್ಯಯನದ ಅನುಷ್ಠಾನಕ್ಕಾಗಿ, ಅಧ್ಯಯನದಲ್ಲಿ ಒಂದು ಋಚೆಯ ಮೇಲಿನ ಸಾಮವನ್ನು ಗಾನಮಾಡುವಂತೆ ಗಾನಮಾಡ ಬಹುದೆಂಬುದು ಪೂರ್ವಪಕ್ಷ.

ಅಷ್ಟಾಕ್ಷರಗಳಿಂದ ಮೊದಲ ಋಚೆಯಿಂದಲೂ ದ್ವ್ಯಕ್ಷರದಿಂದ ಅನಂತರದವು ಗಳಿಂದಲೂ ಎಂಬುದಾಗಿದೆ - ಅಂದರೆ ಈ ಪಾಠವು ಆನುಪೂರ್ವಿ ಯಾಗಿಲ್ಲ. ತಾಂ.ಮ.ಬ್ರಾ. ೭.೭.೧-೩ರಲ್ಲಿ ಬೃಹದ್ರಥನ್ತರಗಳೆರಡರ ಸ್ತುತಿ ಪ್ರಕಾರವನ್ನು ತಿಳಿಸುತ್ತಿದೆ. ಪಶುಗಳನ್ನು ಪಡೆಯುವ ಸಿದ್ಧಿಗಾಗಿ ಬೃಹದ್ರಥನ್ತರಗಳೆರಡನ್ನೂ ಅನುಷ್ಠಾನ ಮಾಡಬೇಕು. ಅಭಿತ್ವಾ, ತ್ವಾಮದ್ಧಿ ಎಂಬೆರಡೂ ಋಚೆಗಳ ಮೊದಲ ಎಂಟಕ್ಷರಗಳಿಂದ ಪ್ರಸ್ತೋತೃ ಪ್ರಸ್ತಾವ

೨ ೦ ೦ ೦ ೧

ಭಾಗವನ್ನು ಗಾನ ಮಾಡಬೇಕು. ಅಂದರೆ **ಅಭಿತ್ವಾ ಶೂರನೋನುಮೋ ವಾ** ಎಂದು

೨೦ ೦ ೦ ೦ ೨

ರಥನ್ತರದಲ್ಲಿ **ಔಹೋ ಇತ್ವಾಮಿದ್ಧಿ ಹವಾಮಹಾ೨೩ ಏ** ॥ ಎಂದು ಬೃಹತ್‌ನಲ್ಲಿ ವಿಭಾಗ ಸಂಕೇತವಾದ ಎಂಟಕ್ಷರಗಳ ಪ್ರಸ್ತಾವ ಗಾನದಿಂದ ಪ್ರಸ್ತೋತೃ ಎಂಟು ಗೊರಸುಗಳುಳ್ಳ ಪಶುಗಳನ್ನು ಯಜಮಾನನಿಗೆ ದೊರಕಿಸಿಕೊಡುತ್ತಾನೆ.

ಮುಂದಿನ ಋಚೆಗಳ ಪ್ರಸ್ತಾವ ಭಾಗವನ್ನು ತಿಳಿಸುತ್ತಿದ್ದಾರೆ. **ಈಶಾನಮಸ್ಯ ಜಗತಃ, ನ ಜಾತೋ ನ ಜನಿಷ್ಯತೇ ಎಂಬೆರಡು ಋಚೆಗಳ ಈಶೋ ವಾ ನ ಜೋವೇತಿ** ಅಕ್ಷರಗಳಿಂದ ಪ್ರಸ್ತಾವ ಭಾಗವನ್ನು ಗಾನ ಮಾಡಿ ಬೃಹತಿಯ **ಓ ಹಾ ಈ ತು ವಾಳ ಮೇ ಔಹೋ ಇ ಮಹಾ೩ಏ** ಎಂಬ ಅಕ್ಷರಗಳಿಂದ ಹೇಳಿರುವ ಎಂಟಕ್ಷರಗಳನ್ನು ಸೇರಿಸಿ ಪ್ರಸ್ತಾವ ಭಾಗವನ್ನು ಗಾನಮಾಡುವ ಪ್ರಸ್ತೋತೃ ಯಜ್ಞಫಲಭೂತವಾದ ಪಶುಗಳಿಂದ ಯಜಮಾನನ್ನು ಪ್ರತಿಷ್ಠಿತನನ್ನಾಗಿ ಮಾಡುತ್ತಾನೆ.

ಈಗ ರಥನ್ತರದ ಪ್ರತಿಹಾರ ಭಾಗದ ನಿಯಮವನ್ನು ತಿಳಿಸುತ್ತಾರೆ. **ಆ ಈಶಾನಮಾ೨ಇ ಎಂದು ಮೊದಲದರ, ನ ಜಾತೋನಾ೨ಇ ಜಾಇ** ಎಂಬ ಮಧ್ಯದ **ಗವ್ಯನ್ನಸ್ಸಾ೨ಇಹಾಇ** ಎಂದು ಕಡೆಯದರ ಹೀಗೆ ರಥನ್ತರದ ಮೂರೂ ಋಚೆಗಳ ಪ್ರತಿಹಾರ ನಿಯಮದಂತೆ ಅದರದರ ಐದು ಅಕ್ಷರಗಳ ಪ್ರತಿಹಾರದ ಪಾಜ್ತವಾದ ಅವಯವಗತವಾದ ಐದು ಸಂಖ್ಯೆಯ ಯೋಗದಿಂದ ಪಙ್ಕ್ತಿಸಂಬಂಧವಾದ ಪಶುಗಳನ್ನು ಯಜಮಾನನು ಪಡೆಯುತ್ತಾನೆ. ಪಶುಗಳ, ರೋಮ ಚರ್ಮ ಮಾಂಸ ಅಸ್ಥಿ ಮಜ್ಜೆ ಎಂಬ ಪಶುಸಂಬಂಧಿ ಐದನ್ನು ಅಥವಾ ನಾಲ್ಕು ಪಾದಗಳ ಆತ್ಮ ಎಂದೂ ಆಗಬಹುದು ಅಥವಾ ಅಷ್ಟಾಕ್ಷರ ಗಳಿಂದಲೂ ಮೊದಲ ಋಚೆಯ ಅನಂತರದವುಗಳ ದ್ವ್ಯಕ್ಷರಗ ಳಿಂದಲೂ - ಎಂದು ಹೇಳಿದರೆ - ಈ ಪಾಠದ ಆನುಪೂರ್ವಿ, ತಾಂ.ಮ.ಬ್ರಾ ೭.೭.೧-೩ರಲ್ಲಿ ಹೀಗಿದೆ :

**ಪಶವೋ ವೈ ಬೃಹದ್ರಥನ್ತರೇ ಅಷ್ಟಾಕ್ಷರೇಣ ಪ್ರಥಮಾಯಾ ಋಚಃ ಪ್ರಸ್ತೌತ್ಯಷ್ಟಾಶಫಾಂಸ್ತತ್ಪಶೂನವರುನ್ಧೇ । ದ್ವ್ಯಕ್ಷರೇಣೋತ್ತರಯೋಃ ತೃಚೋಃ ಪ್ರಸ್ತೌತಿ ದ್ವಿಪಾದ್ಯ ಯಜಮಾನೋ ಯಜಮಾನಮೇವ ಯಜ್ಞೇ ಪಶುಷು ಪ್ರತಿಷ್ಠಾಪಯತಿ । ಪಂಚಾಕ್ಷರೇಣ ರಥನ್ತರಸ್ಯ ಪ್ರತಿಹರತಿ ಪಾಙ್ಕ್ತಾಂಸ್ತತ್ಪಶೂನವರುನ್ಧೇ ॥** ಮೂರು ಋಚೆಗಳಲ್ಲಿ ಪ್ರಸ್ತೋತೃವೆಂಬ ಋತ್ವಿಜನು ಗಾನಮಾಡಬೇಕಾದ ಭಾಗವನ್ನು ನಿರೂಪಿಸಲಾಗುತ್ತದೆ. ಇದು ತೃಚೆಯ ಚಿಹ್ನೆಯಾಗಿದೆ. **ಋಕ್ ಸಾಮಾವೇವ** ಮಿಥುನೀ ಸಮ್ಭವಾವ ಇತ್ಯಾದಿಗಳಲ್ಲಿ ಋಕ್ ದೇವತಾ ಸಾಮವೇದ ದೇವತಾ ಸಂವಾದ ರೂಪವಾದ ಅರ್ಥವಾದದಲ್ಲಿ. ಸಾಮ ದೇವತೆಯ ಒಂದು ಋಚೆ ಋಗ್ವೇದದ ಎರಡು ಋಚೆಗಳನ್ನು ತಳ್ಳಿಹಾಕಿ ಮೂರು ಋಚೆಗಳ ನ್ನಂಗೀಕರಿಸುವುದು ಮತ್ತೊಂದು ಚಿಹ್ನೆಯಾಗಿದೆ. ಈ ಎರಡೂ ಚಿಹ್ನೆಗಳಿಗಿಂತ ಬೇರೆಯಾದ ತೃಚೆಯಿಂದ ಒಂದು ಸಾಮವನ್ನು ಗಾನ ಮಾಡಲಾಗುತ್ತದೆ ಎಂಬ ವಚನದಿಂದ ತೃಚೆಯಲ್ಲೇ ಗಾನಮಾಡಬೇಕು

ಜೈ.ನ್ಯಾ.ವಿ.೧೦.೬.೨ರಲ್ಲಿ ಸಮಸ್ತವನ್ನು ನೋಡುವ ಎಂಬರ್ಥದಲ್ಲಿ ಸ್ವರ್ದೃಕ್ ಶಬ್ದ ಮೀಲನಾವಧಿಯನ್ನು ವಿವರಿಸುತ್ತಿದ್ದಾರೆ. ರಥನ್ತರ ಸಾಮದ ಯೋನಿ ಋಕ್ಕಿನಲ್ಲಿ **ಅಭಿತ್ವಾ ಶೂರನೋನುಮೋಽದುಗ್ಧಾ ಇವ ಧೇನವಃ । ಈಶಾನಮಸ್ಯ ಜಗತಃ ಸ್ವರ್ದೃಶಮೀಶಾನಮಿನ್ದ್ರ ತಸ್ಥುಷಃ ॥** ಎಂಬ ೨೩೩-೬೮೦ರ ಮೇಲಿನ ಅರ.೭೬ನೆಯ ಸಾಮಗಾನವು ಒಂದು ಋಕ್ಕಿನ ರಥನ್ತರವಾಗಿದ್ದು, ರಹಸ್ಯ ಪ್ರಥಮ ಸಾಮವಾದ ರಥನ್ತರ ತೃಚೆಯ ಮೂಲವಾಗಿದ್ದು ತೃಚ ರಥನ್ತರವೆಂದು ಪ್ರತಿಪಾದಿಸಲ್ಪಡುತ್ತಿದೆ - ಇಲ್ಲಿರುವ **ಈಶಾನಮಸ್ಯ ಜಗತಃ ಸ್ವರ್ದೃಶಮ್** ಭಾಗವನ್ನು ಉದ್ಗಾತೃ ಋತ್ವಿಜನು ತೃಚ ರಥನ್ತರದಲ್ಲಿ - **ಪ್ರಸ್ತೂಯಮಾನೇ ಸಮ್ಮೀಲಯೇತ್**

**ಸ್ವರ್ದೃಶಂ ಪ್ರತಿ ವೀಕ್ಷೇತ** - ಎಂದು ಗಾನ ಮಾಡಬೇಕೆಂದು ತಾಂ.ಮ.ಬ್ರಾ.೭.೭ರಲ್ಲಿನ ಅಸ್ಯಾ ಏವ ಶ್ರುತೇಃ ಸಮ್ಮೀಲಯೇದಿತ್ಯನ್ತ ಎಂಬುದನ್ನು ಜೈ.ನ್ಯಾ.ವಿ.೯.೨.೧೫ನ್ನು ಉದ್ಧರಿಸಿ ಹಿಂದೆಯೇ ವಿವರಿಸಿದೆ.

ಈ ಪ್ರಕರಣದಲ್ಲಿ ಸಂಶಯ ಹೀಗಿದೆ. **ಸ್ವರ್ದೃಕ್** ಶಬ್ದದ ಉಚ್ಚಾರಣೆ ಮತ್ತು ವೀಕ್ಷಣೆಗಳಲ್ಲಿ ಅಂಗಾಂಗೀ ಭಾವವನ್ನು ವಿಧಿಸಿದೆಯೇ? ಅಥವಾ ವಿಧಿಸಲಾಗುವ ಸಮ್ಮೀಲ ನಾವಧಿಯ ಭಾವದಿಂದ ಸ್ವರ್ದೃಕ್ ಶಬ್ದೋಚ್ಚಾರಣೆಯನ್ನು ನಿರ್ದೇಶಿಸಿದ್ದಾ ರೆಯೇ? ಅಲ್ಲಿ ಸಮ್ಮೀಲನ ಪುಷ್ಪದಂತೆ ಮುಚ್ಚಿಕೊಳ್ಳುವ ವಾಕ್ಯದಿಂದ ವೀಕ್ಷಣ ವಾಕ್ಯವು ಭಿನ್ನವಾಗಿದೆ. ಆದುದರಿಂದ ಸಮ್ಮೀಲನಾವಧಿತ್ವದಿಂದ ಅನ್ವಯವು ಸಾಧ್ಯವಿಲ್ಲ. ಆದರೆ ವೀಕ್ಷೇತೇತಿ ಚಿಹ್ನೆಯ ಪ್ರತ್ಯಯ ವಿಧಿಸಿರುವುದು, ತಿಳಿಯುತ್ತಿದೆಯಾಗಿ ಸ್ವರ್ದೃಕ್ ಶಬ್ದೋಚ್ಚಾರಣೆಯು ವೀಕ್ಷಣಾಂಗ ವಾಗಿದೆ, ವೀಕ್ಷಣೆ ಅಥವಾ ಅದರಂಗ ಹೀಗೆ ಅಂಗಾಂಗೀಭವವು ಸಿದ್ಧವಾಗಿದೆ. ಇದನ್ನೇ **ಅಂಗಾಂಗೀ ಭಾವ, ಶೇಷಶೇಷೀ ಭಾವ, ಗುಣ ಗುಣೀ ಭಾವ** ಎಂಬುದಾಗಿ ಹೇಳಲ್ಪಟ್ಟಿದೆ. ಜೈ.ನ್ಯಾ.ಮಾ. ೩.೧.೨, **ಶೇಷಃ ಪರಾರ್ಥತ್ವಾತ್** । ಎಂದಿರುವುದೂ ಇದೇ ಆಗಿದೆ.

ಹೀಗಿರುವಾಗ ಸ್ವರ್ದೃಕ್ ಶಬ್ದರಹಿತವಾಗಿ ಋಚೆಯಗಾನ ಮಾಡುವುದು ರಥನ್ತರ ದಲ್ಲೂ ವಿಹಿತವಾದ **ಸಮ್ಮೀಲನಾವೃತ್ತಿಃ** ಎಂದೇ ಸಿದ್ಧವಾಗುತ್ತದೆಂಬುದು ಪೂರ್ವಪಕ್ಷ - ಪಾಣಿನೀಸೂತ್ರ.೧.೪.೬೦. **ಲಕ್ಷಣೇತ್ಥಂ ಭೂತಾಖ್ಯಾನ ಭಾಗ ವಿಪ್ಸಾಸು ಪ್ರತಿಪರ್ಯನವಃ** । ತಿಳಿಸುವಂತೆ ಲಕ್ಷಣಾರ್ಥದಲ್ಲಿ ಕರ್ಮಪ್ರವಚನೀಯ ಸಂಜ್ಞೆಯೂಗಿದ್ದರೂ ಸ್ವರ್ದೃಶ ಶಬ್ದವನ್ನು ಲಕ್ಷ್ಯವಾಗಿಟ್ಟುಕೊಂಡು ಸ್ವರ್ದೃಶಮಿತಿ ಎಂದು ಗಾನವನ್ನು ಮಾಡದಿರುವ ಕಾಲವು ಸಮ್ಮೀಲನದಿಂದುಂಟಾಗಿದೆ ಎಂದು ಭಾವಿಸಬೇಕೆಂಬುದು ಶ್ರುತಿಯ ಅರ್ಥ. ಈ ಸ್ವರ್ದೃಶಂ ಪ್ರತೀತ್ಯ ಕರ್ಮ ಪ್ರವಚನದಿಂದ ಸ್ವರ್ದೃಕ್ ಶಬ್ದೋಚ್ಚಾರಣೆಯ ಮೀಲನ ಕಾಲಾವಧಿಯು ಏಕವಾಕ್ಯತ್ವವಾಗಿರುವುದರಿಂದ ಸಾಧ್ಯವಾಗುತ್ತದೆಯೇ ಹೊರತು ಇಲ್ಲಿ ಭಿನ್ನವಾಕ್ಯತ್ವವು ಪ್ರಕೃತವಾಗಿಲ್ಲ. ಹೀಗಾಗಿ ವಿರೋಧ ಪರಿಹಾರವು ಸ್ವಾಭಾವಿಕವಾಗಿಯೇ ಬಂದೊದಗಿರು ವುದರಿಂದ ವೀಕ್ಷಣವನ್ನು ವಿಧಿಸಿಲ್ಲ. ಆದುದರಿಂದ ಸ್ವರ್ದೃಶ್ ಶಬ್ದೋಚ್ಚಾರಣೆಯಿಂದ ಸಮ್ಮೀಲಯೇತ್ ಎಂಬ ಒಂದೇ ವಾಕ್ಯ ಸಂಪನ್ನವಾಗುತ್ತದೆ. ಹೀಗಾಗಿ ಉತ್ತರ ಋಚೆಗಳ ಸಮ್ಮಿಲನವಾಗಿರುವ ಸಂಕೋಚಗೊಂಡಿರುವ ಭಾವವೇ ಫಲಿತವಾಗುತ್ತದೆಂಬುದೇ ಸಿದ್ಧಾಂತ. ಈ ಅರ್ಥದಲ್ಲಿ ತಾಂ.ಮ.ಬ್ರಾ. ಭಾಷ್ಯದ ವಿರೋಧಕ್ಕೆ ಅಂಕುಶವನ್ನಿಟ್ಟಂತಾಗು

ತ್ತದೆ - **ತಸ್ಮಿನ್ ಪ್ರಸ್ತೂಯಮಾನೇ ಚಕ್ಷುಃ ಸಮ್ಮೀಲೇತ್, ಮುಕುಲಿತಂ ಕುರ್ಯಾತ್, ಪುನಃ ಸ್ವರ್ದೃಶ ಸ್ವರ್ದೃಶಮಿತಿ ಪದಂ ಗೀಯಮಾನಂ, ಪತಿವೀಕ್ಷೇತ, ಅವಲೋಕಯೇತ್ ।** ತಾಂ.ಮ.ಬ್ರಾ. ೭.೭.೧೫.

ಜೈ.ನ್ಯಾ.ವಿ.೧೦.೬.೩, ಬೃಹದ್ರಥನ್ತರಗಳ ದಿನಭೇದಿಂದುಂಟಾಗುವ ಪ್ರಯೋಗ ವನ್ನು ತಿಳಿಸುತ್ತಿದ್ದಾರೆ. ದ್ವಾದಶಾಹವು ಸತ್ರಾತ್ಮಕ ಅಹೀನಾತ್ಮಕ ಎಂದು ಎರಡು ಬಗೆ ಯಾಗಿದೆ. ಪುನಃ ಕಾಮವ್ಯೂಹನಾಭಾವವಾದ ಸಮೂಢ ಮತ್ತು ಅವ್ಯೂಢವೆಂದೂ ಎರಡು ವಿಧವಾಗಿರುತ್ತದೆ. ಇಲ್ಲಿ ತಾಂ.ಮ.ಬ್ರಾ. ೧೦.೩ ಆದಿಖಂಡಗಳಲ್ಲಿ ವಿಹಿತ ವಾಗಿರುವ ಸತ್ರಾತ್ಮಕವಾದ ಸಂವತ್ಸರ ಸಾಧ್ಯವಾದದ್ದೇ.ಗ್ರಾಹ್ಯವಾದದ್ದು. ಅಲ್ಲಿಯೂ ಅಹಃ ಶಬ್ದದಿಂದ ಸವನತ್ರಯಾತ್ಮಕವಾದ ಸೋಮಯಾಗಕ್ಕೆ ದ್ವಾದಶಾಹ ಎಂದು ಸಂಜ್ಞೆ ಯಾಗಿದೆ. ಸೋಮ ಯಾಗ ಕಾಮ ಸಮೃದ್ಧಿಯಲ್ಲಿ ಪರ್ಯವಸಾನವಾಗುವುದೆಂಬುದು ಸ್ಪಷ್ಟವಾಗಿದೆ. ದ್ವಾದಶಾ ಹದಿಂದ ಪೃಷ್ಠಾಃ ಷಡಹಗಳು ಉತ್ಪನ್ನವಾಗಿವೆ.

ಸಂವತ್ಸರ ಸಾಧ್ಯ, ಯಾಗದಲ್ಲಿ ಮಾತ್ರ **ಅಭಿಪ್ಲವಃ ಪೃಷ್ಠ** ಎಂಬ ಎರಡು ಷಡಹಗಳಿರುತ್ತವೆ. ಅಲ್ಲಿ ಒಂದಾನೊಂದು ಮಾಸದಲ್ಲಿ ನಾಲ್ಕು, ಅಭಿಪ್ಲವಿವ ಷಡಹಗಳು, ಒಂದು ಪೃಷ್ಠಃ ಷಡಹಃ ಹೀಗೆ, ಐದು ಮೂವತ್ತು ದಿನಗಳಲ್ಲಿ ಸಂಭವಿಸುತ್ತವೆ. ತಾಂ.ಮ.ಬ್ರಾ. ೪.೧ರಲ್ಲಿ ಈ ಆರು ಅಹ್ನಗಳಲ್ಲಿ ಕ್ರಮವಾಗಿ **ರಥನ್ತರ, ಬೃಹದ್, ವೈರೂಪ, ವೈರಾಜ, ಶಕ್ವರ, ರೈವತ** ಎಂಬ ಆರು ಸಾಮಗಳು ವಿಹಿತವಾಗಿವೆ. **ಪೃಷ್ಠ್ಯಡಹೇ ಯಾಃ ಸ್ತೋತ್ರೀಯಾಃ ಸಾಮಾನಿ ಚ ತೇಷಾಮ ಸಾಂಕರ್ಯಾಯ ಪ್ರತ್ಯಹಂ ಏಭಿನ್ನಾನಿ ರೂಪಾಣಿ** - ತಾಂ.ಮ.ಬ್ರಾ.೧೦.೬ ಖಣ್ಡಾನಂತರಂ ಪಡ್‌ಭಿಃ ಖಣ್ಡೈಃ ಪ್ರದರ್ಶಿತಾನಿ ತತ್ರಾದಿತಸ್ತ್ರಿಭಿಃ **ಸ್ತೋತ್ರೀಯಾಣಾಂ ರೂಪಾಣಿ ತತಸ್ತ್ರಿಭಿಃ ಸಾಮ್ನಾಂ ರೂಪಾಣೀತಿ ವಿವೇಕಃ ।** ಇದರ ಆಕಾರವು ಊಹಗಾನದ ಪ್ರಥಮ, ಪಂಚಮ, ಸಪ್ತಮ, ದಶಮ, ಪಂಚಾದಶ, ಅಷ್ಟಾದಶ ಸಂಖ್ಯೆಯ ಗಾನಗಳಿಂದ ತಿಳಿದುಬರುತ್ತದೆ. ಗವಾಮಯನದಲ್ಲಾದರೆ ಇವು ವಿಕೃತಿ ರೂಪಗಳಲ್ಲಿರುತ್ತವೆ.

ಶ್ರುತಿ ಹೇಳುವ ಪೃಷ್ಠ್ಯಾಂ ಷಡಹೋ ಬೃಹದ್ರಥನ್ತರ ಸಾಮ ಇತಿ ಚೋದಕ/ ಪ್ರೇರಣೆಯ ಕಾರಣ ಬೃಹದ್ರಥನ್ತರಗಳ ಪುನರ್ವಿಧಾನದಿಂದ ವೈರೂಪಾದಿಗಳ ನಿವೃತ್ತಿ ಯಾಗುತ್ತವೆ. ನಂತರ ಉಳಿದ ಬೃಹದ್ರಥನ್ತರ ಸಾಮದ್ವಯಗಳಿಂದ ಪ್ರತಿ ದಿನವೂ ಕರ್ತವ್ಯವೇ ಅಥವಾ ಕೆಲವೊಂದು ಅಹಸ್ಸುಗಳಲ್ಲಿ ಅಂದರೆ ಕೆಲವುಗಳಲ್ಲಿ ಬೃಹತ್ ಕೆಲವು ಗಳಲ್ಲಿ ರಥನ್ತರವೆಂದೇನು? ಎಂಬುದು ಸಂಶಯ.

ಬೃಹದ್ರಥನ್ತರ ಎಂಬುದು ದ್ವಂದ್ವದಲ್ಲಿರುವ ಬಹುವ್ರೀಹಿಯಾಗಿದ್ದು, ಇತರೇತರ ಯೋಗ ದ್ವಂದ್ವವಾಗಿ ಸಾಹಿತ್ಯ ಕ್ಷೇತ್ರದಲ್ಲಿ ಪ್ರಚಲಿತವಾಗಿದೆ. ಆದುದರಿಂದ ಪ್ರತಿ ಅಹಸ್ಸಿನಲ್ಲಿ ಈ ಸಾಮದ್ವಯವನ್ನು ಗಾನಮಾಡಬೇಕೆಂಬುದು ಪೂರ್ವಪಕ್ಷ. ಇವು ಸಾಮದಲ್ಲಿ 'ಯಸ್ಯಾಹ್ನಿಃ' ಎಂಬ ಅಹ್ನೀಯ ಪದಾರ್ಥಕ್ಕಿಂತ ಅನ್ಯವಾಗಿ ಎಂದಾಗ ಇಲ್ಲಿ ಷಡಹೋ ಅನ್ಯಪದಾರ್ಥವಾಗಿರುವಾಗ ಷಡಹಗಳಲ್ಲಿ ಎರಡೂ ಸಾಮಗಳು ಸೇರಿರಬೇಕೆಂಬುದು ಸಿದ್ಧಾನ್ತ ರೂಪದಲ್ಲಿ ಸಮವೇ ಆಗಿರುತ್ತವೆ. ಪ್ರಕೃತವಾದ ಈ ಎರಡೂ ಸಾಮಗಳಲ್ಲಿ ಅನ್ಯೋನ್ಯ ನಿರಪೇಕ್ಷತ್ವವಿದ್ದರೂಸಹ ಇಲ್ಲೂ ನಿರಪೇಕ್ಷತ್ವವೇ ಸಾಮದ ವಿಧಿಯಾಗಿದ್ದು, ಒಂದರ ಧರ್ಮವನ್ನು ಇನ್ನೊಂದರಲ್ಲಿ ಹೇಳುವ ಅತಿದೇಶವಾಗಿದೆ. ಆದುದರಿಂದ ಯಾವುದೇ ಅಹಸ್ಸಿನಲ್ಲಿ ಸ್ವಲ್ಪ ಸಾಮ ಎಂಬುದು ಸಿದ್ಧಾಂತವಾಗಿದೆ. ಜೈ.ನ್ಯಾ.ಮಾ.೧೦.೬.೫ರಲ್ಲಿ ಸರ್ವಪೃಷ್ಠದ ಉಕ್ತದೇಶದಲ್ಲಿ ಪರಸ್ಪರ ಸೇರಿಕೊಂಡಿರುವ ಸಂಬಂಧವಿರುವ ವಿಚಾರವನ್ನು ತಿಳಿಸುತ್ತಿದ್ದಾರೆ.

ವಿಶ್ವಜಿತ್ ಸರ್ವಪೃಷ್ಠವೇ ಆಗಿದೆ. ಷಡಹದಲ್ಲಿ ಆರೂ ಅಹಸ್ಸುಗಳಲ್ಲಿ ಕ್ರಮವಾಗಿ ರಥನ್ತರ ಬೃಹತ್ ವೈರೂಪಾದಿ ಸಾಮಗಳಿಂದ ಪೃಷ್ಠ ಸ್ತೋತ್ರವುಂಟಾಗುತ್ತದೆ. ಈ ಎಲ್ಲಾ ಪೃಷ್ಠಸಾಮಗಳೂ ವಿನಿಯೋಗವಾಗುವ ವಿಶ್ವಜಿತ್ ಯಾಗವೇ ಸರ್ವಪೃಷ್ಠವೆನಿಸಿಕೊಳ್ಳುತ್ತದೆ. ಅಲ್ಲಿ ಮಾಧ್ಯಂದಿನ ಪವಮಾನ ಮೈತ್ರಾವರುಣ ಸಾಮಗಳು ಅನ್ತಸ್ಥವಾಗಿರುವ ಪೃಷ್ಠಸ್ತೋತ್ರ ದೇಶದಲ್ಲಿ ಎಲ್ಲಾ ಪೃಷ್ಠ ಸಾಮಗಳಿಂದಲೂ ಕಾರ್ಯ ನಿರ್ವಹಿಸಬೇಕೇ? ಅಥವಾ ಯಥಾ ವಚನದಂತೆ ದೇಶವ್ಯವಸ್ಥೆಯೇ ಎಂಬುದು ಸಂಶಯ.

ಪೃಷ್ಠ ಕಾರ್ಯವು ಗಮಕದ ಪೃಷ್ಠ ಶಬ್ದದಿಂದಲೂ ಪೃಷ್ಠದೇಶ ಪ್ರಾಪ್ತ ವಚನದಿಂದಲೂ ದೇಶ ವಿಶೇಷವು ವ್ಯವಸ್ಥೆಗೊಳ್ಳುತ್ತದೆ. ಶ್ರುತಿ ವಚನವೂ ಹೀಗೆಯೇ ಇದೆ. ಪವಮಾನದಲ್ಲಿ ರಥನ್ತರವನ್ನೂ ಆರ್ಭವದಲ್ಲಿ ಬೃಹನ್ಮಧ್ಯವನ್ನೂ ಬೇರೆಯವುಗಳಲ್ಲಿ ವೈರೂಪವನ್ನೂ ಹೋತೃವು ಪೃಷ್ಠವೈರಾಜವನ್ನೂ ಮೈತ್ರಾವರುಣನು ರೈವತವನ್ನೂ ಆಚ್ಛಾವಕನು ಬ್ರಹ್ಮವನ್ನೂ ಎಂಬ ವಚನವೇ ನ್ಯಾಯವೇ ಬಲಿಷ್ಠವಾಗಿರುವುದರಿಂದ ದೇಶವಿಶೇಷವು ವ್ಯವಸ್ಥಿತವಾಗಿದೆ. ಉಕ್ಥವೈರೂಪಸಾಮ ಏಕವಿಂಶ, ವೈರಾಜ ಸಾಮ ಷೋಡಶೀ ಎಂದು ಶ್ರುತಿ ತಿಳಿಸುತ್ತಿದೆ. **ಕೃತ್ಸ್ನೇ ಉಕ್ಥೇ ವೈರೂಪಂ ಸಾಮ, ಕೃತ್ಸ್ನೇ ಷೋಡಶನಿ ವೈರಾಜಂ ಸಾಮ, ವೈರೂಪಂ ಸಾಮ ಯಸ್ಮಿನ್ನುಕ್ಥೇ ಕ್ರತೌ, ವೈರಾಜಂ ಸಾಮ ಯಸ್ಮಿನ್ ಷೋಡಶಿನಿಕ್ರತೌ** - ಹೀಗೆ ಕ್ರತು ಸಂಬಂಧ ಪ್ರಸಿದ್ಧವಾಗಿದೆಯಲ್ಲ ಅಂದರೆ - ಅದು ಹಾಗಲ್ಲ. ಪ್ರಕೃತ ರಥನ್ತರ ಸಾಮ ಬೃಹತ್ ಸಾಮ ಎಂದು ನಿರ್ದೇಶಿಸಿರುವ ಪೃಷ್ಠಸ್ತೋತ್ರ ವಿಷಯ ದರ್ಶನದಿಂದ

ಇಲ್ಲೂ ಸಹ ಆ ನಿರ್ದೇಶನದ ಪೃಷ್ಠ ಚಿಹ್ನೆಯಿಂದ ಪೃಷ್ಠಕಾರ್ಯದಲ್ಲಿ ವೈರೂಪ ವೈರಾಜಗಳೂ ಇರಬೇಕಾದುದು ಯೋಗ್ಯ. ಪೃಷ್ಠದ ಮೂಲಕ ಈ ಎರಡಕ್ಕೂ ಪರಸ್ಪರ ಸಂಬಂಧ ಉಂಟಾಗುತ್ತದೆ - ಜೈ.ನ್ಯಾ.ವಿ. ೧೦.೬.೭

ತಾಂ.ಮ.ಬ್ರಾ. ೧೧-೧೫, **ತ್ರಿವೃದಗ್ನಿಷ್ಟುದಗ್ನಿಷ್ಟೋಮಃ** ಎಂಬಲ್ಲಿ **ತ್ರಿವೃತ್ವಮಗ್ನಿಷ್ಟುತಿ** ಎಂಬುದು ಕ್ರತುವಿನ ಸಮಸ್ತ ಸಾಧನಗಳೊಂದಿಗೆ ಸಂಬಂಧವಿರುತ್ತದೆಯೇ? ಅಥವಾ ಸ್ತೋಮ ಮಾತ್ರದೊಂದಿಗೆ ಸಂಬಂಧವಿರುತ್ತದೆಯೇ? **ತ್ರಿವೃತ್ ರಜ್ಜುಃ** ಇತ್ಯಾದಿಗಳಲ್ಲಿ ತ್ರಿವೃತ್ ಶಬ್ದದ ತ್ರೈಗುಣ್ಯ ವಾಚಕದ ದರ್ಶನದಿಂದ ಇಲ್ಲೂ ಸಹ ಕ್ರತು ಸಾಧನಗಳಲ್ಲಿ ತಿಳಿಸುವ ಸಂಖ್ಯೆಯು ಸಮಸ್ತ ತ್ರಿವೃತ್ವಗಳಿಂದಲೂ ವ್ಯಾಪ್ತವಾಗಿದೆ ಎಂದಾದರೆ ಗಮನಿಸ ಬೇಕಾದುದು ಹೀಗಿದೆ - **ತ್ರಿವೃತ್** ಶಬ್ದದ ಅಂಶವಾದ ತ್ರೈಗುಣ್ಯವು ಲೋಕ ಪ್ರಸಿದ್ಧ ವಾಗಿದ್ದರೂ ವೇದದಲ್ಲಿ, ರೂಢಿಯಿಂದ ಸ್ತೋಮ ವಾಚಕವಾಗಿದೆ. ತ್ರಿಬೃಹತ್ ಬಹಿಷ್ಪವ ಮಾನಃ ಎಂದರೆ ಸ್ತೋತ್ರೀಯಗಳ ಒಂಬತ್ತು ಋಚೆಗಳ ಅನುಕ್ರಮವಾದ ಸ್ತೋಮ ವಿಷಯವೇ ತ್ರಿವೃತ್ವಮ್ ಎನಿಸುತ್ತದೆ. ತ್ರಿವೃತ್ವವು ವಿಷಮವಾದದ್ದೇ ಆಗಿರುತ್ತದೆ. ಜೈ.ನ್ಯಾ.ವಿ. ೧೦.೬.೮.

ಸಂಸವಾದೌ ಪೃಷ್ಠತ್ವಮ್ ವಿಚಾರ ಮಾಡುತ್ತಾ **'ಸಂಸವಉಭೇ'** ಕುರ್ಯಾತ್, **'ಗೋಸವಉಭೇ'** ಕುರ್ಯಾತ್, **'ಅಭಿಜಿತ್ಯೇಕಾಹಃ ಉಭೇ' ಬೃಹದ್ರಥನ್ತರೇ** ಕುರ್ಯಾತ್, ಈ ಪಠ್ಯಗಳಂತೆ ಬೃಹದ್ರಥನ್ತರಗಳ ಒಂದೇ ಪೃಷ್ಠಸ್ತೋತ್ರವನ್ನು ಅನ್ಯ ಪೃಷ್ಠಸ್ತೋತ್ರ ಗಳೊಂದಿಗೆ ಪಠಿಸಬೇಕೆ ಅಥವಾ ಪೃಷ್ಠಸ್ತುತಿಗಳೆರಡನ್ನೂ ಸಮುಚ್ಚಯವಾಗಿ ಪಠಿಸಬೇಕೆ? ಎಂಬುದು ಸಂಶಯ. ಪ್ರಕೃತಯಾಗದಲ್ಲಿ ಎರಡಕ್ಕೂ ವಿಕಲ್ಪವಿರುವುದ ರಿಂದಲೂ, ಒಂದು ಪ್ರಯೋಗದಲ್ಲಿ ಒಂದೇ ಪೃಷ್ಠತ್ವವಿರುವುದರಿಂದಲೂ ಅನ್ಯ ಸಂದರ್ಭದಲ್ಲೂ ಹೀಗೆಯೇ ಇರುವುದರಿಂದಲೂ ಅವಶಿಷ್ಠವಾದ ಸಾಮವು ವಿಶ್ವಜಿನ್ಯಾಯದಿಂದ ಸರ್ವಪೃಷ್ಠಸ್ತೋತ್ರಾ ನ್ತರದಲ್ಲಿ ಪ್ರಯೋಗವಾಗತಕ್ಕದ್ದು - ಎಂಬುದು ಪೂರ್ವಪಕ್ಷವಾಗಿದೆ. ತಾದೃಗ್ವಚನಾಭಾವ ದಿಂದಲೂ ಇಲ್ಲಿ ವಿಶ್ವಜಿತ್ ವೈಷಮ್ಯವಿರುವುದ ರಿಂದಲೂ ಪ್ರಕೃತಿಯಾಗದಂತೆ ವಿಕಲ್ಪವಿರು ವುದರಿಂದಲೂ ಪುನಃ ಮತ್ತೊಂದು ವಿಧಾನ ಮಾಡುವುದು ವ್ಯರ್ಥವಾಗುವುದರಿಂದಲೂ ಸಮುಚ್ಚಯವೇ ಸಿದ್ಧಾನ್ತವಾಗಿದೆ.

ಜೈ.ನ್ಯಾ.ವಿ.೧೦.೭.೧೬, ರಲ್ಲಿ ಬೃಹದ್ ಯವ ಖಾದಿರ ವಿಚಾರಗಳನ್ನು ನಿರ್ಧರಿಸ ಲಾಗಿದೆ. ಕೆಲವು ವಿಕೃತಿಗಳೂ ತಿಳಿಸಲ್ಪಟ್ಟಿವೆ - **'ಬೃಹತ್ ಪೃಷ್ಠಂ ಭವತಿ'** ಎಂಬಲ್ಲಿ

ತ್ರೈಧಾತುವೀಯದ '**ಯವಮಯೋ ಮಧ್ಯಮಃ**' ಎಂಬಲ್ಲಿ ವಾಜಪೇಯದ '**ಖಾದಿರೋ ಯೂಪೋ ಭವತಿ**' ಎಂಬಲ್ಲಿ ಬೃಹದ್ರಥನ್ತರಗಳನಡುವೆ, ವ್ರೀಹಿ ಯವಗಳ ನಡುವೆ, ಖಾದಿರ ಬೈಲ್ವಾದಿಗಳ ನಡುವೆ ಪ್ರಕೃತಿಯಾಗದಲ್ಲಿ ವಿಕಲ್ಪವಿದೆ. ಇಲ್ಲಿ ಚೋದಕದಿಂದ ವಿಕಲ್ಪಿತವೆಂದರೆ ಪುನರ್ವಿಧಾನವು ವ್ಯರ್ಥವಾಗುವುದರಿಂದ ಅದು ಸರಿಯಲ್ಲ. ಪರಿಸಂಖ್ಯಾ ದೋಷ ಬರುತ್ತದೆಂದು ಸಂದೇಹ ಪಡಬೇಕಿಲ್ಲವೆಂಬುದಕ್ಕೆ ಕಾರಣ ಹೀಗಿದೆ.

**ಶ್ರುತಾರ್ಥಸ್ಯ ಪರಿತ್ಯಾಗಾದಶ್ರುತಾರ್ಥಸ್ಯ ಕಲ್ಪನಾತ್ ।**
**ಪ್ರಾಪ್ತಸ್ಯ ಬಾಧ ಇತ್ಯೇವಂ ಪರಿಸಂಖ್ಯಾ ತ್ರಿದೂಷಣಾ ॥ ಇತಿ ॥**

ಹೀಗೆ ಪರಿಸಂಖ್ಯಾ ಲಕ್ಷಣ ಸ್ಫುಟವಾಗಿ ಹೇಳಲ್ಪಟ್ಟಿದ್ದರೂ ಸಹ

**ವಿಧಿರತ್ಯನ್ತಮಪ್ರಾಪ್ತೌ ನಿಯಮಃ ಪಾಕ್ಷಿಕೇ ಸತಿ ।**
**ತತ್ರ ಚಾನ್ಯತ್ರ ಚ ಪ್ರಾಪ್ತೌ ಪರಿಸಂಖ್ಯೇತಿ ಗೀಯತೇ ॥ ಇತಿ ॥**

ಅರ್ಥ ನಿವರ್ತನೆಗೆ ಕಾರಣ ಹೀಗಿದೆ. ರಥನ್ತರಸ್ಯ ಪೃಷ್ಠತ್ವೇನ ಅತ್ರ ಗ್ರಾಹ್ಯತ್ವಂ ಬೈಲ್ವಾದೀನಾಂ ಯೂಪತ್ವೇನ ಚ ತಥಾತ್ರಮಿತಿ ಯಾವತ್ । ವಿಪ್ರಗಾನವು ವಿಕಲ್ಪಿತವಾಗಿರುವುದನ್ನು ತಿಳಿಸುತ್ತಿದ್ದಾರೆ. ವಿಪ್ರ **ಉದ್ಗಾತಾ ತತ್ ಕರ್ತೃಕಂ ವಾಮದೇವ್ಯಾದಿ ಸಾಮ್ನಾಂ ಗಾನಮ್ ॥** ಆಧಾನದಲ್ಲಿ ವಾಮದೇವ್ಯಾದಿ ಗಾನಗಳು ವಿಹಿತವಾಗಿವೆ. ಆಧಾನವೇ ಪರಮ ಶ್ರೇಷ್ಠವಾದುದು. ಉಪವೀತ ಧರಿಸಿರುವ ತ್ರೈವರ್ಣಿಕರಿಂದ ಸಾಧ್ಯವಾಗುವ ಈ ಅಗ್ನ್ಯಾಧಾನದಲ್ಲಿ ಬ್ರಹ್ಮಸಾಮಗಳನ್ನು ಗಾನಮಾಡಲಾಗುತ್ತದೆ. ಉಪ ಶಬ್ದವು ಸಾಮೀಪ್ಯ ವನ್ನು ತಿಳಿಸುತ್ತದೆ. ಕಳೆದುಹೋದ ಕಾಲವಿಳಂಬದ ಅಂತರದಲ್ಲಿ ಬಿಟ್ಟು ಹೋದ ಎಂಬರ್ಥದ ನಿನ್ದನೆಯಿಂದ - ಯಜ್ಞೀಯ ಋತ್ವಿಜರಾದ ಬ್ರಹ್ಮ, ಸಮಸ್ತ ಉದ್ಗಾತೃ ಆದಿ ಋತ್ವಿಜರ ಕಾರ್ಯದೋಷ ಉಪಶಮನ ಮಾಡುವ ಸೌರ ದ್ರಷ್ಟಾರನಾದ ಬ್ರಹ್ಮನು ಸಾಮಗಾನ ನಿಷೇಧವನ್ನು ಊಹಿಸಿ ನಿವಾರಿಸುತ್ತಾನೆ.

ನಿಷೇಧಿಸಿರುವ ಉದ್ಗಾತೃ ವಿಹಿತ ಮಾಮದೇವ್ಯಾದಿ ಸಾಮ ಗಾನವನ್ನು ಬ್ರಹ್ಮನು ಗಾನ ಮಾಡುತ್ತಾನೆ - **ಬ್ರಹ್ಮಣಾ ಇದಂ ಗಾಯೇತ – ಇತ್ಯೇವಂ ವಿಧೇ ಕ್ವಚಿದಪ್ಯ ದರ್ಶನಾತ್** - ಬ್ರಹ್ಮನು ಇದನ್ನು ಗಾನ ಮಾಡಬೇಕೆಂದು ಎಲ್ಲೂ ಕಂಡು ಬರುವುದಿಲ್ಲ ವಾದುದರಿಂದ ಮೊಲದಕೊಂಬಿನಂತೆ, ವಂಧ್ಯಾಪುತ್ರನಂತೆ ಬ್ರಹ್ಮ ಗಾನಮಾಡುವುದೆಂಬುದು ಅಸಂಭವ ಎನ್ನುವುದಾದರೆ '**ವಪೋತ್ ಖೇದವತ್**' ಎಂದು ಉತ್ತರಿಸುತ್ತೇವೆ.

**ಸ ಆತ್ಮನೋ ವಪಾಮುದಖಿದತ್** ಅವನು ಸ್ವತಃ ತನ್ನ ವಪೆಯನ್ನು ತೆಗೆದನು ಎಂಬ ಅತ್ಯಂತ ಅಸಂಭವ ಅರ್ಥದ ಶೃಂಗಹೀನಸ್ಯ ಅಜಾತ ಶೃಂಗಸ್ಯ, **ಪತಿತ ಶೃಂಗಸ್ಯ ವಾ ತಾಃ ಸರ್ವಮನ್ನಾದ್ಯಮಾಪ್ನುಮಸ್ಯಾ ಏತಾಸ್ತು ಪರಾಃ ಇತ್ಯಸ್ಯ ಭಾಷ್ಯ - ತಾಃ ಪತಿತ ಶೃಙ್ಗಾಃ ಗಾವಃ ಸರ್ವರ್ತುರ್ ಭವಮನ್ನಾದ್ಯಮದನೀಯಮನ್ನಂ ಪ್ರಾಪ್ನುವನ್ ತಾ ಗಾವಸ್ತೂ ಪರಾಃ ಶೃಂಗ ಹೀನಾಃ ದೃಶ್ಯನ್ತೇ** - ತಾಂ.ಮ.ಬ್ರಾ. ೪.೧.೨. **'ಪ್ರಾಜಾಪತ್ಯ ತೂಪರಸ್ಯ ಅಜಸ್ಯ'** ವಿಧಿಯಲ್ಲಿ ಸ್ತುತಿಸಲ್ಪಡುತ್ತದೆ ಎನ್ನುವುದಾದರೆ ಹೇಳುತ್ತೇವೆ. ವಿಧಿಗಳ ಅನೇಕತ್ವದಿಂದ ತಮ್ಮ ತಮ್ಮ ಸನ್ನಿಧಿಯಲ್ಲಿ ಪಠಿತ ಅರ್ಥವಾದಗಳ ನಿರಾಕಾಂಕ್ಷೆಯ ಅನ್ವಯ ಯೋಗದಿಂದ ಇದು ವಾಮದೇವ್ಯಾದಿ ಸಾಮವಿಧಾನ ಸ್ತೋತ್ರವಾಗಲು ಯೋಗ್ಯವಲ್ಲ. ಹಾಗಾದರೆ ಈ ವಾಕ್ಯದ ಗತಿ/ ಪ್ರಯೋಜನವೇನು ಎಂಬುದಕ್ಕೆ ಉತ್ತರ ಹೀಗಿದೆ - ಬ್ರಹ್ಮ ಶಬ್ದವು ಇಲ್ಲಿ ವಿಪ್ರಜಾತಿದ್ವಾರದಿಂದ ಉದ್ಗಾತೃವಿಗೆ ಹೇಳುತ್ತದೆ. ವಿಧಿ ನಿಷೇಧಗಳೆರಡೂ ಇದ್ದಾಗ ಉದ್ಗಾತೃ ಗಾನ ಮಾಡುವುದು ವಿಕಲ್ಪವಾಗಿರುತ್ತದೆ.

ಜೈ.ನ್ಯಾ.ವಿ.೧೧.೨.೧೨ರಲ್ಲಿ ಬ್ರಹ್ಮಸಾಮದ ಉತ್ಕರ್ಷದ ಬಗೆಗೆ ತಿಳಿಸುತ್ತಿದ್ದಾರೆ. ಸಪ್ತದಶ ಪ್ರಾಜಾಪತ್ಯದ ವಾಜಪೇಯದಲ್ಲಿ ಯಜ್ಞ ಪಶುಗಳಾದ ಆಡುಗಳು ಎದುರು ಬದರಾದಾಗ ಅವುಗಳನ್ನು ಅಗ್ನಿಯ ಸುತ್ತಲೂ ಪ್ರದಕ್ಷಿಣೆ ಮಾಡಿಸಿ ಬಿಟ್ಟು ಬಿಡುತ್ತಾರೆ. ಬ್ರಹ್ಮ ಸಾಮದಿಂದ ಸ್ಪರ್ಶಿಸುತ್ತಾರೆ. ಹೀಗೆ ಹದಿನೇಳು ಪಶುಗಳನ್ನು ಅಗ್ನಿಪ್ರದಕ್ಷಿಣೆ ಮಾಡಿಸುವಾಗ ಮುಂದಿನ ಕರ್ಮಶೇಷವಾದ ಉತ್ಸರ್ಗ ಶಬ್ದವು ನಿಷೇಧಿಸಲ್ಪಟ್ಟಿರುತ್ತದೆ.

ಇದೇ ನ್ಯಾಯದಿಂದ ಇಲ್ಲಿ ಕರ್ಮಭೇದದ ಶಂಕೆಗೆ, ಅಪವಾದ ಪದಗತವಾದ ಇಪ್ಪತ್ತನೆಯ ಸೂತ್ರದಿಂದ ಸಮಾಧಾನವಿದೆ. ಆ ಸೂತ್ರ ಹೀಗಿದೆ **ಅದ್ರವ್ಯತ್ವಾತ್ ಕೇವಲೇ ಕರ್ಮಶೇಷಃ ಸ್ಯಾತ್ ॥ ಕೇವಲೇ** - ದ್ರವ್ಯದೇವತಾ ರಹಿತ ವಾಕ್ಯದಲ್ಲಿ ಕರ್ಮೋಕ್ತವಾದ ಶೇಷ ಕರ್ಮಶೇಷವು ಅನುವಾದಾದಿ ರೂಪದಲ್ಲಿ ಸ್ವೀಕರಿಸಲ್ಪಡುತ್ತದೆ. ಎಲ್ಲಿ ಅಂದರೆ **ಅದ್ರವ್ಯತ್ವಾ ದ್ರವ್ಯಮಿತ್ಯುಪಲಕ್ಷಣೇ ದೇವತಾಯಾ ಅಪಿಕೇವಲೇ** ಎಂಬ ಸಂಬಂಧದಿಂದ ದ್ರವ್ಯ ದೇವತೆಯ ಶ್ರವಣವೇ ಇಲ್ಲವಾಗಿ ಎಂದರ್ಥವಾಗುತ್ತದೆ. ಆದುದರಿಂದಲೇ ಹೀಗೆ ಹೇಳಿದೆ. **ಧ್ರೌವಂ ಸಾಧಾರಣಂ ದ್ರವ್ಯ ದೇವತಾ ಮನ್ತ್ರ ವರ್ಣಕೋ । ರೂಪವನೌ ತತೋ ಯಾಗೌ ವಿಧೀಯತೇ ಪೃಥಕ್ ತಯಾ । ಇತಿ ॥**

ಅಶ್ವಮೇಧದಲ್ಲಿ ಅಗ್ನಿ ಪ್ರದಕ್ಷಿಣೆ ಮಾಡಿಸಿದ ಪಶುಗಳನ್ನು ಅರಣ್ಯದಲ್ಲಿ ಬಿಡುತ್ತಾರೆ ಎಂಬಲ್ಲಿ ಕರ್ಮಶೇಷ ನಿಷೇಧವನ್ನು ಅಂಗೀಕರಿಸಿರುವುದರಿಂದ ಇಲ್ಲೂ ಸಹ **ಸಪ್ತದಶ .... ಕರ್ಮಾನ್ತರಮ್** ಬಂದೊದಗಿದಾಗ ಕರ್ಮಾನ್ತರ ವಿಧಿಯಲ್ಲಿ ಸಪ್ತದಶಾದಿಗಳಿಂದುಂಟಾ

ಗುವ ಅದೃಷ್ಟವಾದುದಕ್ಕಿಂತ ಭಿನ್ನವಾದ ಅದೃಷ್ಟವನ್ನು ಕಲ್ಪಿಸುವುದರಿಂದ ವಾಕ್ಯಭೇದವನ್ನು ಕಾಣಲಾಗುವುದು. ಆದರೆ '**ಬ್ರಹ್ಮಸಾಮ್ನ್ಯಾಲಭತೇ**' ಎಂಬಲ್ಲಿ ದ್ರವ್ಯದೇವತೆಯನ್ನು ಹೇಳಿಲ್ಲವಾದುದರಿಂದ ಕರ್ಮಾನ್ತರ ವಿಧಿಯು ಸಂಭವಿಸುವುದಿಲ್ಲ.

ಜೈಮಿನಿ ಮುಂತಾದವರು ಶಬ್ದಾನ್ತರ, ಅಭ್ಯಾಸ, ಸಂಖ್ಯಾ ಗುಣ, ಪ್ರಕ್ರಿಯಾ, ನಾಮಧೇಯ ಎಂಬ ಆರು ವಿಷಯಗಳು ಕರ್ಮಭೇದಕ್ಕೆ ಕಾರಣವೆಂದು ಸ್ವೀಕರಿಸಿರುತ್ತಾರೆ. **ಶಬ್ದಾನ್ತರೇ ಕರ್ಮಭೇದಃ ಕೃತಾನುವನ್ಧತ್ವಾತ್** - ಜೈ.ಸೂ. ೨.೨.೧ರಲ್ಲಿ **ಯಜತಿ ಜುಹೋತಿ ದದಾತಿ** ಇತ್ಯಾದಿ ಕ್ರಿಯಾಶಬ್ದಗಳು ಈ ಭೇದವನ್ನೇ ತಿಳಿಸುತ್ತಿರುವುದೆಂದು ಗೊತ್ತಾಗುತ್ತದೆ. ಒಟ್ಟಿನಲ್ಲಿ ಭಾವನೆಗಳ ವಾಚಕತ್ವಾಂಶಗಳಲ್ಲಿ ಏಕತ್ವವಿದ್ದರೂ **ಕೃತಾನು ಬನ್ಧತ್ವಾತ್ ಯಜ್ಞಾದಿ ಧಾತು ರೂಪಾನುಬನ್ಧಕೃತ ಭೇದಾತ್** ಶಬ್ದಾನ್ತರವನ್ನು ಸ್ವೀಕರಿಸಲೇಬೇಕಾಗುವುದರಿಂದ ಕರ್ಮಭೇದವನ್ನು ಸಹ ಬರಮಾಡಿಕೊಂಡಂತೆಯೇ ಆಗುತ್ತದೆ - **ಸೋಮೇನ ಯಜೇತ, ಹಿರಣ್ಯ ಮಾತ್ರೇಯಾಯ ದದಾತಿ, ದಾಕ್ಷಿಣಾನಿ ಜುಹೋತಿ** ಮುಂತಾದವು ಇದಕ್ಕೆ ಉದಾಹರಣೆಗಳು : ಹೀಗಾಗಿ ಪರ್ಯಗ್ನಿ **ಕರಣಾ ನನ್ತರವೇ**, ಸಪ್ತದಶ ಪಶೂನಾಲಂಭಾದಿ ಉಳಿದ ಕಾರ್ಯಗಳ ಉತ್ಕರ್ಷವನ್ನು ಬ್ರಹ್ಮ ಸಾಮ ಕಾಲದಲ್ಲಿ ವಿಧಿಸಲಾಗಿದೆ. ಹೀಗಿರುವಾಗ ಪರ್ಯಗ್ನಿಕರಣಾನನ್ತರ ಉಳಿದ ಕರ್ಮಾಚರಣೆಗೆ ವಿರಾಮ ಎಂಬುದು **ಉತ್ಸರ್ಗ** ಶಬ್ದದ ಪ್ರಯೋಗದಿಂದ ಉದಯಿಸುವುದೇ ಇಲ್ಲ.

ಇಲ್ಲಿ **ಪ್ರಜಾಪತಿರ್ದೇವತಾ ಯಸ್ಯ ಪಶೋಃ ಸ ಪ್ರಾಜಾಪತ್ಯಃ** ಎಂಬ **ತದ್ಧಿತಾನ್ತ ಪ್ರಾತಿಪಾದಿಕ** ವ್ಯುತ್ಪತ್ತಿಯ ನಂತರ ತದ್ಧಿತಾನ್ತ ಪ್ರಾತಿಪಾದಿಕಾರ್ಥದ ಪ್ರಜಾಪತಿ ದೇವತಾ ವಿಶಿಷ್ಟ ಪಶುಗಳ ಕರ್ಮ ಬಾಹುಳ್ಯವನ್ನು ಗಮನಿಸುವುದರಿಂದುಂಟಾಗುವ ದ್ವಿತೀಯಾ ಬಹುವಚನದಲ್ಲಿ ಮೊದಲು ಭಾವಿಸಿದಾಗ, ದ್ವಿತೀಯಾವಿಭಕ್ತಿಯೇ ಇರುವಾಗ ತದ್ಧಿತೋತ್ಪತ್ತಿ ಕಾಲದಲ್ಲಿ ಅನ್ವಯವಿರುವುದಿಲ್ಲವಾಗಿ ನಂತರ ಭಾವಿಸಿದಾಗ ಬಹುವಚನದ ಅನ್ವಯ ಹೇಗೆ ಸಾಧ್ಯ? ಹೀಗಿರುವಲ್ಲಿ ಪ್ರಾಜಾಪತ್ಯದ ತದ್ಧಿತಾನ್ತದ ಪ್ರಾತಿಪದಕದಿಂದ ಒಂದು ಪಶುದ್ರವ್ಯವು ಒಂದು ದೇವತೆಯೊಂದಿಗೆ ಸೇರಿ. ಯಾಗರೂಪದಲ್ಲಿ ಸಮರ್ಪಿತವಾಗುತ್ತದೆ. ಇಂತಹವುಗಳು ಅನೇಕವಾಗಿರುವುದರಿಂದ ಬಹುವಚನವಿರುತ್ತದೆ. ಸಪ್ತದಶ ಎಂಬುದೇ ಈ ಬಹುತ್ವದ ನಿರ್ದೇಶನ ಮಾಡುತ್ತದೆ. ಹೀಗಾಗಿ ಇಲ್ಲಿ ಸಂಖ್ಯೆಯ ನಿಮಿತ್ತದಿಂದ ಕರ್ಮಭೇದವಿರುತ್ತದೆ. ಈ ಸಂದರ್ಭದಲ್ಲಿ ಒಂದು ಪಶುವಿನಲ್ಲಿ ದೋಷವಿದ್ದರೆ ಅದೇ ಆವರ್ತನೆಯಾಗುವುದಲ್ಲಾ ಎಂದರೆ ಪಶು ಪಶುಗಳಲ್ಲಿ ತಾರತಮ್ಯವನ್ನೆಣಿಸುವುದಿಲ್ಲ. ಹಾಗಿಲ್ಲದಿದ್ದರೆ ಒಂದು ಪಶುವಿನಲ್ಲಿ ದೋಷವಿದ್ದರೆ ಪಶುಗಣವನ್ನೇ ಆವರ್ತನೆ ಮಾಡ

ಬೇಕಾಗುವುದಾಗಿ ದೃಷ್ಟಾರ್ಥವೇ. ದೃಷ್ಟ ಪ್ರಯೋಜನವೇ ಇಲ್ಲದಂತಾಗುತ್ತದೆ. ಈ ವಿಚಾರವು ಜೈಮಿನೀ ೨.೨.೨೦ನೆಯ ಸೂತ್ರ ಭಾಷ್ಯದಲ್ಲಿ ಸ್ಫುಟವಾಗಿದೆ.

ಮನ್ತ್ರಲಕ್ಷಣದಿಂದ ಆರಂಭವಾಗಿ ಬ್ರಹ್ಮಸಾಮೋತ್ಕರ್ಷ ಪರ್ಯನ್ತವಾಗಿ ಜೈ.ನ್ಯಾ.ವಿ. ೧.೨.೪.ರಲ್ಲಿ ಚರ್ಚಿತವಾಗಿರುವದರಿಂದಲೂ ಸಾಮವೇದ ಕ್ರತುಗಳಲ್ಲಿ ಪ್ರಯೋಗವು ಸ್ಪಷ್ಟವಾಗಿರುವುದರಿಂದಲೂ ಋಗ್ವೇದಾದಿಗಳಂತೆ ಪ್ರಯೋಜನವಾದುದರಿಂದಲೂ ವ್ಯಾಖ್ಯಾನ ಮಾಡಲಾಗಿದೆ. ಇದನ್ನು ಹೀಗೆ ತಿಳಿಯಬೇಕು ಎಂದು ಜೈ.ನ್ಯಾ.ಮಾ. ೧.೨.೪ರಲ್ಲಿ ವಿಚಾರ ಮಾಡಲಾಗಿದೆ. ಅನ್ಯಾನ್ಯ ಗ್ರಂಥಗಳಲ್ಲಿನ ಪಾಠಗಳನ್ನು ತಿಳಿಸಿ ಬಹುವಿಷಯ ವಿಚಾರಗಳನ್ನೂ ಭಿನ್ನಭಿನ್ನದೇಶ ಕಾಲಗಳ ಹಿನ್ನೆಲೆಯಲ್ಲಿ ಸ್ಪಷ್ಟಮಾಡಲಾಗಿದೆ. ಜೈ.ನ್ಯಾ.ಮಾ. ೧೨.೪,೫ ರಲ್ಲಿ ವಿಶೇಷವಾಗಿಯೂ ಅನ್ಯಾನ್ಯ ಅಧ್ಯಾಯ ಪಾದ ಅಧಿಕರಣಗಳಲ್ಲಿಯದನ್ನೂ ಅಲ್ಲಲ್ಲೇ ಸ್ಫುಟವಾಗಿ ವಿಚಾರ ಮಾಡಿದೆ. ಆದರೂ ಸಾಮವೇದಕ್ರತು ವಿಷಯಕ ಸಂಖ್ಯಾ ನಿರ್ಧಾರ ಮಾಡುವ ದೃಷ್ಟಿಯಲ್ಲಿಯೇ ಈ ತಾತ್ಪರ್ಯ ಮನ್ತ್ರ ಲಕ್ಷಣದಿಂದ ಬ್ರಹ್ಮ ಸಾಮೋತ್ಕರ್ಷ ಇದೇನೂ ನಿರಂತರ ವಾದುದಲ್ಲ.

ಸಾಮವೇದದ ಬ್ರಾಹ್ಮಣ ಭಾಗ ಮಾತ್ರ ವ್ಯಾಖ್ಯಾನ ಯೋಗ್ಯವಾದದ್ದು. ಮನ್ತ್ರಭಾಗವು ವ್ಯಾಖ್ಯಾನ ಮಾಡಲು ಸೂಕ್ತವಲ್ಲ ಎಂಬಲ್ಲಿ ಮನ್ತ್ರವು ವಿಸ್ತಾರವಾದ ಗಾನ ಪ್ರಕ್ರಿಯೆಯಾಗಿರುವುದರಿಂದ ಎಂಬುದೇ ಅಭಿಪ್ರಾಯ. ಪದವಾಕ್ಯ ವ್ಯತಿರಿಕ್ತವಾದ ಸ್ವರಸ್ತೋಭಾದಿಗಳಿಂದಾದ ಗಾನದಲ್ಲಿ ಕ್ರಿಯಾಕಾರಕ ಯೋಜನಾಭಿವ್ಯಕ್ತಿಗೆ ಇರುವ ಅರ್ಥವನ್ನು ತಿಳಿಸಲೆಂದೇ ವ್ಯಾಖ್ಯಾನ ಮಾಡಲಾಗುತ್ತಿದೆ. ಸ್ವರಾದಿ ಲಕ್ಷಣ ವಿಶೇಷಗಳನ್ನು ತಿಳಿಸುವ ಪೂರ್ವಾಚಾರ್ಯರ ವ್ಯಾಖ್ಯಾನಗಳಿಂದಲೇ ಆಯಾ ಲಕ್ಷಣಗಳ ಮನ್ತ್ರಗಳನ್ನು ಗ್ರಹಿಸಲು ಸಾಧ್ಯವಾಗಿದೆ. ಗ್ರನ್ಥಾರಂಭದಲ್ಲೇ ಈ ವಿಚಾರಗಳನ್ನು ಮಂಡಿಸಿದ್ದರೂ ಈಗ ಉಪಸಂಹಾರ ಮಾಡಲಾಗುತ್ತಿದೆ ಎಂದೇನೂ ಹೇಳಿಲ್ಲವಾಗಿ ಮನ್ತ್ರಭಾಗವನ್ನು ಹೇಗೆ ವಾಖ್ಯಾನ ಮಾಡಲಾಗುತ್ತಿದೆ? ಎಂದರೆ ಗಾನಗಳು, ಋಚೆಗಳನ್ನಾಶ್ರಯಿಸಿವೆ. **ತಸ್ಮಾದೃಚ್ಯಧ್ಯೂಢಂ ಸಾಮಗೀಯತೇ** - ಛಾಂ.ಉ.೧.೬.೨, ಎಂದಿರುವುದರಿಂದಲೂ ಗಾನಾಶ್ರಯ ವಾದ ಋಚೆಗಳು ಮನ್ತ್ರಗಳೇ ಆಗಿದ್ದು ಆ ಋಚೆಗಳ ಅರ್ಥವಶದಿಂದ ಪಾದ ವ್ಯವಸ್ಥೆ ಎಂದು ಪೂ.ಮೀ. ೨.೧.೨ರಲ್ಲಿ ವಿವರಿಸಿರುವುದರಿಂದಲೂ ವ್ಯಾಖ್ಯಾನ ಮಾಡಲಾಗುತ್ತಿದೆ.

**ತೇಷಾಂ ಮನ್ತ್ರಭಾಗಾನಾಂ ಯತ್ರ ಭಾಗೇ ಅರ್ಥವಶೇನ ಪಾದ ವ್ಯವಸ್ಥಾ ವಿದ್ಯತೇ ಸ ಋಗಾಖ್ಯಃ। ಇಹ ಸೂತ್ರೇ ಅರ್ಥವಶೇನೇತ್ಯವಿವಕ್ಷತಮಿತಿ ಶವರಭಾಷ್ಯೇ ಸ್ಫುಟಮ್। ಅನ್ಯಥಾ ಅಗ್ನಿಮೀಳೇ ಪುರೋಹಿತಮ್ ಇತ್ಯತ್ರಸ್ಯಾದ್ಯತ್ಕಮ್ ಅತ್ರ ನ ಸ್ಯಾತ್ ಅಗ್ನಿಃ ಪರ್ವೇಭಿರೃಷಿಭಿಃ**

**ಇತಿ ತಸ್ಮಾದ್ ಯತ್ರ ಪಾದಕೃತಾ ವ್ಯವಸ್ಥಾ ಸ ಮನ್ತ್ರ ಋಗಾಖ್ಯಃ ಇತ್ಯೇವ ಸಾರಮ್ ॥**
ಪೂ.ಮೀ.೨.೧.೩೨ ॥

ಋಗಾತ್ಮಕ ಮನ್ತ್ರದ ಕ್ರಿಯಾಕಾರಕ ಅನ್ವಯದ ಲಿಂಗವಾಗಿರುವ ಅರ್ಥವನ್ನು ಅನುಷ್ಠಾನ ಕಾಲದಲ್ಲಿ ಸ್ಮರಣೆಯಲ್ಲಿಟ್ಟುಕೊಂಡಿರಬೇಕೆಂದು ವಿಧಿಸಿರುವುದರಿಂದ ಋಚೆಗಳ ವ್ಯಾಖ್ಯಾನವು ಕರ್ತವ್ಯವಾಗಿರುತ್ತದೆ ಎಂಬುದನ್ನು ಜೈ.ನ್ಯಾ.೧.೨.೪ರಲ್ಲಿ ನಿರ್ಣಯಿಸಲಾಗಿದೆ.

ಉದಾಹರಣೆಗಾಗಿ '**ಉರುಪ್ರಥಸ್ವೋತ್ಯಯಂ**' ಎಂಬ ಮನ್ತ್ರವನ್ನು ಪುರೋಡಶವೇ **ತ್ವಂ ನೀನು ಉರು** ಬಹಳವಾಗಿ ಹೇಗೆ ಸಾಧ್ಯವೋ ಹಾಗೆ ಹರಡು - ಇತ್ಯಾದಿಯಾಗಿ ಅರ್ಥಮಾಡಿಕೊಂಡು ಯಾಗಪ್ರಯೋಗದಲ್ಲಿ ಉಚ್ಚರಿಸಿದಾಗ ಅದೃಷ್ಟಫಲದ ಉದಯ ವಾಗುತ್ತದೆ. ಅರ್ಥಪ್ರಕಾಶನಕ್ಕಾಗಿ ಮಾತ್ರ ಈ ಉಚ್ಚಾರವಲ್ಲ. ಪುರೋಡಾಶ ಗ್ರಥನ ಲಕ್ಷಣದ ಅರ್ಥ '**ಉರು ಪ್ರಥಸ್ವೇತಿ ಪುರೋಡಾಶಂ ಪ್ರಥಯತಿ**' ಎಂದು ಬ್ರಾಹ್ಮಣ ವಾಕ್ಯದಲ್ಲಿ ಬಂದಿದ್ದರೂ ಸಹ ಇದು ಯುಕ್ತವಾಗಿಲ್ಲ. ಅರ್ಥದ ತಿಳುವಳಿಕೆ ಯಿಂದುಂಟಾದ ವಿಶ್ವಾಸದಿಂದ ದೃಷ್ಟಪ್ರಯೋಜನವಾಗುವ ಸಂಭವವಿದ್ದರೆ ಅದೃಷ್ಟದ ಕಲ್ಪನೆಯನ್ನು ಮಾಡಲಾಗುವುದಿಲ್ಲವೆಂದು **ಲಭ್ಯಮಾನೇ ಫಲೇ ದೃಷ್ಟೇ ನಾದೃಷ್ಟ ಫಲಕಲ್ಪನಾ** ಹೇಳಲಾಗಿದೆ ಯಷ್ಟೆ. ಆದುದರಿಂದ ದೃಶ್ಯವಾದ ಅರ್ಥದ ಪುನಃ ಪುನಃ ಸ್ಮರಣೆಯಿಂದ ಯಾಗ ಪ್ರಯೋಗ ದಲ್ಲಿ ಮನ್ತ್ರೋಚ್ಚಾರಣೆಯ ಪ್ರಯೋಜನವಿರುತ್ತದೆ. ಬ್ರಾಹ್ಮಣ ವಾಕ್ಯದಿಂದ ಅರ್ಥದ ಸ್ಮರಣೆ ಆಗುವುದಾದರೆ ಮನ್ತ್ರದಿಂದಲೇ ಅದನ್ನು ಸ್ಮರಿಸಿಕೊಳ್ಳಬಹುದೆಂಬ ನಿಯಮವು ದೃಷ್ಟಾರ್ಥಕ್ಕೇ ಸಂಭವಿಸುವುದರಿಂದ ಅದೃಷ್ಟ ಪ್ರಯೋಜನವಾಗಲಿ ಎಂಬ ಆಶಯವಿದೆ.

ಜೈ.ನ್ಯಾ.ವಿ. ೧.೨.೪ರಲ್ಲಿ **ಉರೂ ಪ್ರಥಸ್ವೇತಿ** ವಿಷಯ ವಾಕ್ಯಸ್ಯೈಕ್ಯಾಧಿಕರಣದಲ್ಲಿ **ಯಾಗಪದ್ಧತಿ** ಗ್ರಂಥಕರ್ತೃ ಹಾಗೂ ಮೀಮಾಂಸ ಜೀವನ ಗ್ರನ್ಥ ಕರ್ತೃ ಮೀಮಾಂಸಾ ಶ್ರೇಷ್ಠರಾದ ಭಟ್ಟರೂ ಅವರ ಶಿಷ್ಯ ಕಾನ್ಯಕುಬ್ಜ ಬ್ರಾಹ್ಮಣ ಗುರುದತ್ತ ಗುರೂಪಾಧಿಕ ಪ್ರಭಾಕರರು **ಶಾಲೀಕನಾಥೀಯ ಪ್ರಕರಣ ಪಂಚಿಕಾದಿಗಳಲ್ಲಿ** ಸ್ಪಷ್ಟವಾಗಿ ವ್ಯಕ್ತಮಾಡಿರುವ ಅಭಿಪ್ರಾಯಾನ್ತರವನ್ನು ಚರ್ಚಿಸಿದ್ದಾರೆ. ಈ ಮನ್ತ್ರಲಿಂಗದಿಂದ ವಿನಿಯೋಗವಾಗಿರುವ ಬ್ರಾಹ್ಮಣ ವಾಕ್ಯವು ಉದ್ದೇಶರಹಿತವಾದ ಅರ್ಥದ್ದಾಗಿದ್ದರೆ ವಾಕ್ಯ ವಿನಿಯೋಗದಿಂದ ಮನ್ತ್ರ ಲಿಂಗವನ್ನು ಗಮನಿಸಬೇಕಾಗುವುದಿಲ್ಲ. ಹೀಗೆ ಎರಡೂ ವಿರೋಧಗಳಿಂದ ಚೋದನೆಗೆ ಅಂದರೆ ಪ್ರೇರಣೆಗೆ ಅಪ್ರಮಾಣ್ಯವಾಗಿರುತ್ತದೆ. **ಪ್ರಮಾಣಾಧ್ಯಾಯ ಸಂಗತ್ಯಾ ಪ್ರಾಮಾಣ್ಯ ಪ್ರಾಮಾಣ್ಯ ಏವ ವಿಚಾರೋಪಯುಕ್ತ ಇತಿ ಗುರೋರಾಶಯಃ** ಎಂಬ ಪೂರ್ವಪಕ್ಷಕ್ಕೆ

ಇದೇನೂ ವಿರೋಧವಲ್ಲ. ವಾಕ್ಯದ ಅನುವಾದವೆಂಬ ಪ್ರಬಲವಾದ ಲಿಂಗದಿಂದ ವಿನಿಯೋಗ ಸಿದ್ಧವಾಗುತ್ತದೆಂಬುದು ಸಿದ್ಧಾಂತ.

ಹೀಗೆ ಸಮಗ್ರವಾದ ಭಾಷ್ಯದ ಅವತರಣಿಕೆಯು ಮುಗಿದಿದೆ.

**ಅಥ ಪೂರ್ವ ಸಂಹಿತಾ ಮೂಲರೂಪ ಛನ್ದೋನಾಮಾರ್ಚಿಕಾ ಮಾತ್ರಸ್ಯ ಭಾಷ್ಯಸ್ಯಾವತರಣಿಕಾ** - ಎಂದು ಅರ್ಥವನ್ನು ಮತ್ತೆ ಮತ್ತೆ ನೆನಪಿನಲ್ಲಿಟ್ಟುಕೊಳ್ಳಲು ಸಾಮಗಳಿಗೆ ಆಧಾರವಾದ ಸಾಮಸಂಹಿತಾ ಋಚೆಗಳಿಗೆ ವ್ಯಾಖ್ಯಾನಮಾಡಲಾಗುತ್ತಿದೆ. ಸಾಮವೇದದಲ್ಲಿ ಎರಡು ಸಂಹಿತೆಗಳಿರುವುದನ್ನು ಹಿಂದೆಯೇ ತಿಳಿಸಲಾಗಿದೆಯಷ್ಟೆ. ಅವುಗಳಲ್ಲಿ ಛನ್ದಾರ್ಚಿಕವೆನಿಸಿರುವ ಮೊದಲನೆಯ ಸಂಹಿತಾ ಗ್ರಂಥದಲ್ಲಿನ ಋಚೆಗಳಿಗೆ ಕ್ರಮವಾಗಿ ವ್ಯಾಖ್ಯಾನಮಾಡಿ ತಿಳಿಯಬೇಕಾದ ವಿಷಯಗಳನ್ನು ಹೇಳಲಾಗಿದೆ. ಬ್ರಾಹ್ಮಣ ಹಾಗೂ ಸೂತ್ರಗಳಿಂದ ವಿನಿಯೋಗವಾಗುವ ಸಾಮಗಳಿಗೆ ಆಶ್ರಯಮಾತ್ರವಾಗಿರುವ ಈ ಋಚೆಗಳಿಗೆ ಕ್ರತುಗಳಲ್ಲಿ ಸ್ವತಂತ್ರವಾದ ವಿನಿಯೋಗವಿಲ್ಲ. ತ್ರಿವೃದಾದಿ ಸ್ತೋಮಾತ್ಮಕವಾದ ಋಚೆಗಳನ್ನು ವಿನಿಯೋಗಿಸಿರುವುದು ಕಂಡುಬಂದರೂ ಆ ಋಚೆಗಳು ಛನ್ದಾರ್ಚಿಕದಲ್ಲಿ ಪಠಿತವಾಗಿರದೆ ಆಶ್ರಯಮಾತ್ರವಾಗಿ ಉಪಯೋಗಿಯಾಗಿರುತ್ತವೆ. ಹೀಗಾಗಿ ಋಗ್ವೇದದ ಋಚೆಗಳ ವ್ಯಾಖ್ಯಾನದಂತೆ ಸಾಮವೇದದ ಋಚೆಗಳ ವ್ಯಾಖ್ಯಾನದಲ್ಲಿ **'ಈ ಋಚೆಗಳ ವಿನಿಯೋಗದ ಬಗೆಗೆ ವಿಶೇಷವಾಗಿ ಅನ್ವೇಷಣೆಯಾಗಬೇಕು'**. ಋಗ್ವೇದೀಯ ಋತ್ವಿಜರ ಉಪಯೋಗಕ್ಕಾಗಿ ಋಗ್ಭಾಷ್ಯದಲ್ಲಿ ಪ್ರತ್ಯೇಕವಾಗಿ ವಿನಿಯೋಗವನ್ನು ಜ್ಞಾಪಿಸಿರುವಂತೆ ಇಲ್ಲಿಯೂ ಈ ಋಚೆಯ ಈ ಗಾನವು ಇಂತಹಕಡೆ ವಿನಿಯೋಗವಾಗುತ್ತದೆ ಎಂದು ಹೇಳಲು ಬರುವುದಿಲ್ಲವೆಂಬುದನ್ನು ಗಮನಿಸಬೇಕು.

ಸಾಮಾನ್ಯವಾಗಿ ವಿನಿಯೋಗವು ಬ್ರಹ್ಮಯಜ್ಞದ ವಿಷಯವಾಗಿರುತ್ತದೆ - **ಬ್ರಹ್ಮಯಜ್ಞೋ ವೇದ ಪಾರಾಯಣಃ** - ಮನು ೩.೭೦. **ಅಧ್ಯಾಪನ** ಶಬ್ದೇನ **ಅಧ್ಯಯನಮಪಿ ಗೃಹ್ಯತೇ ಜಪೋऽಹುತ** ಮನು ೩.೭೪ ಇತಿ **ವಕ್ಷ್ಯಮಾಣತ್ವಾತ್ - ಅತೋ ಅಧ್ಯಾಪನಮಧ್ಯಯನ ಬ್ರಹ್ಮಯಜ್ಞ ಇತಿ ತತ್ರ ಕುಲ್ಲೂಕಃ ॥** ಹೀಗಿದ್ದರೂ ಸಹ - ಇದು ವಿಸ್ತಾರವಾದಜೊಂಡು ಸಾರವಿಲ್ಲದ್ದು ಎಂದು **'ಅನ್ವೇಷಣೆಯ ಪ್ರಯಾಸವೇ'** ಆಗಿಲ್ಲ. ಮನ್ತ್ರದ ಋಷಿ ಛನ್ದೋದೇವತೆಗಳನ್ನು ತಿಳಿದು ಯಜ್ಞಾಧ್ಯಯನ ಮಾಡುವವನು ಆಯುಷ್ಮಂತನೂ ಶ್ರೇಯೋವಂತನೂ ಆಗುತ್ತಾನೆ. ಮನ್ತ್ರಗಳು ಪರ್ಯುಷಿತವಾಗದೆ ವೀರ್ಯವತ್ತಾಗುತ್ತವೆ.

ಛನ್ದಸ್ಸಿನ ಪ್ರಾಧಾನ್ಯತೆಯಿಂದಾಗಿ ಸಾಮಗಾಯಕರಿಗೆ 'ಛನ್ದೋಗರೆಂಬ' ಯೌಗಿಕ ನಾಮವಿರುತ್ತದೆ. ಸಾಮಗಾನದಲ್ಲಿನ ಛನ್ದಸ್ಸು, ಋಷಿದೇವತೆಗಳು ಋಕ್ಕಿನ ಛಂದೋ ದೇವತೆಗಳಿಗಿಂತ ಭಿನ್ನ ವಾಗಿದ್ದು ಆರ್ಷೇಯ ಬ್ರಾಹ್ಮಣಾದಿಗಳಿಂದ ತಿಳಿಯಬೇಕಾಗಿರುವು ದೆಂಬುದನ್ನು ಸಮ್ಮತಿಸುವವರಿಗೆ ಭಾಷ್ಯಕಾರರು ಹೇಗೆ ಹೇಳಿದರು ಎಂಬ ಪ್ರಶ್ನೆ ಉದ್ಭವಿ ಸುವುದಿಲ್ಲ. ಈ ಋಕ್ಕುಗಳನ್ನು ಕ್ರಮವ್ಯತ್ಯಾಸದಿಂದ - ಋಗ್ವೇದದ ಪರವೂ, ಸೂಕ್ತಗಳ ಪರವೂ, ಅದರ ಅಭಿಜ್ಞರಪರವೂ ಆದ ಬಹ್ವೃಚ ಶಬ್ದದಿಂದ ಪ್ರಸಿದ್ಧರಾಗಿರುವ ಋಗ್ವೇದಿ ಗಳು ಅಧ್ಯಯನ ಮಾಡುತ್ತಾರಾದುದರಿಂದ ಋಗ್ವೇದ ಸಂಹಿತೆಯ ಅನುಕ್ರಮಣಿಕೆಯಲ್ಲಿ ಋಷ್ಯಾದಿಗಳ ಬಗೆಗೆ ತಿಳಿಯಬಹುದು.

## ಸಾಮವೇದ ಛನ್ದಾರ್ಚಿಕ

**ಹರಿಃ ಓಮ್** ಎಂಬುದು ವೇದಾಧ್ಯಯನ ಅಧ್ಯಾಪನಾರಂಭ ಸೂಚಕ ವಾಕ್ಯವಾಗಿದ್ದು, ವೈದಿಕ ಸಂಪ್ರದಾಯದಲ್ಲಿ ಅನೂಚಾನವಾಗಿ ಬಂದಿದೆ. ವೇದಾಧ್ಯಯನ ವನ್ನು ಆರಂಭಿಸುವಾಗಲೂ ಮುಕ್ತಾಯಮಾಡುವಾಗಲೂ ಪ್ರಣವವನ್ನು ಉಚ್ಚರಿಸಬೇಕು. ಉಚ್ಚರಿಸದಿದ್ದರೆ ವೇದಾಧ್ಯಯನ ಸಿದ್ಧಿಸುವುದಿಲ್ಲವೆಂದು ಮನುಸ್ಮೃತಿ ೨.೭೪ರಲ್ಲಿ ತಿಳಿಸುತ್ತಿದೆ.

ಛಾಂದಾರ್ಚಿಕ ಗ್ರಂಥವು ಆಗ್ನೇಯ ಐನ್ದ್ರ ಪಾವಮಾನಗಳೆಂಬ ಕಾಂಡತ್ರಯಗಳನ್ನೊಳಗೊಂಡು ಆರಣ್ಯಕದೊಂದಿಗೆ ಆರು ಅಧ್ಯಾಯಗಳನ್ನೊಳಗೊಂಡಿದೆ. ಪ್ರಥಮಾಧ್ಯಾಯದಲ್ಲಿ ಹನ್ನೆರಡು ಖಂಡಗಳಿದ್ದು ಅದರ ಪ್ರಥಮಖಂಡದಲ್ಲಿ ಹತ್ತು ಋಕ್ಕುಗಳಿವೆ. ಅವುಗಳಲ್ಲಿ ಒಂದೊಂದಕ್ಕೂ ಕ್ರಮವಾಗಿ ವ್ಯಾಖ್ಯಾನ ಮಾಡಲಾಗುತ್ತದೆ. **ಅಗ್ನ ಆಯೇಹೀತ್ಯೇಷಾ** ಋಕ್ಕಿಗೆ ಋಷಿ ಭರದ್ವಾಜ, ಛಂದಸ್ಸು ಗಾಯತ್ರೀ, ದೇವತೆ ಅಗ್ನಿ, ಸಂಹಿತಾ ಲಕ್ಷಣವು **ಪರಃ ಸನ್ನಿಕರ್ಷಃ .... ಪಾರ್ಷದಾನಿ** ನಿರು. ೧.೧೭. ಎಂಬುದಾಗಿದೆ. ಮಂತ್ರದಲ್ಲಿರುವ ಪದಗಳನ್ನು ಸ್ವರ ವ್ಯಂಜನ ಸಹಿತ ಪುರಸ್ಸರವಾಗಿ ವ್ಯಾಕರಣ ನಿಯಮಾನು ಸಾರ ಅರ್ಥಕ್ಕೆ ಲೋಪವಾಗದಂತೆ ಕ್ರಮವಾಗಿ ಜೋಡಿಸಿ ಪಠಿಸುವ ಕ್ರಮವೇ ಸಂಹಿತೆ ಯಾಗಿರುತ್ತದೆ. ಪದಪ್ರಕೃತಿಃ ಸಂಹಿತಾ ಎನ್ನುವಾಗ ಕೆಲವರು ಪದಗಳು ಸಂಹಿತೆಗಳಿಗಿಂತ ಮೊದಲಿನವಾಗಿದ್ದು, ವ್ಯಾಕರಣ ನಿಯಮಾನುಸಾರ ಜೋಡಿಸಿದ ನಂತರ ಸಂಹಿತೆ ಯಾಗುವುದು ಆದುದರಿಂದ **'ಪದ ಪ್ರಕೃತಿ' 'ಸಂಹಿತೆ ವಿಕೃತಿ'** ಎಂದರೆ, ಅನ್ಯರ ಅಭಿಪ್ರಾಯದಲ್ಲಿ ಪದಗಳು ಪ್ರಕೃತಿಯಾಗಿ ಕಂಡರೂ ಬರೀ ಶಬ್ದಗಳಿಂದ ಯಾವ ಅರ್ಥವೂ ಆಗುವುದಿಲ್ಲವಾಗಿ ಅವು ಮೂಲವಲ್ಲ. ದ್ರಷ್ಟಾರರಾದ ಋಷಿಗಳಿಗೆ ಮನ್ತ್ರಗಳು ಸಂಹಿತಾ

ರೂಪವಾಗಿಯೇ ಗೋಚರಿಸಿದವು. ಅಧ್ಯಯನ ಅಧ್ಯಾಪನ ಕಾಲದಲ್ಲಿ ಮಂತ್ರಗಳನ್ನು ಸಂಹಿತಾ ರೂಪದಲ್ಲಿಯೇ ಪಠಿಸುವುದು ಪರಂಪರಗತವಾಗಿದೆ. ಯಜ್ಞಯಾಗಾದಿ ಕರ್ಮಗಳ ಅನುಷ್ಠಾನ ನೆರವೇರುವುದು ಸಂಹಿತಾ ರೂಪದಲ್ಲಿ ಪಠಿಸಿಯೇವಿನಾ ಪದಗಳನ್ನು ವಿಂಗಡಿಸಿ ಉಚ್ಚರಿಸುತ್ತಾ ಕರ್ಮಗಳನ್ನು ನೆರವೇರಿಸುವುದಿಲ್ಲ. ಆದುದರಿಂದ ಸಂಹಿತೆಯೇ ಪ್ರಕೃತಿಯಾಗಿದ್ದು ಪದವಿಭಾಗವು ವಿಕೃತಿಯಾಗಿರುತ್ತದೆ.

ಉಚ್ಚಾರಣಾದಿಕ್ರಮವನ್ನೂ ಸಂಧಿ ಮುಂತಾದ ನಿಯಮಗಳನ್ನೂ ಮಂತ್ರದ ಚರಣಾದಿಗಳನ್ನೂ ಬೋಧಿಸುವ ಲಕ್ಷಣ ಗ್ರಂಥವಾದ ಪ್ರಾತಿಶಾಖ್ಯೆ ಪ್ರಕಾರ ಪದಗಳನ್ನೇ ಪ್ರಕೃತಿಯೆಂದು ಪರಿಗಣಿಸುವುದು ತಪ್ಪಾಗದೆ ಅದು ಆ ವಿಶೇಷ ಸಂದರ್ಭದಲ್ಲಿ ಮಾತ್ರ ಮಾನ್ಯವಾದುದು ಎಂಬುದನ್ನು ಗಮನಿಸಬೇಕು. ಸಂಹಿತೆಯ ಅರ್ಥವನ್ನು ಅನುಸರಿಸಿ ಪದವಿಭಾಗ ಮಾಡಬೇಕಾಗಿರುವ ಸಂದರ್ಭದಲ್ಲಿ ಪದಗಳು ವಿಕೃತಿ ಎಂದು ಹೇಳುವುದೇ ಸಮಂಜಸವಾದದ್ದು. ಪೂರ್ವ ಋಷಿದ್ರಷ್ಟಾರರ ಅನುಭವವು ಅಭಿವ್ಯಂಜಿತವಾಗುವುದು ಸಂಹಿತೆಯಿಂದ ಮಾತ್ರ ಸಾಧ್ಯವಾಗಿರುವುದರಿಂದ ಸಂಹಿತೆಯೇ ಪ್ರಕೃತಿ ಅಥವಾ ಮೂಲಸ್ವರೂಪವಾಗಿರುತ್ತದೆ. ಅನೂಚಾನವಾಗಿ ಸಂಹಿತೆಯನ್ನೇ ಮೊದಲು ಅಧ್ಯಾಪನ ಮಾಡಿಸುತ್ತಾರೆ, ಕಲಿಸುತ್ತಾರೆ. ಬ್ರಾಹ್ಮಣರು ಅಧ್ಯಯನ ಮಾಡುತ್ತಾರೆ, ಕಲಿಯುತ್ತಾರೆ. ಕರ್ಮಗಳಲ್ಲಿ ಅನುಷ್ಠಾನಕ್ಕೆ ಉಪಯೋಗಿಸುತ್ತಾರೆ. ಪದಗಳೇ ಪ್ರಕೃತಿಯಾಗಿದ್ದರೆ ಪದಗಳನ್ನೇ ಅಧ್ಯಯನ ಮಾಡಿಸುತ್ತಿದ್ದರು. ಬ್ರಾಹ್ಮಣರು ಪದಗಳನ್ನೇ ಕಲಿತು ಅಧ್ಯಯನ ಮಾಡುತ್ತಿದ್ದರು. ಕರ್ಮಾನುಷ್ಠಾನಗಳಲ್ಲಿ ಉಪಯೋಗಿಸುತ್ತಿದ್ದರು. ಆದರೆ ಪದಗಳನ್ನೇ ಅಧ್ಯಯನ ಅಧ್ಯಾಪನ ಅನುಷ್ಠಾನಗಳಲ್ಲಿ ಬಳಸುತ್ತಿಲ್ಲ. **ಸಂಹತ್ಯ ಪಠಿತಾಃ ಮನ್ತ್ರಾಃ ಸಾ ಸಂಹಿತಾ** - ಪದಗಳನ್ನು ನಿಯಮಾನುಸಾರ ಪರಸ್ಪರ ಸೇರಿಸಿ ಪಠಿಸುತ್ತಿರುವುದೇ ಸಂಹಿತೆ ಎಂಬುದು ಸ್ಪಷ್ಟವಾದ ಅರ್ಥವಾಗಿದೆ.

ಸಾಮವೇದವು ಗ್ರಾಮೇಗೇಯಗಾನ ಆರಣ್ಯೇಗೇಯಗಾನ ಊಹಗಾನ ರಹಸ್ಯಗಾನಗಳೆಂದು ವಿಭಕ್ತವಾಗಿರುವ ಸಾಮಗಾನಸಂಹಿತೆಯನ್ನೂ ಇವಕ್ಕೆ ಆಧಾರಭೂತವಾದ ಋಕ್ ಮಂತ್ರಗಳಿರುವ - ಪೂರ್ವಾರ್ಚಿಕ ಮತ್ತು ಉತ್ತರಾರ್ಚಿಕಗಳೆಂದು ವಿಂಗಡವಾಗಿರುವ - ಛನ್ದಾರ್ಚಿಕ ಅಥವಾ ಸಾಮವೇದ ಋಕ್‌ಸಂಹಿತೆಯನ್ನೂ ಒಳಗೊಂಡಿದೆ. ಕನ್ನಡದಲ್ಲಿ ಮೈದಳೆದಿರುವ ಪ್ರಕೃತವಾದ ಸಾಮವೇದದ ಪ್ರಥಮಸಂಪುಟದಲ್ಲಿರುವ ಋಕ್‌ಮಂತ್ರಗಳೂ ಸಾಮಗಾನಗಳೂ ಅಗ್ನಿದೇವತೆಯ ಉಪಾಸನೆಗೆ ವಿನಿಯೋಗವಾಗಿದ್ದು **ಆಗ್ನೇಯಕಾಂಡ**ವೆಂಬ ಅಭಿಧಾನದಿಂದ ಪ್ರಸಿದ್ಧವಾಗಿದೆ.

೨೯೪

# ಅಗ್ನಿಯ ವೈಭವ

ಆಗ್ನೇಯ ಕಾಂಡದಲ್ಲಿ ಒಂದುನೂರ ಹದಿನಾಲ್ಕು ಋಕ್‌ಮನ್ತ್ರಗಳೂ ಇವುಗಳಿಂದ ಉದಯವಾಗಿರುವ ಒಂದುನೂರ ಎಂಬತ್ತು ಸಾಮಗಾನಗಳೂ ಇವೆ. ಇವುಗಳಲ್ಲಿ ಕೆಲವು ಅನ್ಯದೇವತಾತ್ಮಕವಾಗಿದ್ದರೂ ಹೆಚ್ಚಿನವು 'ಅಗ್ನಿ' ದೇವತಾತ್ಮಕವಾಗಿದ್ದು ಅಗ್ನಿಯ ಹುಟ್ಟು ಸ್ಥಾನ ರೂಪ ಕಾರ್ಯ ಸಾಮರ್ಥ್ಯ ಐಶ್ವರ್ಯಾದಿ ದಿವ್ಯಗುಣಗಳ ಸ್ತುತಿರೂಪವಾಗಿರುವುದರಿಂದ ಛತ್ರಿನ್ಯಾಯದಂತೆ ಇದಕ್ಕೆ ಆಗ್ನೇಯಕಾಂಡ ಅಥವಾ ಆಗ್ನೇಯಪರ್ವವೆಂಬ ಅಭಿಧಾನವಿದೆ. ಇದರಲ್ಲಿ ಕಾಣಬರುವ ಅಗ್ನಿಯ ವೈಭವವನ್ನು ಸಂಕ್ಷೇಪವಾಗಿ ಹೀಗೆ ಸಂಗ್ರಹಿಸಲಾಗಿದೆ.

ಅಗ್ನಿಯದು ಊರ್ಧ್ವಮುಖ ಔನ್ನತ್ಯದ ಸಂಕೇತ. ಪ್ರಗತಿಯ ದ್ಯೋತಕ ಪವಿತ್ರತೆಯ ಪ್ರತೀಕ. ತಾನು ಪವಿತ್ರನಾಗಿರುವುದರ ಜೊತೆಗೆ ತನ್ನಲ್ಲಿರಿಸಿದುದನ್ನೂ ಪವಿತ್ರಗೊಳಿಸುವ ಹೆಗ್ಗಳಿಕೆ ಅಗ್ನಿಯದಾಗಿದೆ. ಐಹಿಕ ಆಮುಷ್ಮಿಕ ಸುಖಸಂಪತ್ತಿನ ಒಡೆಯನಾದ ಅಗ್ನಿಯ ಪರಿಚರ್ಯೆಯನ್ನು ಮಾಡಿದ ಉಪಕೋಸಲನಿಗೆ ಬ್ರಹ್ಮೋಪದೇಶಮಾಡಿದ ಅಗ್ನಿಯ ಕರುಣೆ ವಾತ್ಸಲ್ಯ ಸಾಮರ್ಥ್ಯಗಳು - ಛಾಂ.ಉ.೪.೧೦.೩., ಕೇನ ೩.೩.೫ರಲ್ಲಿ ಪಠಿತವಾಗಿವೆ. ಇಂತಹ ದಿವ್ಯಗುಣಗಳಿಂದ ಪ್ರತ್ಯಕ್ಷವಾಗಿ ರಾರಾಜಿಸುತ್ತಿರುವ ಭೂಲೋಕಸ್ಥವಾಗಿರುವ ಅಗ್ನಿಯನ್ನು ಈ ಭಾಗದ ಋಕ್‌ಮನ್ತ್ರಗಳೂ ಸಾಮಗಾನಗಳೂ ಸಮಗ್ರ ಪ್ರತ್ಯಕ್ಷಪಡಿಸುತ್ತಿರುವ ರೀತಿ ಅನನ್ಯವಾಗಿದೆ ಹೃದಯಂಗಮವಾಗಿದೆ.

ಯಜ್ಞದಲ್ಲಿ ಬ್ರಹ್ಮಸ್ಥಾನದಲ್ಲಿರುವ ಅಥರ್ವರ ಸಮ್ಮುಖದಲ್ಲಿ ಋತ್ವಿಜರು ಊರ್ಧ್ವಾರಣಿ ಮತ್ತು ಅಧರಾರಣಿಗಳ ಮಥನದಿಂದ **ಜಾತವೇದಾಗ್ನಿಯನ್ನು** ಪಡೆದು ಹೋಮಕುಂಡದಲ್ಲಿ ಸ್ಥಾಪಿಸಿ ದಿನದಿನವೂ ಹವಿಸ್ಸನ್ನರ್ಪಿಸುತ್ತಾರೆ. ಇದರಿಂದ ಅಗ್ನಿಯು ಪ್ರಜ್ವಲಿಸಿ ಜಾಜ್ವಲ್ಯಮಾನವಾಗಿ ತೇಜಸ್ವಿಯೂ ಬಹುದೂರಗೋಚರನೂ ಪ್ರಶಂಸಾರ್ಹನೂ ಗೃಹಪತಿಯೂ ಆಗಿ ವಿಜೃಂಭಿಸುತ್ತಿದ್ದಾನೆ.

ಪೃಥ್ವೀ ಎಂಬ ಕೆಳಗಿನ ಅರಣಿ ಮತ್ತು ದ್ಯುಲೋಕವೆಂಬ ಮೇಲಿನ ಅರಣಿಯಿಂದ ದೇವತೆಗಳು **ವೈಶ್ವಾನರನೆಂಬ** ಅಗ್ನಿಯನ್ನುತ್ಪಾದಿಸಿ ಸಮಸ್ತ ಜೀವಜಾತದ ದೇಹಗಳಲ್ಲಿ ಸ್ಥಾಪಿಸಿದರು. ಪೃಥ್ವೀ ಎಂಬ ಕೆಳಗಿನ ಅರಣಿ ದ್ಯುಲೋಕವೆಂಬ ಮೇಲಿನ ಅರಣಿಯಿಂದ **ಸೂರ್ಯನೆಂಬ** ಅಗ್ನಿಯೂ ಮೋಡಗಳ ಪರಸ್ಪರ ಸಂಘರ್ಷಣ ರೂಪೀ ಮಥನದಿಂದ ಮಿಂಚು ಎನಿಸಿರುವ **ವೈದ್ಯುದಗ್ನಿಯೂ** ಸ್ತ್ರೀಪುರುಷರ ಸಮಾಗಮದಿಂದ **ಪುತ್ರರೂಪೀ** ಅಗ್ನಿಯೂ ವಿದ್ಯೆಯೆಂಬ ಅಧರಾರಣಿ ಮತ್ತು ಆಚಾರ್ಯರೆಂಬ ಉತ್ತರಾರಣಿಯಿಂದ ಜ್ಞಾನಾಗ್ನಿಯೂ ಉತ್ಪನ್ನವಾಗಿದ್ದು ಯಜ್ಞವು ಇವುಗಳೆಲ್ಲದರ ಪ್ರತೀಕವಾಗಿದೆ.

ಹೇ ಅಗ್ನಿ! ಸೋಮಪಾನಕೆನುತ್ತೆ ಮರುತರೊಡನೆ
ರಮಣೀಯಯಾಗಶಾಲೆಗೆ ಬರ್ಪ್ರುದೊಲ್ದು ಜವದಿಂ ।
ಸರ್ವಸಾಧಕನಲ್ತೆ ನೀನೆಂದು ಬೇಡುತಿರ್ಪೆಂ ।

## ಋಕ್ - ೧೭

ಶುನಃ ಶೇಪ ಆಜೀಗರ್ತಿಃ ॥ ಗಾಯತ್ರ್ಯಗ್ನಿಃ ॥

೨ ೩ ೨ ೩ ೧ ೨ ೩ ೧ ೨ ೩ ೧ ೨ರ
**ಅಶ್ವಂ ನ ತ್ವಾ ವಾರವನ್ತಂ ವನ್ದಧ್ಯಾ ಅಗ್ನಿಂ ನಮೋಭಿಃ ।**

೩ ೧ ೨ ೩ ೧ ೨
**ಸಮ್ರಾಜನ್ತಮಧ್ವರಾಣಾಮ್ ॥ ೭.೧೭ ॥**

೧ ೨ರ ೩ ೧ ೨ರ ೩ ೧ ೨ ೩ ೨ ೧ ೨ರ ೩ ೧ ೨
**ಅಶ್ವಮ್ - ನ - ತ್ವಾ - ವಾರವನ್ತಮ್ ॥ ವನ್ದಧ್ಯೈ - ಅಗ್ನಿಂ - ನಮೋಭಿಃ । ಸಮ್ರಾಜ**

೩ ೧ ೨ರ ೩ ೧ ೨
**ನ್ತಮ್ - ಸಮ್ - ರಾಜನ್ತಮ್ - ಅಧ್ವರಾಣಾಮ್ ॥ ೭.೧೭ ॥**

ಭಾರ್ಗವೇ ದ್ವೇ ॥ ವಾರವಂತೀಯಮ್ ॥ ದ್ವಯೋಃ ಭೃಗುಃ ಶುನಃ ಶೇಪೋ ವಾ ಗಾಯತ್ರ್ಯಗ್ನಿಃ ॥

೧ ೨^ ೩ರ ೫ ೧ ೨^ ೩ರ ೫
೧೭.೧. **ಆಶ್ವಾ । ಔಹೋ೭೨೩೪ವಾ । ನಾತ್ವಾ । ಔಹೋ೭೨೩೪ವಾ ॥**

೪ರ ೫ ೪ ೧ ೨ ೩ರ ೫ ೪ ೫ರ
**ವಾರವನ್ತಂವನ್ದಧ್ಯಾ । ಆಗ್ನಾ । ಔಹೋ೭೨೩೪ವಾ ॥ ನಮೋಭಿ**

೪ರ ೫ ೪ ೧ ೨ರ ೧ ೧ ೪ ೫
**ಸ್ಸಮ್ರಾಜನ್ತಾಮ್ ॥ ಆಧ್ವರಾಣಾಮ್ । ಔ೭೨೩ಹೋವಾ ।**

೪
**ಹೋ೭೫ಇ ॥ ಡಾ ॥** *ದೀ - ೭ । ಪ - ೧೨ । ಮಾ - ೩ । ಛ । ೨೮ ॥ ೨೮ ॥*

೪ ೫ ೪ ೫೦ ೪೦ ೫ ೪ ೨ ೧ ೦ ೦
೧೮.೨. ಅಶ್ವನ್ನತ್ವಾವಾರವನ್ತಾಮ್ ॥ ವನ್ದಧ್ಯಾ ಅಗ್ನಿನ್ನಮೋಭಾಇಃ ।

೨ ೧೦ ೨ ೧ ೨ ೩೦ ೪೦ ೫ ೧ ೩
ಸಮ್ರಾಜಮ್ । ತಮಾಧ್ವರಾ೩ಳ । ಔಹೋವಾ ॥ ಇಹಾ೨೩ಳ

೫ ೩೦ ೨ ^ ೩ ೫೦ ೦ ೩ ೧೧
ಹಾಇ । ಔಹೋ೩೧೨ ॥ ಯಾ೨೩ಳ ಔಹೋವಾ ॥ ಣಾ೨೩ಳ

೧
ಶಿಮ್ ॥ *ದೀ - ೧೦ । ಪ - ೯ । ಮಾ - ೭ । ಭೇ । ೨೯ । ೨೯ ॥*

ವಾರವನ್ತೀಯಮ್ ॥ ಇಂದ್ರೋ ಗಾಯತ್ರ್ಯಶ್ವಃ ॥

೫ ೦ ೦ ೪ ೫ ೨ ೧ ೩ ೫ ೨ ೧
೧೮.೩. ಅಶ್ವನ್ನತ್ವಾಔಹೋಹಾಇ ॥ ವಾರಾವಾ೨೩ಳನ್ತಾಮ್ । ವಂದಾ

೫ ೧ ೨ ^ ೩ ೪೦ ೫ ೧ ೩
ದ್ಧ್ಯಾ೨೩ಳಹಾಇ । ಅಗ್ನಾಇನ್ನಮಾ೨೩ಳ । ಔಹೋವಾ । ಇಹಾ೨

೫ ೨ ^ ೩ ೫ ೨ ೧೦ ೨ ೧ ೬
೩ಳಹಾಇ । ಉಹುವಾ೨೩ಳಭೀಃ ॥ ಸಮ್ರಾಜ । ತಾ೨ಮ

೨ ೩೦ ೪೦ ೫ ೧ ೩ ೫ ೩೦ ೨ ^
ಧ್ವರಾ೩ಳ । ಔಹೋವಾ ॥ ಇಹಾ೨೩ಳಹಾಇ । ಔಹೋ೩೧

೫೦ ೫ ೪
೨೩ಳ । ಣಾಮ್ । ಏಹಿಯಾ೬ಹಾ । ಹೋ೫ಇ ॥ ಡಾ ॥

*ದೀ - ೯ । ಪ - ೧೬ । ಮಾ - ೧೦ । ತೌ । ೩೦ । ೩೦ ॥*

ಅಧ್ವರಾಣಾಮ್ ಯಜ್ಞಾನಾಮ್ **ಸಮ್ರಾಜನ್ತಮ್** ತಂ ಸಮ್ರಾಟಸ್ವರೂಪಂ ಸ್ವಾಮಿನಮ್ ಅಗ್ನಿಮ್ ತ್ವಾಂ, **ನಮೋಭಿಃ** ಸ್ತುತಿಭಿಃ **ವಂದಧ್ಯೈ** ವನ್ದಿತುಮ್ ಪ್ರವೃತ್ತಾಃ ಇತಿಶೇಷಃ । ಅಗ್ನೇರ್ದೃಷ್ಟಾಂತಃ **ವಾರವನ್ತಮ್** ವಾಲಯುಕ್ತಮ್ । **ಅಶ್ವಂ** ನ ಅಶ್ವಮಿವ । ಅಶ್ವೋ ಯಥಾಬಾಲೈರ್ವ್ಯಥಕಾನ್ ಮಶಕಮಕ್ಷಿಕಾದೀನ್ ಪರಿಹರತಿ ತಥಾತ್ವಮಪಿ ಜ್ವಾಲಾಭಿರಸ್ಮದ್ವಿರೋಧಿನಃ ಪರಿಹರಸೀತ್ಯರ್ಥಃ ॥

**ವಾರವಂತಮ್** - ಬಾಲವಿರುವ, ದುಃಖನಿವಾರಕ, **ಅಶ್ವಂ ನ** - ಕುದುರೆಯಂತೆ, ಸೂರ್ಯನಂತೆ, **ತ್ವಾಂ ಅಗ್ನಿಂ** - ಪರಮೇಶ್ವರನಾದ ನಿನ್ನನ್ನು, **ನಮೋಭಿಃ** - ನಮಸ್ಕಾರಗಳಿಂದ ಸ್ತುತಿಗಳಿಂದ, **ವಂದಧ್ಯೈ** - ವಂದಿಸುತ್ತೇನೆ, **ಅಧ್ವರಾಣಾಮ್** - ಯಜ್ಞಗಳ, **ಸಮ್ರಾಜನ್ತಮ್ - ಸಮ್ಯಗ್‌ದೀಪ್ತಾಮ್** - ಚಕ್ರವರ್ತಿಯಂತೆ ರಾರಾಜಿಸುವ.

ಯಜ್ಞಗಳ ಚಕ್ರವರ್ತಿಯಾದ ಅಗ್ನಿಯೇ! ಕುದುರೆಯು ತನ್ನ ಬಾಲದಿಂದ ತನ್ನನ್ನು ಹಿಂಸಿಸುವ ನೊಣ ಸೊಳ್ಳೆಗಳನ್ನು ಓಡಿಸುವಂತೆ ನಿನ್ನ ಜ್ವಾಲೆಯಿಂದ ನನ್ನ ಶತ್ರುಗಳನ್ನು ಓಡಿಸು ಅಥವಾ ಸೂರ್ಯನು ಅಂಧಕಾರವನ್ನು ನಿವಾರಿಸುವಂತೆ ಕಾಮಕ್ರೋಧಾದಿ ತಮೋಗುಣಗಳನ್ನು ನಿವಾರಿಸು ಎಂದು ಸ್ತುತಿಸುತ್ತಾ ನಮಸ್ಕಾರಪೂರ್ವಕವಾಗಿ ವಂದಿಸುತ್ತೇನೆ.

*ಭಾನುವಂದದೆ ತಮವನಳಿಸುವನೆ! ಹೇ ಅಗ್ನಿಯೇ!*
*ನಿರ್ವಿಘ್ನಮೆನಲಹಿಂಸಾಯಜ್ಞಮಿದು ಸಾಗುವ್ರೋಲ್*
*ಬಂದಿಲ್ಲಿ ನೆಲಸು ನೀಂ, ನಮಿಪೆವಾವೆಲ್ಲ ನಯದಿಂ ॥*

ಪಾಠಾಂತರ : *ಪುಚ್ಛದಿಂದಶ್ವಂ ಕ್ರಿಮಿಸ್ತೋಮಮಂ ಸದೆವವ್ರೊಲ್*
*ಹೇ ಅಗ್ನಿ! ನಮ್ಮ ರಿಪುಗಳನಟ್ಟಿ ನೀಂ ಯಜ್ಞದೊಳ್ ।*
*ಸಮ್ರಾಜನಂದದೊಳ್ ನೆಲಸಿ ಸಲಪುವುದು ದಯೆಯಿಂ ॥*

## ಋಕ್ - ೧೮

ಪ್ರಯೋಗೋ ಭಾರ್ಗವಃ ॥ ಗಾಯತ್ರ್ಯಗ್ನಿಃ ॥

೩ ೧ ೨ರ ೩ ೧ ೨ರ
**ಔರ್ವಭೃಗುವಚ್ಛುಚಿಮಪ್ನವಾನವದಾಹುವೇ ।**

೩ ೧ ೨ ೩ ೧ ೨
**ಅಗ್ನಿಜ್ ಸಮುದ್ರವಾಸಸಮ್ ॥** *೮.೧೮ ॥*

೩ ೨ ೩ ೨ ೧ ೨೧ ೨ ೩
ಔರ್ವಭೃಗುವತ್ - ಔರ್ವ - ಭೃಗುವತ್ - ಶುಚಿಮ್ । ಅಪ್ನವಾನವತ್ - ಆ - ಹು

೩ ೨ ೩ ೧ ೨ ೩ ೨ ೩
ವೇ ॥ ಅಗ್ನಿಮ್ - ಸಮುದ್ರವಾಸಸಮ್ - ಸಮುದ್ರ - ವಾಸಸಮ್ ॥ *೮.೧೮* ॥

ಸಾಮುದ್ರೇ ದ್ವೇ ॥ ಸಮುದ್ರಸ್ಯ ವಾಸೋ ವಾ ॥ ಔರ್ವಃ, ದ್ವಯೋರಗ್ನಿಃ ॥ ಗಾಯತ್ರ್ಯಗ್ನಿಃ ॥

೫ರ ೪ ೩ ೫ ೧ ೨ರ
೧೮.೧. ಔರ್ವಭೃಗುವತ್ । ಓಹಾಇ ॥ ಶೂ೨೩೪ಚೀಮ್ । ಆಪ್ನವಾನ ।

— ೧ — ೧ ೨೧ — ೧
ವದಾ೨ಹುವಾ೨ಇ । ಹುವಓಇ ॥ ಅಗ್ನಾ೨ಇಜ್‌ಸಮೂ

— ೧ ೨ ೧ ೨ ೧ ೨ ^೧೧೧
೨ ॥ ಸಮುಓ ॥ ದ್ರವಾಸಸಾ೩೧೮ವಾ೨೩೪೫ ॥

*ದೀ - ೨ । ಪ - ೯ । ಮಾ - ೯ । ಝೋ । ೩೧ । ೩೧ ॥*

ವೈಧಾರಯ ಋಷಿರ್ವಾ ॥

೫ರ ೪ ೫ ೪ ೪ ೧ ೨ರ
೧೮.೨. ಔರ್ವಭೃಗುವಚ್ಛುಚಿಮ್ । ಏ೫ । ಶುಚೀಮ್ ॥ ಆಪ್ನವಾನ ।

೧ ೨ ೧ ೨ ೩ ೨ ೧
ವದಾ೨೩ಹುವಾಇ । ಹುವಾ೨೩ಇ । ಹುವಏ ॥ ಅಗ್ನಾಇಜ್

೨^ ೨ ೧ ೨ ೩ ೨ ೧ ೧ ೩
ಸಾ೩ಮೂ ॥ ಸಮೂ೨೩ । ಸಮುಏ೩ । ದ್ರಾ೨ವಾ೨೩೪

೫ರ ರ ೨ ೧ ೧೧೧
ಔಹೋವಾ ॥ ಸಸಾ೩ಮೇ೨೩೪೫ ॥

*ದೀ - ೪ । ಪ - ೧೨ । ಮಾ - ೮ । ಥೈ । ೩೨ । ೩೨ ॥*

**ಸಮುದ್ರಾವಾಸಸಮ್** ಸಮುದ್ರ ಮಧ್ಯವರ್ತಿನಮ್ ಬಾಡವಂ **ಶುಚಿಮ್** ಶುದ್ಧಮ್, ಅಗ್ನಿಮ್ **ಔರ್ವಭೃಗುವತ್** ಯಥಾ ಔರ್ವಭೃಗುಃ **ಅಪ್ನವಾನವತ್** ಯಥಾ ಅಪ್ನವಾನಃ ತಥಾ **ಆಹುವೇ** ಅಹಮಾಹ್ವಯಾಮಿ ॥

**ಔರ್ವಭೃಗುವತ್** - ಭೃಗುಗೋತ್ರೋತ್ಪನ್ನನಾದ ಔರ್ವ ಮಹರ್ಷಿಯಂತೆ, ಜ್ಞಾನ ನಿಷ್ಠ ವಿದ್ವಾಂಸನಂತೆ, **ಅಪ್ನವಾನವತ್** - ಅಪ್ನವಾನ ಮಹರ್ಷಿಯಂತೆ, ಕರ್ಮನಿಷ್ಠ ಕುಶಲ ಕರ್ಮಿಯಂತೆ **ಸಮುದ್ರವಾಸಸಂ** - ಸಮುದ್ರದಲ್ಲಿ ನೆಲಸಿರುವ ಆಕಾಶವ್ಯಾಪಿ, ವೈದ್ಯುತಾತ್ಮಾ, *ಋ.ಸಂ.೧೦.೯.೮೫.*, **ಶುಚಿಮ್** - ಶುದ್ಧನಾದ, **ಅಗ್ನಿಮ್** - ಅಗ್ನಿಯನ್ನು, **ಆಹುವೇ** - ಆಹ್ವಾನಿಸುವೆ, ಸ್ತುತಿಸುವೆ.

ಜ್ಞಾನನಿಷ್ಠ ಭೃಗುಗೋತ್ರೋತ್ಪನ್ನನಾದ ಔರ್ವ ಮಹರ್ಷಿಯಂತೆ, ಕರ್ಮನಿಷ್ಠನಾದ ಅಪ್ನವಾನ ಋಷಿಯಂತೆ, ಸಮುದ್ರದಲ್ಲಿ ನೆಲೆಸಿರುವ ಶುಚಿಯಾದ ಬಡಬಾಗ್ನಿಯನ್ನು ಸ್ತುತಿಸುತ್ತೇನೆ.

*ಬಡಬಾಗ್ನಿಯೆನೆ ಶರಧಿಗರ್ಭದೊಳ್ ಬೆಳಗುವವನೇ!*
*ಅಪ್ನವಾನ್‌ಭೃಗುಮಹರ್ಷಿಗಳಿಂದೆ ಶುದ್ಧಮನದಿಂ*
*ಸನ್ನುತನೆ! ನಮ್ಮೀ ಹೃದಯಪೂರ್ಣನುತಿಯಿದೋ ಕೊಳ್!*

## ಋಕ್ - ೧೯

ಪ್ರಯೋಗೋಭಾರ್ಗವಃ ॥ ಗಾಯತ್ರ್ಯಗ್ನಿಃ ॥

೩ ೧ ೨ ೩ ೧ ೨೦ ೩ ೧ ೨ ೩ ೧ ೨
**ಅಗ್ನಿಮಿನ್ಧಾನೋ ಮನಸಾ ಧಿಯಜ್ ಸಚೇತ ಮರ್ತ್ಯಃ ।**

೩ ೧ ೨ ೩ ೧ ೨
**ಅಗ್ನಿಮಿನ್ಧೇ ವಿವಸ್ವಭಿಃ ॥** *೯.೧೯* ॥

೩ ೨ ೩ ೨ ೧ ೨೦ ೧ ೨೦ ೩ ೧ ೨೦ ೩ ೨
**ಅಗ್ನಿಮ್ - ಇನ್ಧಾನಃ - ಮನಸಾ ॥ ಧಿಯಮ್ - ಸಚೇತ - ಮರ್ತ್ಯಃ ॥ ಅಗ್ನಿಮ್ -**

೩ ೩ ೧ ೨೦ ೩ ೧ ೨೦
**ಇನ್ಧೇ - ವಿವಸ್ವಭಿಃ - ವಿ - ವಸ್ವಭಿಃ ॥** *೯.೧೯* ॥

ಅಸಂಗಮ್ ॥ ಆಸಂಗಃ ॥ ಅತ್ರಿರ್ಗಾಯತ್ರ್ಯಗ್ನಿಃ ॥

೫೪೫ ೦ ೪೦ ೫೦ ೪೦ ೫ ೩ ೪
೧೯.೧. **ಅಗ್ನಿಮಿನ್ಧಾನೋಮನಸೌ । ಹೌಹೋವಾಹಾಇ ॥ ಧಿಯಜ್**

೫೦ ೦ ನ ೨ ^ ೧
**ಸಚೇತಮೌ । ಹೋಽಇಹಾಽಇ ॥ ಹೋಽ೨ಇ೪ರ್ತ್ಯಾಃ ॥**

೧ ೨ ^ ೧ ೩ ೫೦ ೦ ೨ ೧
**ಅಗ್ನಾಯೇಽಇಮ್ । ಆಽ೨ಇಂಧಾಽ೨ಇ೪ಔಹೋವಾ ॥ ವಿವ**

೩ ೧೧೧
**ಸ್ವಭೀಽ೨ಇ೪೫ಃ ॥**

*ದೀ - ೮ । ಪ - ೮ । ಮಾ - ೬ । ಡೂ । ೩೩ । ೩೩ ॥*

**ಮರ್ತ್ಯಃ** ಮನುಷ್ಯೋಽಗ್ನಿಮಿಂಧಾನಃ ಕಾಷ್ಠೈಃ ಪ್ರಜ್ವಲಯನ್ ಮನಸಾ ಏವ ಶ್ರದ್ಧಧಾನಃ **ಧಿಯಂ** ಕರ್ಮ **ಸಚೇತ** ಕಾಲೇಭಜೇತ । **ವಿವಸ್ರಭಿಃ** ಋತ್ವಿಗ್ಭಿಶ್ಚ ಅಗ್ನಿಮ್ - ಏವ **'ಇನ್ಧೇ'** ಪ್ರಜ್ವಲಯತಿ । ಬಹ್ವೃಚಾನಾಮ್ ಈ**ನ್ಧೇ** ಇತಿ ಪಾಠಃ ॥

**ಮರ್ತ್ಯಃ** - ಮನುಷ್ಯನು, **ಅಗ್ನಿಂ** - ಅಗ್ನಿಯನ್ನು ಪರಮಾತ್ಮನನ್ನು, **ಇನ್ಧಾನಃ** - ಕಟ್ಟಿಗೆಗಳಿಂದ, ಸಮಿತ್ತುಗಳಿಂದ, **ಧಿಯಮ್** - **ಧೀರಿತಿ ಕರ್ಮನಾಮ**, ಕರ್ಮವನ್ನು ಬುದ್ಧಿ ಪೂರ್ವಕವಾಗಿ, ಜ್ಞಾನಪೂರ್ವಕವಾಗಿ, **ಮನಸಾ** - ಮನಃಪೂರ್ವಕವಾಗಿ, ಶ್ರದ್ಧೆ ಯಿಂದ, **ಸಚೇತ** - ಕಾಲಕಾಲದಲ್ಲಿ, ಸೂಕ್ತ ಸಮಯದಲ್ಲಿ, ಜಾಗರೂಕತೆಯಿಂದ, ನೆರವೇರಿ ಸುವುದು, **ವಿವಸ್ವಭಿಃ** - ಋತ್ವಿಜರ ಮುಖಾಂತರ, ಹವಿಸ್ಸುಗಳಿಂದ ಸೂರ್ಯ ಕಿರಣದ ಮೂಲಕ, ಜ್ಞಾನಜ್ಯೋತಿಯಿಂದ, **ಅಗ್ನಿಮಿನ್ಧೇ** - ಅಗ್ನಿ ಯನ್ನು ಪ್ರಜ್ವಲಿಸಲಿ.

ಮನಃಪೂರ್ವಕವಾಗಿ ಕಾಲಕಾಲಕ್ಕೆ ಕರ್ಮದ ಸಂಕೇತವಾದ ಅಗ್ನಿಪರಿಚರ್ಯೆ ಯನ್ನು ಸ್ಪಷ್ಟವಾಗಿ ತಿಳಿದು ಮಾಡುವುದರಿಂದ ಶ್ರದ್ಧೆಯು ಉದಯವಾಗಿ ಜ್ಞಾನಪ್ರಕಾಶವು ಸೂರ್ಯಕಿರಣದಂತೆ ಹರಡುತ್ತದೆ.

*ಮನವಾರೆ ನಿನ್ನನಾಂತರ್ಯದೊಳ್ ಬೆಳಗಿಸುತ್ತುಂ*
*ನೆನವ ಸಾಧಕನಾತ್ಮಶ್ರದ್ಧೆಯಂ ಬೆಳಗಿಸುವನಯ್ ।*
*ಸೂರ್ಯಕಿರಣದಿನಗ್ನಿಹೋತ್ರಮಂ ಸಾಧಿಸುವನಯ್ ॥*

## ಋಕ್ - ೨೦

ವತ್ಸಃ ಕಾಣ್ವಃ ॥ ಗಾಯತ್ರ್ಯಗ್ನಿಃ ॥

೨ಉ   ೩ ೨ ೩   ೧ ೨ ೩   ೧   ೨   ೩ ೨
**ಆದಿತ್ಪ್ರತ್ನಸ್ಯ ರೇತಸೋ ಜ್ಯೋತಿಃ ಪಶ್ಯನ್ತಿ ವಾಸರಮ್ ।**

೩ ೨ಉ   ೩ ೧ ೨   ೩ ೨
**ಪರೋಯದಿಧ್ಯತೇ ದಿವಿ ॥** *೧೦.೨೦ ॥*

*ಸ್ವ - ೬ । ಉ - ೨ । ಧಾ - ೫೨ ॥ ಖಾ । ದ - ೨ ॥*

೨   ೩ ೧ ೨   ೧ ೨ರ   ೧   ೨ರ   ೩   ೨   ೩
**ಆತ್ - ಇತ್ - ಪ್ರತ್ನಸ್ಯ - ರೇತಸಃ । ಜ್ಯೋತಿಃ - ಪಶ್ಯನ್ತಿ - ವಾಸರಮ್ ॥ ಪ**

೨   ೩ ೧ ೨   ೩ ೨
**ರಃ - ಯತ್ - ಇದ್ಧ್ಯತೇ - ದಿವಿ ॥** *೧೦.೨೦ ॥*

*ಆ - ೩೩ । ಅ - ೧೩ । ಪ - ೧೧೯ ॥ ಡೋ ॥ ದ - ೨ ॥*

**ಇತಿ ದ್ವಿತೀಯಾದಶತಿಃ ॥ ೨ ॥ ದ್ವಿತೀಯಃ ಖಣ್ಡಃ ॥ ೨ ॥**

ನಿಧನ ಕಾಮಮ್ ॥ ಪ್ರಜಾಪತಿರ್ಗಾಯತ್ರ್ಯಗ್ನಿಃ ॥

೪ರ   ರ ೪   ೧ರ   ರ   — ೧
**೨೦.೧. ಆದಿತ್ಪ್ರತ್ನಾಽ೫ಸ್ಯರೇತಸಾಃ ॥ ಜ್ಯೋತಿಃಪಶ್ಯನ್ತಿವಾಸಾಽ೨ರಾಮ್ ॥**

೨೧ರ   — ೧   ೨೧   ೨ರ ೧ರ
**ಪರೋಯಾಽ೨ದಿಧ್ಯತಾಇ ॥ ದಿವಿ । ಹೋಇ । ಹೋಇ । ಔಹೋ**

೨ರ ೧   ೧೧೧
**ಔಹೋವಾಽ೨೩೪೫ಹಾಉ ॥ ವಾ ॥**

*ದೀ - ೮ । ಪ - ೮ । ಮಾ - ೭ ॥ ಡೇ ॥ ೩೪.೩೪ ॥*

**ಪಞ್ಚದಶಃ ॥ ದ್ವಿತೀಯಃ ಖಣ್ಡಃ ॥ ೨ ॥ ದ್ವಿತೀಯಾ ದಶತಿಃ ॥**

**ಇತಿ ಗ್ರಾಮೇಗೇಯಗಾನೇ 'ಪ್ರಥಮಸ್ಯಾರ್ದ್ಧಃ' ಪ್ರಪಾಠಕಃ ॥**

**ಪರೋದಿವಿ** ದಿವಃ ಪರಸ್ತಾತ್ ವ್ಯತ್ಯಯೇನ ಸಪ್ತಮೀ ೩.೪.೮೮ / ಬಹ್ವೃಚಾನಾಮ್ ದಿವೇತಿ ತೃತೀಯಾನ್ತೇನ ವ್ಯತ್ಯಯಃ । ದಿವಿ ದ್ಯುಲೋಕಸ್ಯೋಪರಿ **ಯದ್** ಯದಾ । ಅಯಂ ವೈಶ್ವಾನರೋಽಗ್ನಿಃ ಸೂರ್ಯಾತ್ಮನಾ **ಇದ್ಧ್ಯತೇ** ದೀಪ್ಯತೇ **ಆದಿತ್** ಅನಂತರ ಮೇವ **ಪ್ರತ್ನಸ್ಯ** ಚಿರಂತನಸ್ಯ **ರೇತಸಃ** ಗಂತುಃ **ರೀ ಗತಿ**ರೇಷಣಯೋಃ ಅಸ್ಮಾತ್ ಸುರೀಭ್ಯಾಂ ತುಡಘು ವೇತ್ಯತುಸುನ್ ತುಡಾಗಮಶ್ಚ । ಯದ್ವಾರೇತಸ ಇತ್ಯುದಕನಾಮ - *ನಿ.೧.೧೨.೧೬* // ರೇತಸ್ವಿನ ಉದಕವತಃ ಸಾಮರ್ಥ್ಯಾನ್ಮತ್ವರ್ಥೋಽ ಲಕ್ಷ್ಯತೇ ಈದೃಶಸ್ಯೇನ್ದ್ರಸ್ಯ ಸೂರ್ಯಾತ್ಮನಃ **ವಾಸರಂ** ನಿಯಾಮಕಂ ವಾಸರಸ್ಯ ನಿವಾಸಹೇತುಭೂತಂ ವಾ **ಜ್ಯೋತಿಃ** ದ್ಯೋತಮಾನಂ ತೇಜಃ **ಪಶ್ಯಂತಿ** ಸರ್ವೇಜನಾಃ ಯದ್ವಾ **ವಾಸರ**ಮಿತ್ಯತ್ಯನ್ತ ಸಂಯೋಗೇ ದ್ವಿತೀಯಾ - *೨.೩.೫* ಕೃತ್ಸ್ನಮಹಃ ಉದಯಪ್ರಭೃತ್ಯಾಸ್ತಮಯಾತ್ **ಜ್ಯೋತಿಃ ಪಶ್ಯಂ**ತೀತ್ಯರ್ಥಃ । **ಇಸುಸೋಃ** ಸಾಮರ್ಥ್ಯೇ ಇತಿ ವಿಸರ್ಜನೀಯಸ್ಯಷತ್ವಮ್ ॥

ಇಯಮ್ ಆಸನ್ನಮರಣೇ ಜಪ್ಯೇತಿ ಶ್ರೂಯತೇ ॥ ಐ. ಆರ.೩. ೨.೪.೮ ॥ ಪುರುಷಯಜ್ಞದ ದೀಕ್ಷಾದಿಗಳನ್ನು ತಿಳಿದ ಮನ್ತ್ರವಿದನು - ಪ್ರಾಣಾದಿತ್ಯರನ್ನು ಏಕೀಭವಿಸಿ ಈ ಮನ್ತ್ರದಲ್ಲಿ ಸೂಚಿಸಿರುವ ಆದಿತ್ಯಸ್ವರೂಪವನ್ನರಿತು ನಿಃಸ್ಪೃಹನಾಗುತ್ತಾನೆ - ಛಾಂ. ಉ.೩. ೧೭. ೭.

**ದಿವಿ** - ದ್ಯುಲೋಕದಲ್ಲಿ, ಆಕಾಶದಲ್ಲಿ, **ಇಧ್ಯತೇ** - ದೀಪ್ತವಾಗುತ್ತದೆ, ಹೊಳೆಯುತ್ತದೆ, **ಆದಿತ್** - ಆಗಲೇ, **ಅತ್ ಇತ್** - ಅನಂತರ, **ಯತ್** - ಯಾವಾಗ, **ರೇತಸಃ** - ಗತಿಶೀಲನಾದ ಸೂರ್ಯನ, ವೀರ್ಯವತ್ತಾದ, ಸಾಮರ್ಥ್ಯಶಾಲೀ ಭಗ ವಂತನ, **ಪ್ರತ್ನಸ್ಯ** - ಚಿರಂತನದ, ಸನಾತನದ, ನಿತ್ಯಸ್ವರೂಪದ, **ಪರಃ** - ಅತಿಶಯ ವಾದ, **ಜ್ಯೋತಿಃ** - ಪ್ರಕಾಶಮಾನ ತೇಜಸ್ಸು, **ವಾಸರಮ್** - ದಿನವೆಲ್ಲಾ, **ಪಶ್ಯಂತಿ** - ನೋಡುತ್ತಾರೆ.

ಆಕಾಶವು ಹೊಳೆಯುತ್ತಿದ್ದಂತೆಯೇ ಸಾಮರ್ಥ್ಯಶಾಲಿಯಾದ ಸೂರ್ಯ ಭಗವಂತನ ಅತಿಶಯ ಪ್ರಕಾಶಮಾನವಾದ ಚಿರಂತನ ಸ್ವರೂಪವನ್ನು ದಿನವೆಲ್ಲಾ ದರ್ಶನ ಮಾಡುತ್ತಾರೆ.

ನಮ್ಮ ಆತ್ಮ ಜ್ಯೋತಿಯೇ ಸೂರ್ಯನ ಬೆಳಕಿನಂತೆ ಎಲ್ಲೆಲ್ಲಿಯೂ ಹರಡಿರುವ ಆ ಬ್ರಹ್ಮನ ತೇಜಸ್ಸನ್ನು ನಿವೃತ್ತ ಚಕ್ಷುಷರಾದ ಬ್ರಹ್ಮಜ್ಞಾನಿಗಳು ಬ್ರಹ್ಮಚರ್ಯಾದಿ ನಿವೃತ್ತ ಸಾಧನಗಳಿಂದ ಶುದ್ಧಾಂತಃಕರಣರಾಗಿ ಎಲ್ಲೆಲ್ಲಿಯೂ ಕಾಣುತ್ತಾರೆ - *ಮುಂ. ಉ.೨.೨.೧೦.*

ಆ ದ್ಯುಲೋಕದ ದೇವನಂ ಬಾನೊಳೆಸೆವ ರವಿಯಂ
ಎಲ್ಲಮಂ ಮೀರ್ದ ಪರಮಾತ್ಮನಂ ಚಿಜ್ಜ್ಯೋತಿಯಂ ।
ಕಾಂಬನಲ್ತೆ ಭವತ್ಪ್ರಸಾನ್ವಿತಂ ಮಂತ್ರವೇತ್ತ್ರಂ ॥

## ಋಕ್ - ೨೧

ಪ್ರಯೋಗೋ ಭಾರ್ಗವಃ ॥ ಗಾಯತ್ರ್ಯಗ್ನಿಃ ॥

೩ ೧ ೨ ೩ ೧ ೨ ೩ ೧ ೨ ೩ ೧ ೨
**ಅಗ್ನಿಂ ವೋ ವೃಧನ್ತಮಧ್ವರಾಣಾಂ ಪುರೂತಮಮ್ ।**

೨ ೩ ೨ ೩ ೧ ೨
**ಅಚ್ಛಾ ನಪ್ತ್ರೇ ಸಹಸ್ವತೇ ॥ ೧.೨೧ ॥**

೩ ೨ ೩ ೩ ೧ ೩ ೩ ೧ ೨ ೩ ೧ ೨ ೧ ೨೦ ೧
**ಅಗ್ನಿಮ್ - ವಃ - ವೃಧನ್ತಮ್ । ಅಧ್ವರಾಣಾಮ್ - ಪುರೂತಮಮ್ । ಅಚ್ಛ - ನ**

೨೦ ೧ ೨೦
**ಪ್ತ್ರೇ - ಸಹಸ್ವತೇ ॥ ೧.೨೧ ॥**

ಸೈಂಧುಕ್ಷಿತಾನಿ ತ್ರೀಣಿ ॥ ತ್ರಯಾಣಾಂ ಸಿಂಧುಕ್ಷಿದ್ಗಾಯತ್ರ್ಯಗ್ನಿಃ ॥ ಸ್ವಾರಂ ಸೈಂಧುಕ್ಷಿತಮ್ ॥

೫ ೦ ೪ ೫ ೧ ೨೦ ೦ ೧ ೨೦
**೨೧.೧. ಅಗ್ನಿಂ ವೋ ವೃಧಾನ್ತಾಮ್ ॥ ಆಧ್ವರಾಣಾಮ್ । ಪುರೂತಾಮೌ ।**

೦ ೨ ೧ __ ೧ ೨ ೧
**ಹೋವಾಽ೩ಹಾಇ ॥ ಆಚ್ಛಾಽ೨ನಾಪ್ತ್ರೇಽ೨೩ ॥ ಸಹೋಽ೨೩೪**

೫ ೪ ೫
**ವಾ ॥ ಸ್ವಾಽ೫ತೋಽ೬ಹಾಇ ॥**

ದೀ - ೫ । ಪ - ೭ । ಮಾ - ೪ । ಫೀ । ೧ । ೩೫ ॥

೫ ೫ ೨ ೧ ೦ ೦ ೦
**೨೧.೨. ಅಗ್ನಿಂವಾಽ೬ಪಿ ॥ ವೃಧನ್ತಾಮ್ । ಅಧ್ವರಾಣಾಮ್ ಪುರೂತಮ**

೨ ೧
**ಮಚ್ಛಾಽ೨ಹೋಽ೧ಇ ॥ ನಾಽ೨೩ಪ್ತ್ರೇ ॥ ಸಹಾಸ್ವಾಽ೨೩೪೫**

೩ ೫
**ತಾಽ೬೫೬ಇ ॥ ಈಽ೨೩೪ತೀ ॥**

*ದೀ - ೩ / ಪ - ೬ / ಮಾ - ೪ / ದೀ / ೨ /* ***೩೬*** *//*

**ಐಡಂ ಸೈಂಧುಕ್ಷಿತಮ್ ॥**

೫೪ ೫ ೪ ೧ ೨ ೧ ೦ ೦
೨೧.೩. **ಅಗ್ನಿಂ ವಃ । ಓಹಾಇ ॥ ವೃಧಾಽ೨೩ನ್ತಾಮ್ । ಅಧ್ವರಾಣಾಮ್ ।**

೨ ೨ ೨ ೦ ೩ ೫ ೧ ೨
**ಪುರೂಽ೧ತಾಽ೩ಮಾಮ್ ॥ ಅಚ್ಛಾನಪ್ತ್ರೋಽ೨೩೪ಹಾಇ ॥ ಸಾಹಾ**

೨ ೧ ೨ ೪ ೫: ೪
**ಽ೩ಹಾ । ಸ್ವತಾ । ಔಽ೩ಹೋವಾ । ಹೋಽ೫ಇ ॥ ಡಾ ॥**

*ದೀ - ೩ / ಪ - ೧೦ / ಮಾ - ೬ / ಣೂ / ೩ /* ***೩೭*** *//*

**ಅಧ್ವರಾಣಾಮ್** ಅಹಿಂಸ್ಯಾನಾಮ್ **ಬಲಿನಾಮ್** । **ನಪ್ತ್ರೇ** ಬಂಧುಮ್ । **ಸಹಸ್ವತೇ** ಬಲವನ್ತಮ್ । ವಿಭಕ್ತಿವ್ಯತ್ಯಯಃ **ವೃಧನ್ತಮ್** ಜ್ವಾಲಾಭಿರ್ವರ್ಧಮಾನಮ್ । **ಪುರೂತಮಮ್** ಅತಿಶಯೇನ ಬಹುಮಗ್ನಿಮ್ ಹೇ ಋತ್ವಿಜಃ! **ವಃ** ಯೂಯಮ್ । **ಅಚ್ಛಾ** ಅಭಿಗಚ್ಛತ ॥

**ವಃ** - ಋತ್ವಿಜರಾದ ನೀವು, **ಅಧ್ವರಾಣಾಮ್** - ಜ್ಞಾನಯಜ್ಞಗಳನ್ನು, **ಅಧ್ವರಃ** - ಯಜ್ಞವನ್ನು, ಮಾರ್ಗದರ್ಶನವನ್ನು, **ಪುರೂತಮಮ್** - ಅತಿಶಯ, **ವೃಧನ್ತಮ್** - ವೃದ್ಧಿಸುತ್ತಿರುವ, ಜ್ವಾಲೆಗಳಿಂದಿರುವ, **ನಪ್ತ್ರೇ** - ಬಂಧು, ಸಹಾಯಕ, ಸಂರಕ್ಷಕ, **ಸಹ ಸ್ವತೇ** - ಶಕ್ತಿಶಾಲಿಯಾದ, ಶತ್ರುವನ್ನು ಸೋಲಿಸುವ ಸಹನ ಶೀಲನಾದ, **ಅಗ್ನಿಂ** - ತೇಜೋಮಯನಾಗಿರುವ ಪರಮಾತ್ಮನಾದ ಅಗ್ನಿಯನ್ನು, **ಅಚ್ಛಾ** - ಪೂಜಿಸಿರಿ, ತತ್ಪರತೆಯಿಂದ ಉಪಾಸಿಸಿ.

ಜ್ಞಾನಯಜ್ಞಗಳನ್ನು ಶಕ್ತಿಶಾಲಿಯಾದ ಶತ್ರುಗಳಿಂದ ರಕ್ಷಿಸಿ ಅತಿಶಯವಾಗಿ ವೃದ್ಧಿಸುತ್ತಿರುವ ತೇಜೋಮಯನಾದ ಪರಮಾತ್ಮನನ್ನು ತತ್ಪರತೆಯಿಂದ ಉಪಾಸನೆ ಮಾಡಿ ನಮ್ಮನ್ನು ಉತ್ತಮರನ್ನಾಗಿ ಮಾಡಲೂ ನಮ್ಮ ಕರ್ಮಗಳಿಗೆ ಮಾರ್ಗದರ್ಶನ ನೀಡಲೂ ಪುತ್ರಪೌತ್ರರನ್ನು ಪಡೆಯಲೂ ತೇಜೋಮಯನಾದ ಅಗ್ನಿಭಗವಂತನನ್ನು ತನ್ಮಯತೆಯಿಂದ ಪೂಜಿಸಿರಿ.

ಋತ್ವಿಜರೆ! ನಿಮ್ಮ ಸವನದ ಪರಮಸಹಕಾರಿಯಂ
ಶ್ರೇಷ್ಠತಮನಂ ಸರ್ವಹಿತಕಾರಿಯಂ ದೇವನಂ ।
ಬಲಶಾಲಿಯಂ ಹವ್ಯವಾಹನಂ ನಿಕಟಗೊಳಿಸಿಮ್ ॥

## ಋಕ್ - ೨೨

ಭರದ್ವಾಜೋ ಬಾರ್ಹಸ್ಪತ್ಯಃ ಗಾಯತ್ರ್ಯಗ್ನಿಃ ॥

೩ ೨ ೩ ೧ ೨ ೩ ೨ ೩ ೨ ೩ ೨ ೩ ೨ ೧ ೨
ಅಗ್ನಿಸ್ತಿಗ್ಮೇನ ಶೋಚಿಷಾ ಯಜ್ಸದ್ವಿಶ್ವನ್ಯಽತ್ರಿಣಮ್ । ೧

೩ ೧ ೨ ೩ ೨
ಅಗ್ನಿರ್ನೋವಜ್ಸತೇ ರಯಿಮ್ ॥ ೨.೨೨ ॥

೩ ೨ ೩ ೧ ೨ ೩ ೧ ೨ ೧ ೨೦ ೧ ೨೦ ೩ ೧ ೨ ೩ ೨
ಅಗ್ನಿಃ - ತಿಗ್ಮೇನ - ಶೋಚಿಷಾ । ಯಜ್ಸತ್ - ವಿಶ್ವಮ್ - ನಿ - ಅತ್ರಿಣಮ್ । ಅಗ್ನಿಃ -

೩ ೨ ೩
ನಃ - ವಜ್ಸತೇ - ರಯಿಮ್ ॥ ೨.೨೨ ॥

ಹರಸೀ ದ್ವೇ ॥ ದ್ವಯೋರಗ್ನಿರ್ಗಾಯತ್ರ್ಯಗ್ನಿಃ ॥

೧ ೨ ೩ ೫ ೨ ೦ ೧ ೨ ೩ ೫
೨೨.೧. ಆಗ್ನಾಓಽ೨೩ಳವಾ ॥ ತಿಗ್ಮೇನಽ೩ಶೋ । ಚಾಇಷಾಓಽ೨೩ಳವಾ ॥

೧ ೨^ ೩ ೫ ೧ ೨^ ೩
ಯಾಜ್ಸಾಓಽ೨೩ಳವಾ ॥ ವಾಇಶ್ವಾನ್ನಿಯಾ । ತ್ರಾಇಣಾಓಽ೨೩

೫ ೨೧ ೩ಂ ೧ ೩ ೨
೪ವಾ ॥ ಅಗ್ನಿರ್ನೋ೯ऽ೨ವಜ್‌ಸತೇ೯ರಯೀ೯ऽ೧ಮ್ ॥

ದೀ - ೩ । ಪ - ೭ । ಮಾ - ೮ । ಠೈ । ೪ । ೩೮ ॥

೪ ೫ ೪ ೫ ೩ ೫ ೨ ೩ ೫
೨೨.೨. ಓಹಾ । ಓಗ್ನೀಃ ॥ ತಾऽ೨೩೪೩ಗ್ಮೇ । ನಾಶೋ೯ಚಾऽ೨೩೪೩ಷಾ ।

೧ ೩ ೫ ೨ ^೩ ೫
ಯಜ್‌ಸಾऽ೨ದ್ವಾऽ೨೩೪೩ಶ್ವಾಮ್ । ನಿಯತ್ರಾऽ೨೩೪೩ಣಾ

೨೧ ೩ಂ ೧ ^ ೩ ೩೦ ೦
ಮ್ ॥ ಅಗ್ನಿರ್ನೋ೯ऽ೨ ॥ ವಜ್‌ಸಾऽ೨ತಾऽ೨೩೪ಔಹೋ೯ವಾ ॥

೩ ೫
ರಾऽ೨೩೪ಯೀ೯ಮ್ ॥

ದೀ - ೩ । ಪ - ೯ । ಮಾ - ೯ । ಢೋ । ೫ । ೩೯ ॥

ಇಹವದ್ವಾಮದೇವ್ಯಮ್ ॥ ವಾಮದೇವೋ ಗಾಯತ್ರ್ಯಗ್ನಿಃ ॥

೫ ೪ ೫ ೪೦ ೫ ೦ ೪ ೫೦ ೪ ೧
೨೨.೩. ಅಗ್ನಿಸ್ತಿಗ್ಮೇ೯ನ ಶೋ೯ಚಿಷಾ । ಇಹಾ ॥ ಯऽಜ್‌ಸದ್ವಿಶ್ವಂನ್ಯತ್ರಿಣಾ

— ೧ ೨ ೧ ೦ — ೧ ೨
ऽ೨ಮ್ । ಇಹಾ ॥ ಅಗ್ನಿರ್ನೋ೯ವಜ್‌ಸತಾऽ೨ಇ । ಇಹಾऽ೩ ॥

೧ ೫ ॥ ೫
ರಾऽ೨೩೪ಯೋ೯ऽ೬ಹಾಇ ॥

ದೀ - ೪ । ಪ - ೭ । ಮಾ - ೩ । ಥಥಿ । ೬ । ೪೦ ॥

**ಅಯಮ್ ಅಗ್ನಿಃ ತಿಗ್ಮೇನ** ತೀಕ್ಷ್ಣೇನ **ಶೋ೯ಚಿಷಾ** ತೇಜಸಾ **ವಿಶ್ವಂ** ಸರ್ವಂ **ಅತ್ರಿಣಮ್** ಅತ್ತಾರಮ್ ರಾಕ್ಷಸಾದಿಕಮ್ । **ನಿಯಂಸತ್** ನಿಹನ್ತು - ಬಹ್ವೃಚಾ ಅನುಸ್ವಾರಸ್ಥಾನೇ ಆಕಾರಂ ಕೃತ್ವಾಯಾಸತ್ ಇತಿ ಪಠನ್ತಿ - ಅಪಿ **ಚ ನ** ಅಸ್ಮಭ್ಯಮಗ್ನಿಃ **ರಯಿಂ** ಧನಮ್, **ವಂಸತೇ** ದದಾತು । **ವಂಸತೇ** ಇತಿ ಛಂದೋಗಾಃ । **ವನತೇ** ಇತಿ ಬಹ್ವೃಚಾಃ ॥

ದತ್ತವಲ್ಲದ ದಾನ ಪಡೆದರೆ, ದಾಕ್ಷಿಣ್ಯದಿಂದ ದಾನ ಪಡೆದರೆ ಅದತ್ತ ಧನದ ಸ್ವಾಮಿಯ ಸಮಕ್ಷಮದಲ್ಲೇ ದಾನಮಾಡದಿರುವ ಪಶ್ವಾದಿಗಳನ್ನು ತೆಗೆದುಕೊಂಡು ಹೋದರೆ ಸ್ತೇಯ ಪ್ರಾಯಶ್ಚಿತ್ತವಾಗಿ ಒಂದು ರಾತ್ರಿ ಉಪವಾಸವಿದ್ದು, 'ಅಗ್ನಿಸ್ತಿಗ್ಮೇನ' ಋಕ್ಕಿನ ಎರಡನೆಯ **ಓಹಾ । ಓಗ್ನೀಃ** - ಗ್ರಾಮ. ೩೯ ॥ ಸಾಮವನ್ನು ಪ್ರಾಯಶ್ಚಿತ್ತ ರೂಪವಾಗಿ ಗಾನ ಮಾಡಬೇಕು - ಸಾ. ವಿ. ಬ್ರಾ. ೧.೭.೩.

ಗೋವ್ಯತಿರಿಕ್ತ ಪ್ರಾಣಿ ವಧೆ ಮಾಡಿದವರು ಒಂದು ರಾತ್ರಿ ಉಪವಾಸವಿದ್ದು ಮೇಲಿನಂತೆ **'ಓಹಾ ಓಗ್ನೀಃ'** - ಗ್ರಾಮ. ೩೯ ॥ ಸಾಮವನ್ನು ಗಾನಮಾಡಬೇಕು - ಸಾ. ವಿ. ಬ್ರಾ. ೧.೭.೭.

ಬ್ರಾಹ್ಮಣನನ್ನು ಕಠಿನೋಕ್ತಿಯಿಂದ ಅಪವಾದಕ್ಕೊಳಪಡಿಸುವ ಮತ್ತು ತನಗೆ ಗೊತ್ತಿಲ್ಲದ ಮತ್ತೊಬ್ಬರ ಪಾಪವನ್ನು ಪ್ರಕಟಿಸಿದ ಪಾಪ ಪ್ರಾಯಶ್ಚಿತ್ತವಾಗಿ ಈ ಸಾಮಗಳನ್ನು ಗಾನ ಮಾಡಬೇಕು - ಸಾ. ವಿ. ಬ್ರಾ. ೧.೭.೧೬.

ಕೂರ್ಚ ದರ್ಭಾಸನಗಳು ಸುಟ್ಟು ಹೋದರೆ ಒಂದು ರಾತ್ರಿ ಉಪವಾಸವಿದ್ದು ಇಲ್ಲಿನ ಎರಡನೆಯ ಸಾಮವನ್ನು ಗಾನ ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು - ಸಾ. ವಿ. ಬ್ರಾ. ೧.೮.೧೧. ಬ್ರಹ್ಮಚರ್ಯಖಂಡಿತ ದೋಷದಿಂದ ಪಾರಾಗಲು ಈ ಋಕ್ಕನ್ನೂ ಸಾಮವನ್ನೂ ವಿಧಿಪೂರ್ವಕವಾಗಿ ಜಪ ಮಾಡಬೇಕು - ಅಗ್ನಿಪುರಾಣ.

**ಅಯಂ ಅಗ್ನಿಃ** - ಈ ತೇಜೋಮಯನಾದ ಅಗ್ನಿಯು, **ತಿಗ್ಮೇನ** - ತೀಕ್ಷ್ಣವಾದ, **ಶೋಚಿಷಾ** - ತೇಜಸ್ಸಿನಿಂದ, **ವಿಶ್ವಂ ಅತ್ರಿಣಮ್** - ಪ್ರಪಂಚಕ್ಕೆ ಕಂಟಕರಾದ, ರಾಕ್ಷಸರನ್ನು, ಅರಿಷಡ್ವರ್ಗಗಳನ್ನು, **ನಿಯಂಸತ್** - ನಷ್ಟಗೊಳಿಸಲಿ, ನಿಯಂತ್ರಿಸಲಿ, **ರಯಿಮ್** - ಐಹಿಕ ಆಮುಷ್ಮಿಕ ಸಂಪತ್ತುಗಳನ್ನು, **ನಃ** - ನಮಗೆ, **ವಂಸತೇ** - ದಯಪಾಲಿಸಲಿ.

ತೇಜೋಮಯನಾದ ಅಗ್ನಿದೇವನು ತನ್ನ ತೀಕ್ಷ್ಣತೇಜಸ್ಸಿನಿಂದ ಬಾಹ್ಯ ಹಿಂಸಕರಾದ ರಾಕ್ಷಸರನ್ನೂ ಆಂತರಿಕಶತ್ರುಗಳಾದ ಅರಿಷಡ್ವರ್ಗವನ್ನೂ ನಿಗ್ರಹಿಸಿ ನಮಗೆ ಐಹಿಕ ಆಮುಷ್ಮಿಕಸಂಪತ್ತುಗಳನ್ನು ದಯಪಾಲಿಸಲಿ.

*ಅನಲ! ನೀಂ ನಿನ್ನ ತೇಜೋಮಯ**ಜ್ವಾ**ಲೆಯಿಂದಂ ।*
*ವಿಘ್ನಕಾರಕಶತ್ರುತತ್ತ್ವಮಂ ನಾಶಗೊಳಿಸ್ಸೆ ।*
*ಸಿರಿ – ಶಕ್ತಿಗಳನಿತ್ತು ನುತಿಪರಂ ಪೊರೆವುದೆಂದುಂ ॥*

## ಋಕ್ - ೨೩

ವಾಮದೇವೋ ಗೌತಮಃ ॥ ಗಾಯತ್ರ್ಯಗ್ನಿಃ ॥

೧ ೨ ೩ ೨ ೩ ೨ ೩ ೨ ೩ ೧ ೨ ೩ ೧ ೨೦
ಅಗ್ನೇ ಮೃಡ ಮಹಾಜ್ಅಸ್ಯಯ ಆ ದೇವಯುಞ್ಜನಮ್ ।

೩ ೧ ೨ ೩೨ ೩ ೧ ೨
ಇಯೇಥ ಬರ್ಹಿರಾಸದಮ್ ॥ ೩.೨೩ ॥

೧ ೨೦ ೩ ೨ ೩ ೨ ೩ ೧ ೨೦ ೩ ೨ ೧ ೨೦
ಅಗ್ನೇ - ಮೃಡ - ಮಹಾನ್ - ಅಸಿ । ಅಯಃ - ಆ - ದೇವಯುಮ್ - ಜನಮ್ ॥

೩ ೧ ೨ ೩ ೨ ೩ ೧ ೨ ೩ ೧ ೨
ಇಯೇಥ - ಬರ್ಹಿಃ - ಆಸದಮ್ ॥ ಆ - ಸದಮ್ ॥ ೩.೨೩ ॥

ಯಾಮಮ್ ॥ ಯಮೋಗಾಯತ್ರ್ಯಗ್ನಿಃ ॥

೧ ಅ ^ ೩ ೨^ ೩ ೫ ೧ ೦ ^
೨೩.೧. ಅಗ್ನಾಇಮೃಡಾ೨ । ಮಹಾಜ್ಆ೨೩೪ಸೀ ॥ ಅಯಆದಾ೨ಇ ।

೩ ೨^ ೩ ೫ ೧ ೦ ೩ ೨^
ವಯುಞ್ಜಾ೨೩೪ನಾಮ್ ॥ ಇಯೇಥಬಾ೨೩ ॥ ಹಿರಾ೩

೪ ॥
ಸಾ೫ದಾ೬೫೬ಮ್ ॥

ದೀ - ೨ । ಪ - ೬ । ಮಾ - ೬ । ಚೂ । ೭ । ೪೧ ॥

ಉತ್ತರಯಾಮಮ್ ॥ ಯಮೋಗಾಯತ್ರ್ಯಗ್ನಿಃ ॥

೩ ೪೦ ೩ ೪ ೩೦ ೪ ೫ ೩೦ ೨^ ೪ ೫ ೩ ೪ ೩೦ ೪೦
೨೩.೨. ಅಗ್ನೇಮೃಡಮಹಾಜ್ಅಸಿ । ಓಹಾ೨೩ಓಹಾ ॥ ಅಯಆದೇವ

೩ ೪ ೫ ೩೦ ೨^ ೪ ೫ ೨ ೧ ೨ ೩ ೨
ಯುಞ್ಜನಮ್ । ಓಹಾ೨೩ಓಹಾ ॥ ಇಯೇಥಾ೨೩ಬ ॥ ಹಿರಾ೨

೪ ॥
೩ಸಾ೨೫ದಾ೨೬೫೬ಮ್ ॥

*ದೀ - ೭ / ಪ - ೬ / ಮಾ - ೬ / ಚೂ / ೮ / ೪೨ ॥*

**ಹೇ ಅಗ್ನೇ! ಮೃಡ** ಅಸ್ಮಾನ್ ಸುಖಯ । ಸ ತ್ವಂ **ಮಹಾನ್ ಅಸಿ** ಪ್ರಭೂತೋ ಭವಸಿ । **ಯಃ** ತ್ವಮ್ **ಅಯಃ** ಗನ್ತಾ **ದೇವಯುಂ** ದೇವಾನಾಂ ಕಾಮಯಿತಾರಂ **ಜನಂ** ಯಜಮಾನಂ **ಬರ್ಹಿಃ** ದರ್ಭಮ್ **ಆಸದಮ್** ಯಜ್ಞೇ ಆಸತ್ತುಮ್ । **ಆ ಇಯೇಥ** ಆಗಚ್ಛಸಿ । ಅಯಃ ಇತಿ ಛಂದೋಗಾಃ । **ಯಯೀಮ್** ಇತಿ ಬಹ್ವೃಚಾಃ ॥

**ಅಗ್ನೇ** - ಪೂಜನೀಯನಾದ ಭಗವಂತನೇ, **ಮೃಡ** - ಸುಖವನ್ನು ದಯಪಾಲಿಸು, **ಮಹಾನ್‌ಅಸಿ** - ಮಹಾತ್ಮನಾಗಿದ್ದೀಯೆ, **ದೇವಯುಮ್** - ದೇವಯಜ್ಞ ನಿರತನಾದ, ಉಪಾಸಕ, ದೇವತಾದರ್ಶನ ಮಾಡುವವ, **ಜನಮ್** - ಮನುಷ್ಯನ, ಯಜಮಾನನ ಸಮೀಪ, **ಆಯಃ** - ಸರ್ವವ್ಯಾಪಿಯಾದ, ಪ್ರಾಪ್ತವಾಗುವ, **ಬರ್ಹಿಃ** - ಯಜ್ಞಸ್ಥಾನದಲ್ಲಿ, ದರ್ಭಾಸನದಲ್ಲಿ, **ಆಸದಮ್** - ವಿರಾಜಮಾನನಾಗು, ಸ್ಥಾಪಿತನಾಗು, **ಆಇಯೇಥ** - ಪ್ರಾಪ್ತವಾಗಿಸು, ದಯಮಾಡಿಸು.

ಸರ್ವವ್ಯಾಪಿಯಾದ ಮಹಾತ್ಮನಾದ ಅಗ್ನಿ ಭಗವಂತನೇ! ದೇವತೆಗಳ ಸಾನ್ನಿಧ್ಯವನ್ನು ಯಜ್ಞಾರ್ಥವಾಗಿ ಬಯಸುವ ಉಪಾಸಕನಾದ ಯಜಮಾನನ ಅಭಿಮುಖವಾಗಿ ಈ ದರ್ಭಾಸನದಲ್ಲಿ ವಿರಾಜಮಾನನಾಗಿ ಸುಖವನ್ನುಂಟು ಮಾಡು. ಮಹಾಮಹಿಮನಾದ ಭಗವಂತನೇ ನೀನು ದೈವೀಸಂಪತ್ತಿನೊಂದಿಗೆ ಜ್ಞಾನದಲ್ಲಿ ನೆಲೆಗೊಂಡಿರುವವರಿಗೆ ಸುಖವನ್ನುಂಟುಮಾಡು.

*ಅಗ್ನಿ! ನಿನ್ನಯ ಭಕ್ತರಿಗೆ ಸಮೃದ್ಧಿ ಸುಖಂಗಳಂ*
*ತೀವ್ರದಯ್! ಅಂತೆಸಗೆ ನೀಂ ಸಮರ್ಥಂ ಸರ್ವಥಾ ।*
*ಯಜಮಾನನೆಡೆ ಸಾರಿ ದರ್ಭಾಸನದೆ ಕುಳ್ಳಿರೈ ॥*

## ಋಕ್ - ೨೪

ವಸಿಷ್ಠೋ ಮೈತ್ರಾವರುಣಿಃ ॥ ಗಾಯತ್ರ್ಯಗ್ನಿಃ ॥

೨ ೩ ೧ ೨ ೩ ೧ ೨ ೩ ೧ ೨ ೩ ೨
**ಅಗ್ನೇ ರಕ್ಷಾ ಣೋ ಅಜ್ಹಸಃ ಪ್ರತಿ ಸ್ಮ ದೇವ ರೀಷತಃ ।**

೧ ೨ ೩ ೧ ೨
**ತಪಿಷ್ಠೈರಜರೋ ದಹ ॥** ೪.೨೪ ॥

೧ ೨ಂ ೧ ೨ಂ ೩ ೧ ೨ಂ ೧ ೨ಂ ೩ ೨ ೧ ೨ ೩ ೧ ೨
**ಅಗ್ನೇ - ರಕ್ಷ - ನಃ - ಅಜ್ಹಸಃ । ಪ್ರತಿ - ಸ್ಮ - ದೇವ - ರಿಷತಃ ॥ ತಪಿಷ್ಠೈಃ ಅಜರಃ -**

೩ ೧ ೨ಂ ೩
**ಅ - ಜರಃ - ದಹ ॥** ೪.೨೪ ॥

ರಾಕ್ಷೋಘ್ನಮ್ ॥ ಅಗ್ನಿರ್ಗಾಯತ್ರ್ಯಗ್ನಿಃ ॥

೫ ೦ ೨^ ೪೦ ೫೦ ೪ ೫ ೧ ೦ ೨೧ ೨
೨೪.೧. **ಅಗ್ನೇರಾ೨ಇಕ್ಷಾಣೋ ಅಜ್ಹಸಾಃ ॥ ಪ್ರತಿಸ್ಮದೇವರಿಷಾ೨೨ಇತಾಃ ॥**

೧ ೨ ೧೧ ೧ ೧
**ತಪಾಇಷ್ಠಾ೨೨ಇಇರಾ ॥ ಜರೋದಾ೨೨ಇಹಾ೨ಇ೪ಇ । ಓ೨೨ಇ೪**

**೫ಇ ॥ ಡಾ ॥** *ದೀ - ೫ । ಪ - ೬ । ಮಾ - ೬ । ಪೂ । ೯ । ೪೩ ॥*

ಹೇ **ಅಗ್ನೇ!** ತ್ವಂ **ನಃ** ಅಸ್ಮಾನ್ **ಅಂಹಸಃ** ಪಾಪಾತ್ **ರಕ್ಷ** ಪಾಹಿ - ಸಂಹಿತಾಯಾಮ್ ದೀರ್ಘಶ್ಛಾಂದಸಃ - ಅಪಿ ಚ ಹೇ **ದೇವ!** ದ್ಯೋತಮಾನಾನಾಗ್ನೇ! **ಅಜರಃ** ಜರಾರಹಿತಸ್ತ್ವಂ **ರೀಷತಃ** ಹಿಂಸತಃ ಶತ್ರೂನ್ । ಸಂಹಿತಾಯಾಮ್ **ದೀರ್ಘಶ್ಛಾಂದಸಃ** - **ತಪಿಷ್ಠೈಃ** ಅತಿಶಯೇನ ತಾಪಕೈಸ್ತೇಜೋಭಿಃ **ಪ್ರತಿದಹಸ್ಮ** ಇತಿ ಪಾದಪೂರಣಃ ಭಸ್ಮೀಕುರು । ಸ್ಮೇತಿ ಸಕಾರಸ್ಯ ಸಂಹಿತಾಯಾಂ **ಪ್ರತಿಷ್ಮ** ಇತಿ **ಷತ್ವಂ** ಬಹ್ವೃಚಾಃ ಕುರ್ವಂತಿ ॥

**ದೇವ** - ಪ್ರಕಾಶಿಸುತ್ತಿರುವ, ದಿವ್ಯಗುಣಯುಕ್ತ, **ಅಗ್ನೇ** - ಅಗ್ನಿ ಭಗವಂತನೇ, **ಅಂಹಸಃ** - ಪಾಪಗಳಿಂದ, ಪಾಪಿಗಳಿಂದ, ದುಷ್ಟರಿಂದ, **ರಕ್ಷ** - ರಕ್ಷಿಸು, **ಅಜರಃ** - ಮುಪ್ಪಿಲ್ಲದ ತರುಣ, **ರೀಷತಃ** - ಹಿಂಸಕ ಶತ್ರುಗಳನ್ನು, ಕಾಮಕ್ರೋಧಗಳನ್ನು, **ತಪಿ ಷ್ಠೈಃ** - ಅತಿಶಯ ತೇಜಸ್ಸಿನಿಂದ, ಅತಿಶಯ ತಾಪದಿಂದ, **ಪ್ರತಿದಹಸ್ಮ** - ಭಸ್ಮ ಮಾಡು.

'ರಿಷತಃ' ಎಂದು ರಾದೀ ಮತ್ತು ಅಡಿಯಾರ್ ಪ್ರತಿಯಲ್ಲಿ ಮಾತ್ರ ಹ್ರಸ್ವ ಇದ್ದು ಋ.ಸಂ.೭.೧೫-೧೭ ಹಾಗೂ ಅನ್ಯ ೫, ಬೇರೆ ಬೇರೆಯವರು ಸಂಪಾದಿಸಿರುವ ಛನ್ದಾರ್ಚಿಕ ದಲ್ಲಿ 'ರೀಷತಃ' ಎಂದಿದೆ. ಪದಪಾಠದಲ್ಲೂ ಗಾನದಲ್ಲೂ 'ರಿಷತಃ' ಎಂಬ ಹ್ರಸ್ವ ಪಾಠವಿದೆ. ರೀಷತ್ - ಹಿಂಸಾನಿರತ ಜೀವಮಾ ರೀಷತೇ ಸಹಸಾವನ್ ಪರಾದಾಃ । ಋ.೧.೧೮೯.೫ ॥ ಹಿಂಸಿಸುವ ವ್ಯಾಘ್ರಾದಿಪಶು ಪಾಹಿ ರೀಷ್ಷತ ಉತ ವಾಜಿಘಾಂಸತಃ । ಋ.೧.೩೬.೧೫. ॥

ದಿವ್ಯಗುಣಯುಕ್ತನೂ ಪ್ರಕಾಶಮಯನೂ ಮುಪ್ಪಿಲ್ಲದವನೂ ಆದ ಅಗ್ನಿಭಗ ವಂತನೇ ನಮ್ಮನ್ನು ಹಿಂಸಿಸುತ್ತಿರುವ ಬಾಹ್ಯಶತ್ರುಗಳನ್ನೂ ಪಾಪ ಮಾಡಲು ನಮ್ಮನ್ನು ಮುಂದೂಡುತ್ತಿರುವ ಕಾಮಕ್ರೋಧಾದಿ ಆಂತರಿಕಶತ್ರುಗಳನ್ನೂ ನಿನ್ನ ಅತಿಶಯತೇಜಸ್ಸಿ ನಿಂದ ಭಸ್ಮಮಾಡು.

*ಹವ್ಯವಾಹನ! ಪಾಪರಾಜಿಯಿಂದೆಮ್ಮನುಳಿಸ್ವೆ*
*ಅಜರಾಮರಪ್ರಖರತೇಜದಿಂ ಬೆಳಗುತೆಂದುಂ ।*
*ನಮ್ಮ ರಿಪುಗಳ ಬಯಕೆಯೆಲ್ಲಮಂ ಬೂದಿಮಾಡಯ್ ॥*

## ಋಕ್ - ೨೫

ಭರದ್ವಾಜೋ ಬಾರ್ಹಸ್ಪತ್ಯಃ ॥ ಗಾಯತ್ರ್ಯಗ್ನಿಃ ॥

೧ ೨ ೩ ೧ ೨ರ ೩ ೧ ೨
**ಅಗ್ನೇ ಯುಙ್ಕ್ಷ್ವಾ ಹಿ ಯೇ ತವಾಶ್ವಾಸೋ ದೇವ ಸಾಧವಃ ।**

೨ ೩ ೧ ೨ ೩ ೧ ೨
**ಅರಂ ವಹನ್ತ್ಯಾಶವಃ ॥** *೫.೨೫ ॥*

೧ ೨ರ ೩ ೨ ೧ ೨ರ ೧ ೨ರ ೩ ೧ ೨ ೧ ೨ರ
ಅಗ್ನೇ - ಯುಙ್‌ಕ್ಷ್ವ - ಹಿ - ಯೇ - ತವ । ಅಶ್ವಾಸಃ - ದೇವ - ಸಾಧವಃ - ಅರಮ್ -

೧ ೨ರ ೩ ೧ ೨
ವಹನ್ತಿ - ಆಶವಃ ॥ *೫.೨೫* ॥

ರಾಕ್ಷೋಘ್ನಮ್ ॥ ಅಗ್ನಿರ್ಗಾಯತ್ರ್ಯಗ್ನಿಃ ॥

೫ ೦ ೨ ೪೦ ೫೦ ೪೦ ೫ ೧ ೦ ೦ ೦ ೨೧೦
೨೫.೧. ಅಗ್ನೇಯುೂ೨೩ಙ್‌ಕ್ಷ್ವಾಹಿಯೇತವಾ ॥ ಅಶ್ವಾಸೋದೇವಸಾಧಾ೨

೨ ೧ ೨ ೧೦ ೨^
೨೩ವಾಃ ॥ ಅರಂವಾ೨೨೩ಹಾ ॥ ತಿಯಾಶಾ೨೨೩ವಾ೨೩೪೩ಃ ।

೧
ಓ೨೨೩೪೫ಇ ॥ ಡಾ ॥ *ದೀ - ೮ । ಪ - ೬ । ಮಾ - ೩ ॥ ಟ । ೧೦ । ೪೪ ॥*

**ಹೇ ದೇವ!** ದ್ಯೋತಮಾನ್! **ಅಗ್ನೇ!** ತಾನಶ್ವಾನ್ **ಯುಙ್ಕ್ಷ್ವ** ಆತ್ಮೀಯೇ ರಥೇಯೋಜಯ । ಬಹ್ವೃಚಾಸ್ತ್ವತ್ರಿರೀಯಾಶ್ಚವಿಕರಣ ಪ್ರತ್ಯಯಸ್ಯ ಲೋಪಂ ಕೃತ್ವಾಯುಕ್ಷ್ವ ಇತಿ ಪಠನ್ತಿ । ಯೇ **'ತವ'** ತ್ವದೀಯಾಃ **ಸಾಧವಃ** ಸಾಧಕಾಃ ಸುಶೀಲಾವಾ **ಅಶ್ವಾಸಃ** ಅಶ್ವಾಃ ಆಶವಃ ಕ್ಷಿಪ್ರಗಾಮಿ ನಃ **'ಅರಮ್'** ಅಲಂ ಪರ್ಯಾಪ್ತಂ ತ್ವದೀಯಂ ರಥಂ ವಹನ್ತಿ । **ವಹನ್ತ್ಯಾಶವಃ** ಇತಿ ಛಂದೋಗಾ೨ವ ಹನ್ತಿ ಮನ್ಯವಃ ಇತಿ ಬಹ್ವೃಚಾಃ ॥

**ದೇವ** - ದೀಪ್ತಿವಂತನಾದ, ಜ್ಞಾನಸ್ವರೂಪಿಯಾದ, **ಅಗ್ನೇ** - ಅಗ್ನಿ ಭಗವಂತನೇ, **ಯೇಹಿ** - ಯಾವ, **ತವ** - ನಿನ್ನ, **ಆಶವಃ** - ಶೀಘ್ರಗಾಮಿಯಾದ, ಕುಶಾಗ್ರಬುದ್ಧಿಯ ವಿದ್ವಾಂಸರು, **ಸಾಧವಃ** - ಸಾಧುಸ್ವಭಾವದ, ಕಲ್ಯಾಣಸಾಧಕವಾದ, **ಅಶ್ವಾಸಃ** - ಕುದುರೆ ಗಳು, **ಯುಙ್ಕ್ಷ್ವ** - ರಥಕ್ಕೆ ಹೂಡು, ಯೋಗದಿಂದ ಕೂಡಿಸು, **ಅರಂ ವಹನ್ತಿ** - ಕ್ಷೇಮ ವಾಗಿ ಒಯ್ಯುತ್ತವೆ.

ದೀಪ್ತಿವಂತನಾದ ಅಗ್ನಿಭಗವಂತನೇ ನಿನ್ನ ಶೀಘ್ರಗಾಮಿಯಾದ ಕಲ್ಯಾಣ ಸಾಧಕ ವಾದ ಕುದುರೆಗಳನ್ನು, ನಿನ್ನನ್ನೇ ಪಡೆಯಲು ಸಾಧನೆಯಲ್ಲಿ ತೊಡಗಿರುವ ಯೋಗಿಯ ಶರೀರವೆಂಬ ರಥಕ್ಕೆ ಹೂಡಿ ನಿನ್ನಲ್ಲಿಗೆ ಶೀಘ್ರವೇ ಬರಮಾಡಿಕೋ.

೩೫೬

ದ್ರುತಗತಿಯ ದೇವನೇ! ಅಗ್ನಿ! ನಮ್ಮಿಂದ್ರಿಯಗಳೇ
ಅಶ್ವಂಗಳ್; ಅವ್ರುಗಳಂ ಮನಮೆಂಬ ರಥಕೊಂದಿಸ್ವೆ ।
ಬುದ್ಧಿಸಾರಥಿಯಂಕೆಯೊಳಗಿರ್ಕೆ ಅವ್ರುಗಳೆಂದುಂ ॥

## ಋಕ್ - ೨೬

ವಸಿಷ್ಠೋ ಮೈತ್ರಾ ವರುಣಿಃ ॥ ಗಾಯತ್ರ್ಯಗ್ನಿಃ ॥

೧ ೨ ೩ ೧ ೨ ೩ ೨
**ನಿ ತ್ವಾ ನಕ್ಷ್ಯ ವಿಶ್ಪತೇ ದ್ಯುಮನ್ತಂ ಧೀಮಹೇ ವಯಮ್ ।**

೩ ೧ ೨
**ಸುವೀರಮಗ್ನ ಆಹುತ ॥** ೬.೨೬ ॥

೨ ೩ ೧ ೨ ೩ ೨ ೩ ೧ ೨
**ನಿ - ತ್ವಾ - ನಕ್ಷ್ಯ - ವಿಶ್ಪತೇ । ದ್ಯುಮನ್ತಮ್ - ಧೀಮಹೇ - ವಯಮ್ ॥ ಸುವೀರ**

೩ ೧ ೨ರ ೩
**ಮ್ - ಸು - ವೀರಮ್ - ಅಗ್ನೇ - ಆಹುತ - ಆ - ಹುತ ॥**

ವೈಶ್ವಮನಸಮ್ ॥ ವಿಶ್ವಮನಾಗಾಯತ್ರ್ಯಗ್ನಿಃ ॥

೫ ರ ೨ ^ ೪ ೫ ೧ ೨ ೧ ೨ ೧ ೨
೨೬.೧. **ನಿತ್ವಾ । ಹೋಽ೩ಇ । ನ । ಕ್ಷಿಯಾ ॥ ವಾಇಶ್ಪತಾಇ । ದ್ಯುಮನ್ತಮ್ ।**

೧ ೨ ೩ ೫ ೪ ೨ರ ೧
**ಧಾಇ । ಮಾಹೇವಾಽ೨೩೪ಯಾಮ್ ॥ ಸುವೋಹಾಇ ॥ ರಾಮ**

೨ರ ೧ ೫ ೪ ॥ ೫
**ಗ್ನಾ೭ಽ೨೩೪ವಾ ॥ ಹೋಽ೫ತೋಽ೬ಹಾಇ ॥**

ದೀ - ೩ । ಪ - ೧೧ । ಮಾ - ೯ । ಟೋ । ೧೧ । ೪೫ ॥

೩೫೭

**ನಕ್ಷ**! ಉಪಗನ್ತವ್ಯ! ನಕ್ಷತಿರ್ವ್ಯಾಪ್ತಿಕರ್ಮಾ **ವಿಶ್ಪತೇ** ವಿಶಾಂಪತೇ! **ಆಹುತ** ಸರ್ವೈರ್ಯಜಮಾನೈರಭಿಹುತ! ಹೇ **ಅಗ್ನೇ! ದ್ಯುಮನ್ತಂ** ದೀಪ್ತಿಮನ್ತಂ **ಸುವೀರಂ** ಕಲ್ಯಾಣ ಸ್ತೋತೃಕಂ **ತ್ವಾ ತ್ವಾಂ** ವಯಂ **ನಿ ಧೀಮಹೇ** ನಿಹಿತವನ್ತಃ । **ಧೀಮಹೇ ವಯಂ** ಇತಿ ಛಂದೋಗಾಃ । **ದೇವ ಧೀಮಹಿ** ಇತಿ ಬಹ್ವೃಚಾಃ ॥

ಪುತ್ರಕಾಮನಾದವನು ಈ ಸಾಮವನ್ನಾಗಲೀ ಸಾ.ವಿ.ಬ್ರಾ. ೨.೮.೧,೬ರಲ್ಲಿ ತಿಳಿಸಿರುವ ಸಾಮಗಳೆಲ್ಲವನ್ನಾಗಲೀ ರೋಹಿಣೀ ನಕ್ಷತ್ರದಲ್ಲಿ ಗಾನಮಾಡಿ ವಿಧಿಪ್ರಕಾರ ಹೋಮ ಮಾಡುವುದರಿಂದ ರೂಪವಂತರೂ ದೀರ್ಘಾಯುಷಿಗಳೂ ಆದ ಮಕ್ಕಳನ್ನು ಪಡೆಯಬಹುದು.

**ಅಗ್ನೇ** - ಪರಮಾತ್ಮನೇ, ಅಗ್ನಿಯೇ, **ನಕ್ಷ** - ಉಪಾಸ್ಯ, ಶರಣ್ಯ ಉಪಾಸನಾ ಯೋಗ್ಯ, **ವಿಶ್ಪತೇ** - ಪ್ರಜಾಪಾಲಕನೇ, ಧನಪತಿಯೇ, ಎಲ್ಲರ ಒಡೆಯನೇ, **ಆಹುತಃ** - ಸ್ತುತಿಯೋಗ್ಯ, ಭಕ್ತರಿಂದ ಆಹ್ವಾನಿತ, ಅನೇಕರಿಂದ ಸೇವಿಸಲ್ಪಟ್ಟ, ಹೋಮ ಮಾಡಲ್ಪಟ್ಟ, **ದ್ಯುಮನ್ತಃ** - ದೀಪ್ತಿವಂತನಾದ, ತೇಜಸ್ವಿಯಾದ, ಪ್ರಕಾಶಗುಣವಿಶಿಷ್ಟನಾದ, **ಸುವೀರಮ್** - ಒಳ್ಳೆಯ ಬಲಶಾಲಿಯಾದ ಯೋಧ, ಸ್ತುತಿಸುವವರಿಗೆ ಕಲ್ಯಾಣಪ್ರದನಾದ, ನಿನ್ನ ಪರಿಚರ್ಯೆ ಮಾಡುವ ಋತ್ವಿಜರಿಗೆ, **ನಿ- ಧೀಮಹೇ** - ನಿರಂತರ ಧ್ಯಾನಿಸುವೆವು, ಧರಿಸುವೆವು, ಸ್ಥಾಪಿಸುವೆವು.

ಪ್ರಜಾಪಾಲಕನೂ, ಶರಣ್ಯನೂ ಅನೇಕ ಶ್ರೇಷ್ಠಭಕ್ತರಿಂದ ಸೇವಿಸಲ್ಪಡುವವನೂ, ಪ್ರಕಾಶಗುಣವಿಶಿಷ್ಟನೂ, ಭಕ್ತರಿಗೆ ಕಲ್ಯಾಣಪ್ರದನೂ, ಆದ ಪರಮಾತ್ಮನೇ ನಿನ್ನನ್ನು ನಾವು ನಿರಂತರವೂ ಧ್ಯಾನಿಸುತ್ತೇವೆ.

*ಸ್ವಾಮಿ ಪಾವಕ! ನಿನ್ನನೀಪವಿತ್ರಸ್ಥಳದೆ ನಾವ್*
*ನೆಲೆಗೊಳಿಸುವೆವು; ನಿನ್ನನಾರಾಧಿಸುವರಜಸ್ರಂ ।*
*ತೇಜಸ್ವಿವರ್ಚಸ್ವಿಯಜಮಾನರೊಲವಿನಿಂದಂ ॥*

## ಋಕ್ - ೨೭

ವಿರೂಪ ಆಂಗಿರಸಃ ॥ ಗಾಯತ್ರ್ಯಗ್ನಿಃ ॥

೩ ೨ ೩ ೨ ೩ ೨ ೩ ೧ ೨೦ ೩ ೨ ೩ ೨
**ಅಗ್ನಿರ್ಮೂರ್ದ್ಧಾ ದಿವಃ ಕಕುತ್ಪತಿಃ ಪೃಥಿವ್ಯಾ ಅಯಮ್ ।**

೩ ೧ ೨೦
**ಅಪಾಙ್ ರೇತಾಙ್ಸಿ ಜಿನ್ವತಿ ॥** *೭.೨೭ ॥*

೩ ೨ ೩ ೨ ೩ ೨ ೩ ೨ ೧ ೨೦ ೩ ೨ ೩ ೨ ೩ ೨
**ಅಗ್ನಿಃ - ಮೂರ್ಧಾ - ದಿವಃ - ಕಕುತ್ । ಪತಿಃ - ಪೃಥಿವ್ಯಾಃ - ಅಯಮ್ ॥ ಅಪಾ**

೧ ೨೦ ೩೦
**ಮ್ - ರೇತಾಙ್ಸಿ - ಜಿನ್ವತಿ ॥** *೭.೨೭ ॥*

ಅಗ್ನೇರಾರ್ಷೇಯಮ್ ॥ ಅಗ್ನಿರ್ಗಾಯತ್ರ್ಯಗ್ನಿಃ ॥

೫ ೦ ೦ ೫ ೧ ೧
೨೭.೧. **ಅಗ್ನಿರ್ಮೂರ್ದ್ಧಾದೀऽ೬ವಃಕಕೂತ್ ॥ ಪಾತೀऽ೨ಃಪಾರ್ಥೀऽ೨ ।**

೧೦ ೧ ೧ ೧
**ವಿಯಾಅಯಾಮ್ ॥ ಆಪಾऽ೨ಙ್ರಾಇತಾऽ೨ ॥ ಸಿಜಿನ್ವಾऽ೨೩**

೨ ೧
**ತಾऽ೩ಳಳ೩ಇ । ಓऽ೨೩ಳಳ೫ಇ ॥ ಡಾ ॥**

*ದೀ - ೩ । ಪ - ೭ । ಮಾ - ೬ । ಶೂ । ೧೨ ।* **೪೬** *॥*

**ಮೂರ್ದ್ಧಾ** ದೇವಾನಾಂ ಶ್ರೇಷ್ಠಃ **ದಿವಃ** ದ್ಯುಲೋಕಸ್ಯ **ಕಕುತ್** ಉಚ್ಛ್ರಿತಃ **ಪೃಥಿವ್ಯಾಃ ಚ** ಪತಿಃ **ಅಯಂ** ಅಗ್ನಿಃ **ಅಪಾಂ ರೇತಾಂಸಿ** ಸ್ಥಾವರ ಜಂಗಮಾತ್ಮಕಾನಿ ಭೂತಾನಿ **ಜಿನ್ವತಿ** ಪ್ರೀಣಯತಿ ॥

**ಮೂರ್ದ್ಧಾ** - ದೇವತೆಗಳಲ್ಲಿ ಶ್ರೇಷ್ಠನಾದ, **ದಿವಃ ಕಕುತ್** - ದ್ಯುಲೋಕಕ್ಕಿಂತ ಮೇಲಿರುವ ಪ್ರಕಾಶಪುಂಜ, **ಪೃಥಿವ್ಯಾಃ** ಪತಿ - ಪೃಥ್ವಿಯ ಸ್ವಾಮಿಯಾದ, **ಅಯಂ ಅಗ್ನಿಃ**

- ಈ ಅಗ್ನಿಭಗವಂತನು, **ಅಪಾಂ ರೇತಾಂಸಿ** - ನೀರಿನ ಸಾರಭೂತವಾದ ಸ್ಥಾವರ ಜಂಗಮ ಜಗತ್ತಿನ ಮೂಲಕಾರಣವನ್ನು, ಕರ್ಮಫಲವನ್ನು, **ಜಿನ್ವತಿ** - ತಲುಪಿಸಿ, ಪ್ರೇರಿಸಿ, ಪ್ರಸನ್ನಗೊಳಿಸುತ್ತಾನೆ, ನಿರ್ದೇಶಿಸುತ್ತಾನೆ, ತಿಳಿಯುತ್ತಾನೆ.

ಪೃಥ್ವಿಯ ಒಡೆಯನೂ, ದ್ಯುಲೋಕಕ್ಕಿಂತ ಮೇಲಿರುವವನೂ ದೇವತೆಗಳಲ್ಲೇ ಶ್ರೇಷ್ಠನೂ ಪ್ರಕಾಶಪುಂಜನೂ ಆಗಿರುವ ಅಗ್ನಿದೇವನು ಸ್ಥಾವರ ಜಂಗಮ ಜಗತ್ತಿಗೆ ಅದರ ದರ ಕರ್ಮಫಲಗಳನ್ನು ತಲುಪಿಸಿ ಪ್ರೇರಿಸಿ ಪ್ರಸನ್ನಗೊಳಿಸುತ್ತಾನೆ.

ಸಮಸ್ತ ದಿವ್ಯಶಕ್ತಿಗಳ ಮೂರ್ಧಸ್ಥಾನೀಯನೂ ಜ್ಞಾನಕರ್ಮಶಕ್ತಿಗಳ ಸ್ರೋತವೂ ಆಗಿರುವ ಈ ಅಗ್ನಿಯು ದ್ಯುಲೋಕಕ್ಕೆ ಶಿಖರಪ್ರಾಯವಾಗಿ ಪೃಥಿವೀ ಆದಿ ಲೋಕಗಳನ್ನು ಕಾಪಾಡುತ್ತಿದ್ದಾನೆ. ಸಮಸ್ತ ಕರ್ಮಬೀಜಗಳಿಗೆ ಜೀವನ ಪೂರ್ಣತೆಯನ್ನು ನೀಡುವವನು ಇವನೇ.

*ಅಗ್ನಿ ತಾನಿಳೆಯಿಂದೆ ಬಾನಿನವರಂ ವ್ಯಾಪಿಸಿ*
*ಪಾಲಿಸುವನೀಜಗವನಂತೆಯೇ ಸಲಿಲನಿಧಿಯಂ ।*
*ರೂಪಿಪಂ, ಗತಿಯಿತ್ತು ಕಾಪಿಡುವನಳ್ತಿಯಿಂದಂ ॥*

## ಋಕ್ - ೨೮

ಶುನಃಶೇಪ ಆಜೀಗರ್ತಿಃ ॥ ಗಾಯತ್ರ್ಯಗ್ನಿಃ ॥

೩ ೨ ೩ ೨ಉ ೩ ೧ ೨ ೩ ೧ ೨ ೩ ೧ ೨ರ
**ಇಮಮೂಷು ತ್ವಮಸ್ಮಾಕಂ ಸನಿಂ ಗಾಯತ್ರಂ ನವ್ಯಾಂಸಮ್ ।**

೧ ೨ ೩ ೨ ೩ ೧ ೨
**ಅಗ್ನೇ ದೇವೇಷು ಪ್ರ ವೋಚಃ ॥** *೮.೨೮ ॥*

೩ ೨ ೩ ೨ ೩ ೧ ೨ ೩ ೨ ೩ ೨ ೧ ೨ರ
**ಇಮಮ್ - ಉ - ಸು - ತ್ವಮ್ - ಅಸ್ಮಾಕಮ್ । ಸನಿಂ - ಗಾಯತ್ರಮ್ - ನವ್ಯಾಂ**

೧ ೨ರ ೩ ೧ ೨ ೩
**ಸಮ್ ॥ ಅಗ್ನೇ - ದೇವೇಷು - ಪ್ರ - ವೋಚಃ ॥** *೮.೨೮ ॥*

ಸೋಮಸಾಮ ॥ ಸೋಮೋ ಗಾಯತ್ರ್ಯಗ್ನಿಃ ॥

೨೮.೧. **ಇಮಮೂಷೂ ॥ ತ್ವಮಾಸ್ಮಾ೭೨೩ಳಕಾಮ್ । ಸಾನೀ೭೨ಜ್ಹೋ ಇ । ಗಾಯಾ೭೨ಹೋ । ತ್ರನ್ನವ್ಯಾ೭೨೩ಜ್ಸಾಮ್ ॥ ಆಗ್ನೇ೭೨ ಹೋಇ । ದಾಇವಾ೭೨ಹೋ ॥ ಷುಪ್ರಾವೋ೭೨೩ಚಾ೭೩ಳ೩ಃ । ಓ೭೨೩ಳ೫ಇ ॥ ಡಾ ॥**

*ದೀ - ೧ । ಪ - ೧೦ । ಮಾ - ೭ । ಜೀ । ೧೩ ॥ ೪೭ ॥*

ಹೇ **ಅಗ್ನೇ!** ತ್ವಂ **ಅಸ್ಮಾಕಂ**, ಅಸ್ಮತ್ಸಂಬಂಧಿನಮ್ – ಅಸ್ಮಭ್ಯಂ ಇತಿ ತೈತ್ತಿರೀಯಾಃ - **ಇಮಮೂಷು** ಪುರೋದೇಶೇಽನುಷ್ಠೀಯಮಾನಮಪಿ **ಸನಿಂ** ಹವಿರ್ದಾನಂ **ನವ್ಯಾಸಂ** ನವತರಂ – **ನವೀಯಾಂಸಮ್** ಇತಿ ತೈತ್ತಿರೀಯಾಃ – **ಗಾಯತ್ರಂ** ಸ್ತುತಿರೂಪಂ ವಚೋಽಪಿ **ದೇವೇಷು** ದೇವಾನಾಮಗ್ರೇ **ಪ್ರವೋಚಃ** ಪ್ರಬ್ರೂಹಿ ॥

**ಅಗ್ನೇ** - ಅಗ್ನಿಭಗವಂತನೇ, **ತ್ವಮ್** - ನೀನು, **ಇಮಮೂಷುಂ** - ಈ ಅನುಷ್ಠಾನದಲ್ಲಿ, **ಅಸ್ಮಾಕಂ** - ನಮ್ಮ, **ಸನಿಮ್** - ಹವಿರ್ಧಾನವನ್ನು, ಭಜಿಸಲು ಯೋಗ್ಯವಾದುದನ್ನು, **ನವ್ಯಾಸಂ** - ಹಿಂದೆ ಅನ್ಯರಾರೂ ಮಾಡಿರದ, ನಿತ್ಯ ನವೀನವಾದ ಬೋಧನೆಯನ್ನು, **ಗಾಯತ್ರಮ್** - ಗಾಯತ್ರೀ ಛಂದಸ್ಸಿನಲ್ಲಿ ಮಾಡುವ ಸಾಮಗಾನವನ್ನು, ಸ್ತುತಿಯನ್ನು, **ದೇವೇಷು** - ದೇವತೆಗಳಲ್ಲಿ, ಇಂದ್ರಿಯಗಳಲ್ಲಿ, **ಸುಪ್ರವೋಚ** - ಸರಿಯಾಗಿ ಉಪದೇಶಮಾಡು, ಪ್ರೇರಿಸು.

ಅಗ್ನಿಭಗವಂತನೇ ನೀನು, ಈ ಅನುಷ್ಠಾನದಲ್ಲಿ ಸ್ತುತಿರೂಪವಾಗಿ ನಾವು ಗಾನ ಮಾಡುತ್ತಿರುವ ಗಾಯತ್ರೀ ಛಂದಸ್ಸಿನ ನಿತ್ಯನೂತನವಾದ ಸಾಮಗಾನಗಳಿಂದ ನಮ್ಮ ಈ ಇಂದ್ರಿಯಗಳು ನಿನ್ನ ಕಡೆಗೆ ಪ್ರವೃತ್ತವಾಗುವಂತೆ ಉಪದೇಶಿಸು ಮತ್ತು ಪ್ರೇರಿಸು.

ಅನಲ!. ಗಾಯತ್ರಯಿಂ ಪ್ರಾಣಸಂತ್ರಾಣನುತಿಯಿಂ
ನೂತನೋಜ್ಜ್ವಲಹವ್ಯ-ಕವ್ಯ ನೈವೇದ್ಯರಸಮಂ ।
ಕೆಯ್ಗೊಂಡು ದೇವರ್ಕಳೆಡೆ ಸಾರ್ವವ್ವೆ, ರಕ್ಷಿಸ್ವೆ ॥

## ಋಕ್ - ೨೯

ಗೋಪವನ ಆತ್ರೇಯಃ ॥ ಗಾಯತ್ರ್ಯಗ್ನಿಃ ॥

೧ ೨ ೩ ೧ ೨ ೩ ೧ ೨ ೧

**ತಂ ತ್ವಾ ಗೋಪವನೋ ಗಿರಾ ಜನಿಷ್ಠದಗ್ನೇ ಅಙ್ಗಿರಃ ।**

೧ ೨ ೩ ೧ ೨

**ಸ ಪಾವಕ ಶ್ರುಧೀ ಹವಮ್ ॥** *೯.೨೯* ॥

೨ ೩ ೧ ೨ ೩ ೨ ೧ ೨ ೧ ೩ ೨ ೩

**ತಮ್ - ತ್ವಾ - ಗೋಪವನಃ - ಗಿರಾ । ಜನಿಷ್ಠತ್ - ಅಗ್ನೇ - ಅಂಗಿರಃ ॥ ಸಃ - ಪಾವ**

೧ ೨೧

**ಕ - ಶ್ರುಧಿ - ಹವಮ್ ॥** *೯.೨೯* ॥

ಗೌಪವನಂ ॥ ಗೋಪವನೋ ಗಾಯತ್ರ್ಯಗ್ನಿಃ ॥

೫ ೦ ೦ ೧ ^ ೩ ೫ ೨ ೧ ೨ ೧

**೨೯.೧. ತನ್ತ್ವಾಗೋಪಾ ॥ ವಾನೋ೭೨ಗಾ೭೨೩೪೫ಇರಾ । ಜನಾಇಷ್ಠದಾ ।**

೮ ^ ೩ ೫ ೨ ^ ೩ ೫ ೨ ^

**ಗ್ನಯಾ೭೨ಙ್ಗಾ೭೨೩೪೫ಇರಾಃ ॥ ಸಪೌವಾ೬೨೩೪೫ವಾ । ಕೌವಾ**

೩ ೫ ೪ ೪

**ಓ೭೨೩೪೫ವಾ ॥ ಶ್ರುಧೀ೭೫ಹವಾಮ್ । ಹೋ೭೫ಇ ॥ ಡಾ ॥**

*ದೀ - ೨ । ಪ - ೯ । ಮಾ - ೮ । ಝ್ಯು । ೧೪ ॥* **೪೮** ॥

**ಹೇ ಅಗ್ನೇ ತಂ ತ್ವಾಮ್ ಗೋಪವನಃ** ಋಷಿಃ **ಗಿರಾ** ಸ್ತುತ್ಯಾ **ಜನಿಷ್ಠತ್** ಜನಯತಿ ವರ್ಧಯತಿ ಸ್ತೂಯಮಾನಾಹಿ ದೇವತಾ ವರ್ಧನ್ತೇ । ತಾದೃಶಾಗ್ನೇ! **ಅಂಗಿರಃ** ಸರ್ವತ್ರ

ಗನ್ತಃ; ಅಂಗಿರಸಾಂ ಪುತ್ರೋ ವಾ **ಹೇ ಪಾವಕ**, ಶೋಧಕ! ಗೋಪವನಸ್ಯ **ಹವಮ್** ಆಹ್ವಾನಂ **ಶ್ರುಧಿ** ಶ್ರುಣು । ತಂ ತ್ವಾ ಇತಿ ಜನಿಷ್ಠತ್ ಇತಿ ಚ ಛನ್ದೋಗಾಃ ಯಂ ತ್ವಾ ಇತಿ ಜನಿಷ್ಠತ್ ಇತಿ ಚ ಬಹ್ವೃಚಾಃ ॥

**ಅಗ್ನೇ** - ಅಗ್ನಿಭಗವಂತನೇ, **ಗೋಪವನಃ** - ಈ ಹೆಸರಿನ ಋಷಿ, ಪವಿತ್ರ ವಾಣಿಯ ಉದ್ಗಾತಾ, ಇಂದ್ರಿಯ ನಿಗ್ರಹ ಮಾಡಿ ಪವಿತ್ರನಾಗಿರುವ ಉಪಾಸಕ, **ಗಿರಃ** - ವಾಣಿ, ಸ್ತುತಿ, **ಜನಿಷ್ಠತ್** - ಪ್ರಕಟಿಸಿದನು, ಉತ್ಪತ್ತಿ ಮಾಡಿದನು, ವೃದ್ಧಿ ಮಾಡಿದನು, **ಅಂಗಿರಃ** - ಪ್ರಾಣೋ ವಾ ಅಂಗಿರಾಃ - *ಶತಪಥ ೧.೧.೨.೨೮*, ಶರೀರದ ಅಂಗಗಳಲ್ಲಿ ರಸರೂಪದಲ್ಲಿರುವ ಶಕ್ತಿ ಪ್ರಾಣದ ಪ್ರಾಣವಾದ ಪರಮಾತ್ಮ, ಅಂಗಾರದಿಂದ ಕೂಡಿದ, ದಹಿಸುವ, ಅಂಗಿರಸನ ಪುತ್ರನಾದ, ಅಗ್ನಿ ಸರ್ವತ್ರ ಗತಿಶೀಲನಾದ, **ಅಂಗಿರಸಾಂ ವಾ ಏಕೋಗ್ನಿಃ** - ಐ.ಬ್ರಾ.೬.೩೪ ॥ **ಪಾವಕ** - ಪಾವನ ಗೊಳಿಸುವ, ಶೋಧಿಸುವ, **ಹವವತ್** - ಆಹ್ವಾನವನ್ನು, ಸ್ತೋತ್ರ, ಗುಣವರ್ಣನೆ ಯನ್ನು, **ಶ್ರುಧಿ** - ಕೇಳು.

ಶರೀರದ ಅಂಗೋಪಾಂಗಗಳಲ್ಲಿ ವ್ಯಾಪಿಸಿರುವ, ಪಾವನಗೊಳಿಸುವ ಜ್ಞಾನಸಾಗರ ನಾದ ಅಗ್ನಿಭಗವಂತನೇ ಸಂಯಮಿಯಾದ ಉದ್ಗಾತೃವು ಗಾನಮಾಡುತ್ತಿರುವ ಗುಣವರ್ಣ ನೆಯ ಸ್ತುತಿರೂಪವಾದ ನಮ್ಮ ಆಹ್ವಾನವನ್ನು ಆಲಿಸು.

*ಗೋಪವನಮುನಿಮಂತ್ರದೃಷ್ಟನೇ! ಪಾವನಾತ್ಮ!*
*ಸಕಲರಂತರ್ಯಾಮಿ! ನಮ್ಮೀ ಮೊರೆಯನಾಲಿಸ್ಯೆ ।*
*ಸರ್ವಚೈತನ್ಯಪರ! ಆರೋಗ್ಯನಿಧಿ! ರಕ್ಷಿಸ್ಯೆ ॥*

## ಋಕ್ - ೩೦

ವಾಮದೇವೋ ಗೌತಮಃ ॥ ಗಾಯತ್ರ್ಯಗ್ನಿಃ ॥

೨ ೩ ೧ ೨ ೩ ೨ ೩ ೨ ೩ ೧ ೨
**ಪರಿ ವಾಜಪತಿಃ ಕವಿರಗ್ನಿರ್ಹವ್ಯಾನ್ಯಕ್ರಮೀತ್ ।**

೨ ೩ ೧ ೨ ೩ ೧ ೨
**ದಧದ್ರತ್ನಾನಿ ದಾಶುಷೇ ॥** *೧೦.೩೦* ॥

೧೨೦ ೧ ೨೦ ೧ ೨೦ ೩ ೨ ೩ ೨ ೩ ೧ ೨ ೩ ೧೨೦
ಪರಿ – ವಾಜಪತಿಃ – ವಾಜ – ಪತಿಃ – ಕವಿಃ । ಅಗ್ನಿಃ – ಹವ್ಯಾನಿ – ಅಕ್ರಮೀತ್ – ದಧತ್ –

೧೨೦ ೩ ೧ ೨
ರತ್ನಾನಿ – ದಾಶುಷೇ ॥ ೧೦.೩೦ ॥

ಸೌರ್ಯಮ್ ॥ ಸೂರ್ಯವರ್ಚಾ ವಾ ವಸುರೋಚಿರ್ವಾ ॥ ಗಾಯತ್ರ್ಯಗ್ನಿಃ ॥

೪ ೫೦ ೪ ೫ ೨ ೧ ೨ — ೧
೩೦.೧. ಪರ್ಯೌ । ಹೋಇವಾಜಾ ॥ ಪತಾಇಃಕಾ೨೧ವೀ೨೨ಃ । ಅಗ್ನಿ

೨ ೧ ೦ ೧ ೧ — ೧ ೧ ^ ೩
ರ್ಹವ್ಯಾ । ನಾಯಕ್ರಮೀ೨೨ತ್ ॥ ದಧಾ೨೨೩ತ್ ॥ ರಾ೨೨ತ್ನಾ೨

೫೦ ೦ ೨ ೦ ೧ ೩ ೧೧೧
೨೩೪ಔಹೋವಾ ॥ ನಿದಾಶುಷೇ೨೨೩೪೫ ॥

*ದೀ – ೫ । ಪ – ೮ । ಮಾ – ೬ । ಋ । ೧೫ । ೪೯ ॥*

**ವಾಜಪತಿಃ** ವಾಜಾನಾಮನ್ನಾನಾಂ ಪತಿಃ ಪಾಲಕಃ – ಪರಿವಾಜಪತಿಃ ಕವಿರಿತ್ಯೇಷ ಹಿ ವಾಜಾನಾಂ ಪತಿರಿತಿ ಬ್ರಾಹ್ಮಣಮ್ – **ಕವಿಃ** ಕ್ರಾಂತದರ್ಶೀ ಮೇಧಾವೀನಾ । **ದಾಶುಷೇ** ಹವಿರ್ದತ್ತವತೇ ಯಜಮಾನಾಯ **ರತ್ನಾನಿ** ರಮಣೀಯಾನಿ ಧನಾನಿ **ದಧತ್** ಪ್ರಯಚ್ಛನ್ **ಅಗ್ನಿಃ ಹವ್ಯಾನಿ** ಹವೀಂಷಿ **'ಪರ್ಯ ಕ್ರಮೀತ್'** ಪರಿಕ್ರಾಮತಿ ವ್ಯಾಪ್ನೋತೀತ್ಯರ್ಥಃ ॥

ಅಗ್ನಿಷೋಮೀಯಸ್ಯ ಪಶೋಃ ಪರ್ಯಗ್ನಿಕರಣೇ ಕ್ವಚಿತ್ ಬ್ರಾಹ್ಮಣೇ ಪ್ರಸ್ತೋತುರ್ವಿನಿಯೋಗೇನೈವ ಭಾವ್ಯಮ್ । ಪರ್ಯಕ್ರಮೀತ್ ಪರಿಕ್ರಾಮತಿ ಪರಿತೋ ಗಚ್ಛತಿ । ಪರಿಕ್ರಮಿತವಾನ್ ಪರಿಗಮಿತವಾನ್ । ನೀತವಾನಿತ್ಯರ್ಥಃ – ಮಾಧವ ಭಾಷ್ಯ ॥

**ವಾಜಪತಿಃ** - ಅನ್ನಗಳ ಸ್ವಾಮಿ, ಅನ್ನದಾತ, ಅಮೃತ ಸ್ವರೂಪಿ, ಜ್ಞಾನಿ, ಆನಂದ ಸ್ವರೂಪಿ, **ಅಗ್ನಿಃ** - ಅಗ್ನಿ, ಪ್ರಕಾಶಸ್ವರೂಪೀ ಪರಮಾತ್ಮ, **ಕವಿಃ** - ಮೇಧಾವಿ, ಕ್ರಾಂತ ದರ್ಶಿ, **ದಾಶುಷೇ** - ಹವಿರ್ದಾತೃ, ದಾನಶೀಲ, ಆತ್ಮಸಮರ್ಪಣೆ ಮಾಡುವ ಉಪಾಸಕ, ಯಜ

ಮಾನನಿಗಾಗಿ, **ರತ್ನಾನಿ** - ರಮಣೀಯವಾದ ರತ್ನಗಳನ್ನು, ಐಹಿಕ ಆಮುಷ್ಮಿಕ ಪ್ರಿಯವಾದ ಧನವನ್ನು, **ದಧತ್** - ಕೊಡುತ್ತಾನೆ, **ಹವ್ಯಾನಿ** - ಹವಿರ್ದ್ರವ್ಯಗಳನ್ನು, **ಪರ್ಯಕ್ರಮೀತ್** - ಸರ್ವತ್ರ ವ್ಯಾಪಿಸಿರುತ್ತಾನೆ, ಸ್ವೀಕರಿಸುತ್ತಾನೆ.

ಅನ್ನದಾತನೂ ಕ್ರಾಂತದರ್ಶಿಯೂ ಪ್ರಕಾಶಸ್ವರೂಪಿಯೂ ಸರ್ವವ್ಯಾಪಿಯೂ ಆದ ಅಗ್ನಿಭಗವಂತನು ಶ್ರದ್ಧೆಯಿಂದ ಆತ್ಮಸಮರ್ಪಣ ಪೂರ್ವಕವಾಗಿ ಅರ್ಪಿಸುವ ಹವಿಸ್ಸನ್ನು ಸ್ವೀಕರಿಸಿ ದಾನಶೀಲನಾದ ಹವಿರ್ದಾತೃವಿಗೆ ಐಹಿಕ ಆಮುಷ್ಮಿಕ ಪ್ರಿಯವಾದ ಧನವನ್ನು ದಯಪಾಲಿಸುತ್ತಾನೆ.

*ಸರ್ವಜ್ಞ! ಅನ್ನದನೆ! ಯಾಜಕರು ಅರ್ಪಿಸಿರ್ಪ*
*ಹವ್ಯಮಂ ಸ್ವೀಕರಿಸಿ ಪರಮಾರ್ಥಪರರಿಗೆಲ್ಲಂ*
*ಧನಧಾನ್ಯನಿಧಿ ನೀಳ್ಪುದೈ! ನೀನೆ ಕವಿವರೇಣ್ಯಂ!*

## ಋಕ್ - ೩೧

ಪ್ರಸ್ಕಣ್ವಃ ಕಾಣ್ವಃ ॥ ಗಾಯತ್ರ್ಯಗ್ನಿಃ ॥

೨ ೩ ೨ ೩ ೧ ೨ ೩ ೧ ೨ ೩ ೧ ೨
**ಉದು ತ್ಯಂ ಜಾತವೇದಸಂ ದೇವಂ ವಹನ್ತಿ ಕೇತವಃ ।**

೩ ೧ ೨೦ ೩ ೧ ೨
**ದೃಶೇ ವಿಶ್ವಾಯ ಸೂರ್ಯಮ್ ॥** *೧೧.೩೧ ॥*

೨ ೩ ೩ ೩ ೧ ೨ ೩ ೨ ೩ ೩ ೨
**ಉತ್ - ಉ - ತ್ಯಮ್ - ಜಾತವೇದಸಮ್ - ಜಾತ - ವೇದಸಮ್ । ದೇವಮ್ -**

೩ ೧ ೨ ೩ ೨ ೧ ೨೦ ೧ ೨೦
**ವಹನ್ತಿ - ಕೇತವಃ ॥ ದೃಶೇ - ವಿಶ್ವಾಯ - ಸೂರ್ಯಮ್ ॥** *೧೧.೩೧ ॥*

ಸೌರ್ಯಮ್ ಸೂರ್ಯೋ ಗಾಯತ್ರೀ ಸೂರ್ಯಃ ॥

೩೧.೧. ಉದುತ್ಯಮ್ । ಓಹಾಇ ॥ ಜಾ । ತವೇ೨ದಾ೨೩೪ಸಾಮ್ । ದೇವಂ ವಹಾ । ತೀಕೇತಾ೨೩೪ವಾಃ ॥ ದಾ೨೩೪ಶೇಽಹಾಇ ॥ ವಾಇಶ್ವಾಯಸೂ । ರ್ಯಾಮ್ । ಔ೨೩ಹೋವಾ । ಹೋ೨೫ಇ ॥ ಡಾ ॥ *ದೀ - ೪ । ಪ - ೧೨ । ಮಾ - ೮ । ಥೈ । ೧೬ । ೫೦ ॥*

ಇಯಂ ಸೌರೀ ಆಗ್ನೇಯ ಸಮಾಖ್ಯಾನಂ ಛತ್ರಿಣೋ ಗಚ್ಛನ್ತೀತಿವತ್ ಪ್ರಾಣ ಭೃತ್ ಉಪದಧಾತೀತಿ ವಚ್ಚದ್ರಷ್ಟವ್ಯಮ್ । **ಕೇತವಃ** ಪ್ರಜ್ಞಾಪಕಾಃ ಸೂರ್ಯಾಶ್ವಾಃ ಯದ್ವಾ ಸೂರ್ಯರಶ್ಮಯಃ **ಸೂರ್ಯಮ್** ಸರ್ವಸ್ಯ ಪ್ರೇರಕಮಾದಿತ್ಯಮ್ **ಉದ್ವಹನ್ತಿ** ಊರ್ಧ್ವಂ ವಹನ್ತಿ **ಉ** । ಇತಿ ಪಾದಪೂರಣಃ - ಉಕ್ತಂ ಚ ಮಿತಾಕ್ಷರೇಷ್ವನರ್ಥಕಾಃ ಕಮೋಮಿದ್ವಿತಿ - ಕಿಮರ್ಥಮ್? **ವಿಶ್ವಾಯ** ವಿಶ್ವಸ್ಮೈ ಸರ್ವಸ್ಮೈಭುವನಾಯ **ದೃಶೇ** ದ್ರಷ್ಟುಮ್ । ಯಥಾ ಸರ್ವೇ ಜನಾಃ ಸೂರ್ಯಂ ಪಶ್ಯಂತಿ ತಥೋರ್ಧ್ವಂ ವಹನ್ತೀತ್ಯರ್ಥಃ । ಕೀ ದೃಶಂ ಸೂರ್ಯಮ್? **ತ್ಯಂ** ತಂ ಪ್ರಸಿದ್ಧಂ **ಜಾತವೇದಸಂ** ಜಾತಾನಾಂ ಪ್ರಾಣಿನಾಂ ವೇದಿತಾರಂ, ಜಾತ ಪ್ರಜ್ಞಂ, ಜಾತಧನಂ ವಾ, **ದೇವಂ** ದ್ಯೋತಮಾನಮ್ - ಅತ್ರ ನಿರುಕ್ತಮ್ - **ಉದ್ವಹನ್ತಿ** ಜಾತವೇದಸಂ ದೇವಮಶ್ವಾಃ ಕೇತವೋ ರಶ್ಮಯೋ ವಾ ಸರ್ವೇಷಾಂ ಭೂತಾನಾಂ ಸಂದರ್ಶನಾಯ ಸೂರ್ಯಮ್ - *೧೨.೨,೪* ಇತಿ ॥

**ಉ** - ಭಗವಂತನನ್ನು ತಿಳಿಯುವುದು ಹೇಗೆ?, ಸೂರ್ಯನು ಇಷ್ಟು ದೂರ ವ್ಯಾಪಿಸಿರುವುದು ಹೇಗೆ? ಎಂಬುದಕ್ಕೆ, **ತ್ಯಮ್** - ಪ್ರಸಿದ್ಧ ಉತ್ತರವಾಗಿ, **ಜಾತವೇದಸಮ್** - ಸರ್ವಜ್ಞ, ವೇದಗಳನ್ನು ಸೃಷ್ಟಿಸಿದ ಜೀವಿಗಳ ಒಳಹೊರಗನ್ನು ಬಲ್ಲ, **ದೇವಮ್** - ದೀಪ್ತಿ ವಂತನಾದ, **ಸೂರ್ಯಮ್** - ಸರ್ವಪ್ರಕಾಶನಾದ ಸೂರ್ಯಭಗವಂತನನ್ನು, **ಸೂರ್ಯ ದೃಶೇ** - ಸೂರ್ಯನನ್ನು ತೋರಿಸಲು, **ಕೇತವಃ** - ಕಿರಣಗಳು, ಪ್ರಜ್ಞಾನವಂತರು, ಜ್ಞಾನಿ

ಗಳು, ವಿಜ್ಞಾನಗಳು, **ವಿಶ್ವಾಯ ದ್ರಷ್ಟುಮ್** - ಸಕಲ ಪ್ರಪಂಚವನ್ನು ನೋಡಲು, ಸಕಲ ಪ್ರಪಂಚಕ್ಕೆ ದರ್ಶನ ಮಾಡಿಸಲು, **ಉತ್ - ಉ** - ವಹನ್ತಿ, **ಉದ್ವಹನ್ತಿ** - ಮೇಲೇಳುತ್ತವೆ.

ಭಗವಂತನನ್ನು ದರ್ಶನ ಮಾಡುವುದು ಹೇಗೆ? ಅವನು ನಮ್ಮವರೆಗೆ ವ್ಯಾಪಿಸಿರುವುದು ಹೇಗೆ? ಎಂಬುದಕ್ಕೆ ಉತ್ತರವಾಗಿ ವೇದಗಳನ್ನು ಸೃಷ್ಟಿಸಿದವನೂ ಸರ್ವಜ್ಞನೂ ದೀಪ್ತಿವಂತನೂ ಪ್ರಸಿದ್ಧನೂ ಆದ ಸೂರ್ಯ ಭಗವಂತನನ್ನು ಪ್ರಪಂಚಕ್ಕೆ ದರ್ಶನ ಮಾಡಿಸಲು ಕಾತುರರಾದ ಜ್ಞಾನಿಗಳಂತೆ ಕಿರಣಗಳು ಅತ್ಯಂತ ಎತ್ತರಕ್ಕೆತ್ತಿ ಹೊತ್ತು ಕೊಂಡಿವೆ.

ಸೂರ್ಯನು ಕಿರಣಗಳ ಮೂಲಕ ಎಲ್ಲವನ್ನೂ ವ್ಯಾಪಿಸಿ ಪ್ರಕಾಶಿಸುವಂತೆ ಭಗವಂತನು ತನ್ನ ಚೇತನತ್ವಾದಿ ದಿವ್ಯಗುಣಗಳಿಂದ ಅವನಿರುವಿಕೆಯ ಜ್ಞಾನವನ್ನುಂಟು ಮಾಡುತ್ತಾನೆ.

*ಜಗಕೆಲ್ಲ ಸೂರ್ಯಸಂದರ್ಶನಪ್ರಜ್ಞೆಯೊಸಗಲ್*
*ಅರುಣಕಿರಣಗಳಿಂದೆ ದೇವ! ನೀಂ ಉದಿಸುತಿರ್ಪಯ್ ।*
*ನಿನ್ನನೆಂದುಂ ಕಾಣುತಿರ್ಪೆವಯ್ ಜಾತವೇದ!*

## ಋಕ್ - ೩೨

ಮೇಧಾತಿಥಿಃ ಕಾಣ್ವಃ ॥ ಗಾಯತ್ರ್ಯಗ್ನಿಃ ॥

೩ ೨ ೩ ೧ ೨ರ ೩ ೧ ೨ ೩ ೨
**ಕವಿಮಗ್ನಿಮುಪ ಸ್ತುಹಿ ಸತ್ಯಧರ್ಮಾಣಮಧ್ವರೇ ।**

೩ ೧ ೨ ೩ ೧ ೨
**ದೇವಮಮೀವಚಾತನಮ್ ॥** *೧೨.೩೨ ॥*

೩ ೨ ೩ ೨ ೧ ೨ರ ೩ ೧ ೨ ೩ ೨ ೩
**ಕವಿಮ್ - ಅಗ್ನಿಮ್ - ಉಪ - ಸ್ತುಹಿ । ಸತ್ಯಧರ್ಮಾಣಮ್ - ಸತ್ಯ - ಧರ್ಮಾಣಮ್ -**
೨ ೩ ೨ ೩ ೧ ೨ ೩ ೧ ೨ರ
**- ಅಧ್ವರೇ ॥ ದೇವಮ್ - ಅಮೀವಚಾತನಮ್ - ಅಮೀವ - ಚಾತನಮ್ ॥**

ಕಾವಮ್ ॥ ಕವೀರ್ವಸುರೋಚಿರ್ಗಾಯತ್ರ್ಯಗ್ನಿಃ ॥

೫ ೨ ೧ ೧ ೩ ೫೦ ೦
೩೨.೧. **ಕವಿಮಗ್ನೀಮ್ ॥ ಉಪಾ౽೨೩ । ಸ್ತೂ౽೨ಹಾ౽೨೩ಳಔಹೋವಾ ।**

೨೧೨ ೦ ೧೦ ೨೦ ೦ ೧೦
**ಸತ್ಯಧರ್ಮಾಣಮಧ್ವರೇ ॥ ದೇವಾಮ್ ॥ ಅಮೀವಚಾತಾ౽೨೩**

೨ ೧
**ನಾ౽೩ಳ೩ಮ್ । ಓ౽೨೩ಳ೫ಇ ॥ ಡಾ ॥**

ದೀ - ೭ । ಪ - ೮ । ಮಾ - ೫ । ಜು । ೧೭ ॥ ೫೧ ॥

ಹೇ ಸ್ತೋತೃ ಸಂಘ! **ಅಧ್ವರೇ** ಕ್ರತೌ **ಅಗ್ನಿಮ್ ಉಪಸ್ತುಹಿ** ಉಪೇತ್ಯ ಸ್ತುತಿಂ ಕುರು ಕೀದೃಶಮ್? **ಕವಿಮ್** ಮೇಧಾವಿನಂ**ಸತ್ಯಧರ್ಮಾಣಮ್** ಸತ್ಯವಚನರೂಪೇಣ ಧರ್ಮೇಣೋಪೇತಂ, **ದೇವಂ** ದ್ಯೋತಮಾನಮ್ **ಅಮೀವಚಾತನಮ್**, ಅಮೀ ವಾನಾಂ ಹಿಂಸಕಾನಾಂ ಶತ್ರೂಣಾಂ ವಾ ಘಾತಕಮ್ ॥ ಅನ್ತರಾತ್ಮನಶ್ಚಾಯಂ ಪ್ರೈಷಃ । ಇತಿ ಮಾಧವಃ ॥

**ಅಧ್ವರೇ** - ಯಜ್ಞದಲ್ಲಿ, ಅಧ್ಯಾತ್ಮಯಜ್ಞದಲ್ಲಿ, **ಕವಿಮ್** - ಮೇಧಾವಿ, ವೇದಕರ್ತೃ, ಸರ್ವಜ್ಞ, ಬುದ್ಧಿಪ್ರೇರಕ, **ಸತ್ಯಧರ್ಮಾಣಮ್** - ಸತ್ಯಧರ್ಮಗಳ ನಿಯಮದಿಂದ ಚಲಿಸದ, **ದೇವಮ್** - ದೀಪ್ತಿವಂತನಾದ, ಪ್ರಕಾಶಯುತ, **ಅಮೀವ ಚಾತ ನಮ್** - ಶತ್ರು/ ರೋಗ/ ಅಜ್ಞಾನ ನಿವಾರಕನಾದ, **ಅಗ್ನಿಮ್** - ಅಗ್ನಿಯನ್ನು, **ಉಪ ಸ್ತುಹಿ** - ಕುಳಿತು ಸ್ತುತಿಸುತ್ತಾ ಉಪಾಸನೆ ಮಾಡಿ.

ಆಧ್ಯಾತ್ಮಿಕಯಜ್ಞದಲ್ಲಿ ನಿತ್ಯಶುದ್ಧಬುದ್ಧಿಯ ಸತ್ಯಧರ್ಮಗಳ ನಿಯಮದಿಂದ ಅಲ್ಲಾಡದವನೂ ಮೇಧಾವಿಯೂ ದೀಪ್ತಿವಂತನೂ ಆಧಿವ್ಯಾಧಿಗಳ ನಿವಾರಕನೂ ಆದ ಅಗ್ನಿಯ ದಿವ್ಯಗುಣಗಳನ್ನು ಸ್ತುತಿಸುತ್ತಾ ಉಪಾಸನೆ ಮಾಡಿ.

*ಋತ್ವಿಜರೆ! ಯಾಗದೊಳ್ ಸತ್ಯಧರ್ಮಾತ್ಮನಂ ನೀಮ್*
*ಕವಿಯಂ ಸಮಸ್ತರೋಗಾಂತ್ಯನಂ ಲೋಕಹಿತನಂ ।*
*ಅಗ್ನಿಯಂ ಸೊಗಮಪ್ಪ ಪರಿಯಿಂದೆ ಭಜಿಸಿರೆಂದುಂ ॥*

## ಋಕ್ - ೩೩

ಸಿಂಧುದ್ವೀಪ ಆಂಬರೀಷಃ ॥ ತ್ರಿತ ಆಪ್ತ್ಯೋವಾ ॥ ಗಾಯತ್ರ್ಯಗ್ನಿಃ ॥

೧ ೨ ೩ ೨ ೩೧ ೨ ೩ ೧ ೨ ೩ ೧ ೨
**ಶಂ ನೋ ದೇವೀರಭಿಷ್ಟಯೇ ಶಂ ನೋ ಭವನ್ತು ಪೀತಯೇ ।**

೨ಉ ೩ ೧ ೨
**ಶಂ ಯೋರಭಿ ಸ್ರವನ್ತು ನಃ ॥** *೧೩.೩೩ ॥*

೨ ೩ ೨ ೩ ೧ ೨ ೩ ೧ ೨
**ಶಮ್ - ನಃ - ದೇವೀಃ - ಅಭಿಷ್ಟಯೇ । ಶಮ್ - ನಃ - ಭವನ್ತು - ಪೀತಯೇ ॥**

೩ ೨ ೩
**ಶಮ್ - ಯೋಃ - ಅಭಿ - ಸ್ರವನ್ತು - ನಃ ॥** *೧೩.೩೩ ॥*

ಕಾಶೀತಮ್, ಕಾಪೀತಂ ವಾ ಸುಮನ್ದಂ ವಾ ॥ ಪಾರಾವತೋ/ ಪಾರಾವತಿರ್ವಾ ಗಾಯತ್ರ್ಯಗ್ನಿಃ ॥

೫೦ ೦ ೨೧ ೨ ^ ೫೦
೩೩.೧. **ಶನ್ನೋದೇವೀಃ ॥ ಅಭಿಷ್ಟಾಽ೨೩ಯಾಽ೩೪ಇ ॥ ಶನ್ನೋಭವಾ ।**

೨ ೧೦ ೨ ^ ೫ ೦ ೨ ೧ ^
**ತುಪೀತಾಽ೨೩ಯಾಽ೩೪ಇ ॥ ಶಂಯೋರಭೀ । ಸ್ರವ । ತೂಽ೨ ।**

೩ ೫೦೦ ೩ ೫
**ನಾಽ೨೩೪ । ಔಹೋವಾ ॥ ಊಽ೨೩೪ಪಾ ॥**

*ದೀ - ೭ । ಪ - ೧೦ । ಮಾ - ೩ । ಷ್ವ । ೧೮ ॥ ೫೨ ॥*

ಕಾಶೀತೋತ್ತರಮ್ ॥ ಪಾರಾವತೋ ಗಾಯತ್ರ್ಯಗ್ನಿಃ ॥

೩ ೨ ^ ೧ ೦ ೦ ೫೦ ೦ ೪ ೫
೩೩.೨. **ಹುವಾಽ೩ಹೋಽ೨೩೪ಇ । ಶನ್ನೋದೇವೀಃ । ಅಭಿಷ್ಟಯಾಇ ॥**

೩ ೨ ^ ೧ ೦ ೫ ೪ ೦ ೫ ೩ ೨
**ಹುವಾಽ೩ಹೊಽ೨೩೪ಇ । ಶನ್ನೋಭವ । ತುಪೀತಯಾಇ ॥ ಹುವಾ**

^ ೧ ೦ ೫ ೪ ೫ ೩ ೨ ^
೨೩ಹೋ೭೨೩೪೩ । ಶಂಯೋರಭಿ । ಸ್ರವನ್ತುನಾಃ ॥ ಹುವಾ೭೩

೧ ^ ೩ ೫೦ ೦ ೩ ೫
ಹೋ೭೨ । ವಾ೭೨೩೪ಔಹೋವಾ ॥ ಊ೭೨೩೪ಪಾ ॥

*ದೀ - ೮ । ಪ - ೧೨ । ಮಾ - ೮ । ಶ್ವೈ । ೧೯ ॥ ೫೩ ॥*

**ನಃ** ಅಸ್ಮಾಕಂ ಪಾಪಾಪನೋದ ದ್ವಾರೇಣ **ಶಂ** ಸುಖಂ ಭವನ್ತು । **ದೇವೀಃ** ದೇವ್ಯಃ ಆಪಃ **ಅಭಿಷ್ಟಯೇ** ಅಸ್ಮದ್ಯಜ್ಞಾಯ ಭವನ್ತು ಯಜ್ಞಾಂಗಭಾವಾಯ ಚ ಭವನ್ತು ಇತ್ಯರ್ಥಃ । ಅಪಿ ಚ ನಃ ಅಸ್ಮತ್ಸಂಬಂಧಿನೇ **ಪೀತಯೇ** ಪಾನಾಯ ಚ **ಶಂ** ಸುಖಂ ಭವನ್ತು । ತಥಾ **ಶಮ್** ಉತ್ಪನ್ನಾನಾಂ ರೋಗಾಣಾಮ್ ಶಮನಮ್ **ಯೋಃ** ಯಾಪನಂ ಅನುತ್ಪನ್ನಾನಾಂ ಪೃಥಕ್ಕರಣಂ ಚ ಕುರ್ವನ್ತು । ಅಪಿ ಚ **ನಃ** ಅಸ್ಮಾಕಂ **ಅಭಿ** ಉಪರಿಸ್ರವನ್ತು ಅತ್ಯರ್ಥಂ ಸಿಂಚನ್ತು । **ಶನ್ನೋ ಭವನ್ತು** ಇತಿ ಛಂದೋಗಾಃ । **ಆಪೋ ಭವನ್ತು** ಇತಿ ಬಹ್ವೃಚಾಃ ತೈತ್ತಿರೀಯಾಶ್ಚ ॥

ಸಾಧಾರಣರೋಗದಿಂದ ಬಳಲುತ್ತಿರುವವರಿಗೆ ಸಾಮವೇದಾಧ್ಯಯನ ಮಾಡಿದವರು '**ಶನ್ನೋದೇವೀಃ**' ಗಾನದಿಂದ ಅಭಿಮಂತ್ರಿಸಿದ ಘೃತವನ್ನು ಲೇಪಿಸಿ ಅಭ್ಯಂಜನ ಮಾಡಿಸುತ್ತಿದ್ದರೆ ರೋಗ ಶಮನವಾಗುತ್ತದೆ - *ಸಾ.ವಿ.ಬ್ರಾ. ೨.೩.೧.*

**ನಃ ಶಮ್** - ನಮ್ಮ ಪಾಪಾದಿಗಳು ದೂರವಾಗಿ ಸುಖವುಂಟಾಗಲಿ, **ದೇವೀಃ** - ಜಲ ದೇವತೆಗಳು, ಭಗವಂತನ ದಿವ್ಯಶಕ್ತಿ, ಜ್ಞಾನಜ್ಯೋತಿ, **ಅಭೀಷ್ಟಯೇ** - ಯಜ್ಞಾರ್ಥ ವಾಗಿ, ಯಜ್ಞದಲ್ಲಿ ಭಾಗಿಯಾಗಲು, ಅಭ್ಯುದಯಕ್ಕಾಗಿ, ಇಷ್ಟಾರ್ಥಸಿದ್ಧಿಗಾಗಿ, ಆನಂದ ಕ್ಕಾಗಿ, ಮುಕ್ತಿಗಾಗಿ, **ಪೀತಯೇ** - ಪಾನಾರ್ಥವಾಗಿ, **ಶಮ್ ಭವನ್ತು** - ಮಂಗಳಕರ ವಾಗಿರಲಿ, ಸುಖದಾಯಕವಾಗಿರಲಿ, **ಶಮ್** - ಉತ್ಪತ್ತಿಯಾದ ರೋಗಗಳನ್ನು ವಾಸಿ ಮಾಡಲಿ, **ಯೋಃ** - ಉತ್ಪತ್ತಿಯಾಗದ ರೋಗಗಳು ಬರದಿರಲಿ, **ಅಭಿಸ್ರವನ್ತು** - ಅಮೃತ ವರ್ಷಿಸಲಿ, ಸುಖಶಾನ್ತಿಗಳನ್ನು ದಯಪಾಲಿಸುತ್ತಾ ನೀರು ಸದಾಹರಿಯುತ್ತಿರಲಿ.

ಜಲಾಧಿದೇವತೆಗಳು ನಮ್ಮಲ್ಲಿರುವ ರೋಗಗಳನ್ನು ನಿವಾರಿಸುತ್ತಾ ಬರಬಹುದಾದ ರೋಗಗಳನ್ನು ದೂರ ಮಾಡುತ್ತಾ ಅಭೀಷ್ಟಗಳನ್ನೀಡೇರಿಸಲಿ. ಈ ದಿವ್ಯ ಜಲವು ಯಜ್ಞಾರ್ಥ

ವಾಗಿಯೂ ಪಾನಾರ್ಥವಾಗಿಯೂ ಮಂಗಳಕರವಾಗಿ ಸದಾ ಸುಖಸಮೃದ್ಧಿಗಳನ್ನುಂಟು ಮಾಡುತ್ತಾ ಹರಿಯುತ್ತಿರಲಿ. ಪರಮಾತ್ಮನ ದಿವ್ಯಜ್ಯೋತಿಯು ಅಭ್ಯುದಯವನ್ನುಂಟು ಮಾಡುತ್ತಾ ಮೋಕ್ಷ ಮಾರ್ಗವನ್ನು ಪ್ರಶಸ್ತಗೊಳಿಸಲಿ.

*ಅನಲನೇ! ಸುಖ-ಶಾಂತಿಕರಮಪ್ಪ ಪೇಯಮೆನಿಪ*
*ಮಂಗಳಪ್ರದಪುಣ್ಯತೀರ್ಥಮಂ ಕರುಣಿಸೆಮಗಂ ।*
*ಆ ದಿವ್ಯಜೀವನಂ ಸೊಗಸಾಗಿ ಹರಿಯಲೆಂದುಂ ॥*

## ಋಕ್ - ೩೪

ಉಶನಾ ಕಾವ್ಯಃ ॥ ಗಾಯತ್ರ್ಯಗ್ನಿಃ ॥

೧ ೨ ೩ ೧ ೨೦ ೩ ೧ ೨
**ಕಸ್ಯ ನೂನಂ ಪರೀಣಸಿ ಧಿಯೋ ಜಿನ್ವಸಿ ಸತ್ಪತೇ ॥**

೧ ೨ ೩ ೧ ೨ ೩ ೧ ೨
**ಗೋಷಾತಾ ಯಸ್ಯ ತೇ ಗಿರಃ ॥** *೧೪.೩೪ ॥*

*ಸ್ವ - ೯ । ಉ - ೨ । ಧಾ - ೫೭ । ಥೇ । ದ - ೩ ॥*

೧ ೨೦ ೩ ೨ ೧ ೨೦ ೧ ೨೦ ೩ ೧ ೨೦ ೩
**ಕಸ್ಯ - ನೂನಮ್ - ಪರೀಣಸಿ - ಪರಿ - ನಸಿ । ಧಿಯಃ - ಜಿನ್ವಸಿ - ಸತ್ಪತೇ - ಸತ್ -**

೧ ೨೦ ೨ ೩ ೧ ೨೦ ೩ ೧ ೨೦
**ಪತೇ ॥ ಗೋಷಾತಾ - ಗೋ - ಸಾತಾ - ಯಸ್ಯ - ತೇ - ಗಿರಃ ॥**

*ಆ - ೪೩ । ಅ - ೧೧ । ಪ - ೧೬೭ ॥ ಟೇ । ದ - ೩ ॥*

**ಇತಿ ತೃತೀಯಾದಶತಿಃ ॥ ೩ ॥ ತೃತೀಯಃ ಖಂಡಃ ॥ ೩ ॥**

ಮನಾಜ್ಯೇ ದ್ವೇ । ದ್ವಯೋರ್ಗೌತಮೋ ಗೌರಾಂಗಿರಸೋ ವಾ ಗಾಯತ್ರ್ಯಗ್ನಿಃ ॥

೧ ೨ ^ ೩ ೨^ ೩ ೫ ೧ ೦
೩೪.೧. ಕಸ್ಯಾನೂಽ೧ನಾಽ೨ಮ್ । ಪರೀಣಾಽ೨೩೪ಸೀ ॥ ಧಿಯೋಜಿನ್ವಾ

^ ೩ ೨ ೩ ೫ ೧ ೨೦ ೦ ೧ ೧ ^ ೩
ಽ೨ । ಸಿಸತ್ಪಾಽ೨೩೪ತಾ೩ ॥ ಗೋಷಾತಾಯಾಽ೨೩ ॥ ಸ್ಯಾಽ೨ತಾಽ

೫೦ ೦ ೨ ^ ೩ ೫
೨೩೪ಔಹೋವಾ ॥ ಉಪ್ । ಗೀಽ೨೩೪ರಾಃ ॥

*ದೀ - ೫ । ಪ - ೮ । ಮಾ - ೫ । ಋ । ೨೦ ॥ ೫೪ ॥*

ಗೌರಾಙ್ಗಿರಸಸ್ಯ ಸಾಮ, ಗೌತಮಸ್ಯ ಮನಾಜ್ಯಂ ಮನಾಜ್ಯೋತ್ತರಂ ವಾ ॥

೨೦ ೦ ^ ೧ ೨ ೩ ೨ ೦ ^ ೪
೩೪.೨. ಔಹೋಇಹುಽ೩ವಾಽ೨೩೩ । ಹುವಪಿ । ಕಸ್ಯನೂನಾಽ೩ಮ್ ಪಾಽ

೨೦ ೩ ೫ ೨೦ ೦ ೧ ೨ ೩ ೨ ೦
೩ರೀಣಸಿ ॥ ಔಹೋಇಹುಽ೩ವಾಽ೨೩೩ । ಹುವಪಿ । ಧಿಯೋ

^ ೪ ೨ ೩ ೫ ೨೦ ೦ ೧ ೨ ೩
ಜಿನ್ವಾಽ೩ಸೀಽ೩ಸತ್ಪತಾ೩ ॥ ಔಹೋಇಹುಽ೩ವಾಽ೨೩೩ । ಹುವ

೨ ೦ ೦ ೦ ೩ ೨ ೪
ಪಿ । ಗೋಷಾತಾಯ ॥ ಸ್ಯತಾಽ೩೩ಗಾಽ೫೩ರಾಽ೬೫೬ಃ ॥

*ದೀ - ೧೨ । ಪ - ೧೦ । ಮಾ - ೧೩ । ಚೌ । ೨೧ । ೫೫ ॥*

**ಏಕವಿಂಶತಿಃ ॥ ತೃತೀಯಃ ಖಣ್ಡಃ ॥ ೩ ॥ ತೃತೀಯಾ ದಶತಿಃ ॥ ೩ ॥**

ಹೇ **ಸತ್ಪತೇ** ಸತಾಂಪತೇ! ಅಗ್ನೇ **ನೂನಮ್** ಇದಾನೀಂ **ಕಸ್ಯ**ಕೀದೃಶಸ್ಯ ಜನಸ್ಯ ಪರೀಣಸಿ ಬ್ರಹ್ಮಣಿ **ಧಿಯಃ** ಕರ್ಮಾಣಿ **ಜಿನ್ವಸಿ** ಪ್ರೀಣಯಸಿ । **ಯಸ್ಯ ತೇ** ತವ ಸಮ್ಬನ್ಧಿನ್ಯಃ **ಗಿರಃ** ಸ್ತುತಯಃ **ಗೋಷಾತಾ** ಗೋಸಾತೌ ಗವಾಂ ಲಾಭೇ ಭವನ್ತು ಖಲು । ತಸ್ಮಾತ್ತ್ವಂ ಕುತ್ರತಿಷ್ಠಸಿ? ಅಸ್ಮಾಕಮಿದಾನೀಂ ಗವೇಚ್ಛಾ ಪ್ರವರ್ತತೇ । ಯದ್ವಾ ಹೇ ಅಗ್ನೇ! ತ್ವಮಿ

ದಾನೀಂ ಕಸ್ಯ ಕರ್ಮಾಣಿ ಪ್ರೀಣಯಸಿ? ನ ಕಸ್ಯಾಪೀತ್ಯರ್ಥಃ । ಅಸ್ಮಾಕಮೇವ ಕರ್ಮಾಣಿ ಪ್ರೀಣಯೇತಿ ಭಾವಃ ॥ **ಪರೀಣಸಿ** ಇತಿ **ಸತ್ಪತೇ** ಇತಿ ಚ ಛಂದೋಗಾಃ । **ಪರಿಣಸಃ** ಇತಿ **ದಂಪತೇ** ಇತಿ ಚ ಬಹ್ವೃಚಾಃ ॥

**ಸತ್ಪತೇ** - ಸಜ್ಜನರ ಪಾಲಕನೇ, **ನೂನಮ್** - ಈ ಸಮಯದಲ್ಲಿ, ನ್ಯೂನತೆಯನ್ನು, **ಕಸ್ಯ** - ಯಾರ ಸುಖದ, ಧಿಯಃ ಬುದ್ಧಿ ಅಂತಃಕರಣ ಚತುಷ್ಟಯ, **ಪರೀಣಸಿ** - ಬ್ರಹ್ಮಾನಂದ ಪಡುತ್ತಿರುವೆ, **ಜಿನ್ವಸಿ** - ತೃಪ್ತಿಗೊಳ್ಳು, ತಲುಪಿಸು, **ಗೋಷಾತಾ** - ಗೋವುಗಳ ಲಾಭಕ್ಕಾಗಿ - ಇಂದ್ರಿಯಗಳ ತೃಪ್ತಿಗಾಗಿ, ಜ್ಞಾನದರ್ಶನಕ್ಕಾಗಿ, **ಗಿರಃ** - ಸ್ತುತಿ, ವಾಣಿ.

ಸಜ್ಜನರ ಪಾಲಕನೇ ನಿನ್ನ ಗುಣಕರ್ಮಗಳ ವರ್ಣನೆಯನ್ನು ಅಂತಃಕರಣದಲ್ಲಿ ತುಂಬಿಕೊಂಡು ನನ್ನ ಇಂದ್ರಿಯಗಳು ತೃಪ್ತವಾಗುವಂತೆ ಸಾಮಗಾನದಿಂದ ಸ್ತುತಿಸುತ್ತಾ ಇದೀಗ ಬ್ರಹ್ಮಾನಂದವನ್ನನುಭವಿಸುತ್ತಿದ್ದೇನೆ.

*ಸತ್ಯರಕ್ಷಕನೆ! ಆವನ ಬುದ್ಧಿಯಂ ಜತನದಿಂ*
*ಋತಪಥದೆ ನೀಂ ವರ್ತಿಸಿದಪೆಯಯ್? ತಿಳಿಯಿತೆನಗಂ*
*ಆರ ನುಡಿ ವಿದ್ಯೆಗಾಕರಮೊ ಅವರೇ ನಿನ್ನವರ್ ॥*

## ಋಕ್ - ೩೫

ಶಂಯುರ್ಬಾರ್ಹಸ್ಪತ್ಯಃ ॥ ಬೃಹತ್ಯಗ್ನಿಃ ॥

೩ ೧ ೨ ೩೧ ೨ ೩೧ ೨ ೩ ೧೨
**ಯಜ್ಞಾಯಜ್ಞಾ ವೋ ಅಗ್ನಯೇ ಗಿರಾಗಿರಾ ಚ ದಕ್ಷಸೇ ।**
೧ ೨ ೩ ೨ ೩ ೧ ೨ ೩ ೧೨ ೩ ೨ ೩ ೧ ೨ಂ
**ಪ್ರಪ್ರ ವಯಮಮೃತಂ ಜಾತವೇದಸಂ ಪ್ರಿಯಂ ಮಿತ್ರಂ ನ ಶಂಸಿಷಮ್ ॥**

೩ ೧ ೨ ೩ ೨ ೩ ೧ ೨ ೩ ೧ ೨ ೩ ೨ ೩
**ಯಜ್ಞಾಯಜ್ಞಾ - ಯಜ್ಞಾ - ಯಜ್ಞಾ - ವಃ - ಅಗ್ನಯೇ । ಗಿರಾಗಿರಾ - ಗಿರಾ - ಗಿರಾ -**
೧ ೨ಂ ೧ ೨ಂ ೩ ೨ ೩ ೧ ೨ ೩ ೧ ೨ಂ
**ಚ - ದಕ್ಷಸೇ ॥ ಪ್ರಪ್ರ - ಪ್ರ - ಪ್ರ - ವಯಮ್ - ಅಮೃತಮ್ - ಅ - ಮೃತಮ್ -**

೩ ೧ ೨ ೩ ೨ ೩ ೩ ೨ ೩ ೨ ೩ ೨
ಜಾತವೇದಸಮ್ - ಜಾತ - ವೇದಸಮ್ ॥ ಪ್ರಿಯಮ್ - ಮಿತ್ರಮ್ - ಮಿ - ತ್ರಮ್ -

೩
ನ - ಶಙ್ಸಿಷಮ್ ॥ ೧. ೩೫ ॥

ಉಪಹವೌ ದ್ವೌ ॥ ದ್ವಯೋರ್ಭರದ್ವಾಜೋ ಬೃಹತ್ಯಗ್ನಿಃ ॥

೫ ೦ ೨೦ ೧ ೩ ೨
೩೫.೧. ಯಜ್ಞಾಯಜ್ಞಾ ॥ ವೋ ಅಗ್ನಯಾऽ೩ಇ । ಗಿರಾऽ೨ಗಿರಾऽ೩೪ ।

೩೦ ೨ ^ ೧ ೨^೩ ೫ ೧ ೬೦ ೧
ಹಾಹೋऽ೩ಇ । ಚಾದಕ್ಷಾ೨೩೪ಸಾಇ । ಪ್ರಪ್ರಾऽ೨ವಯಮಮೃತಂ

೨೦ ೧ ೨ ೧ ೨೧
ಜಾ । ತಾವೇऽ೧ದಾಸಾऽ೨ಮ್ ॥ ಪ್ರಿಯಮ್ಮಿತ್ರಾಮ್ । ನಶಙ್ಸಿ

೩೦ ೨^ ೩೦ ೦
ಷಾಮ್ ॥ ಏಹಿಯಾ । ಔಹೌಹೋऽ೨೩೪೫ಇ ॥ ಡಾ ॥

ದೀ - ೮ । ಪ - ೧೨ । ಮಾ - ೮ ॥ ೨೨ ॥ ಠೈ ॥ ೨೨ ॥ ೫೬ ॥

೪ ೩೦ ೪ ೫೦ ೨ ೨ ೩ ೨ ^ ೫
೩೫.೨. ಯಜ್ಞಾಯಜ್ಞಾ । ಹೋಇ । ವೋऽ೩ಗ್ನಯಏऽ೩೪ । ಹಿಯಾ ॥

೩೦ ೨೧ ೧ ^೩೨೧ ೨ ೩೦ ೨ ೧ ೨೧
ಗಿರಾಗಿರಾ । ಚಾऽ೨ದಕ್ಷಸಾಇ । ಪ್ರಪ್ರಾವಯಾಮ್ । ಅಮೃತಂ

೨ ^ ೧ ^ ೩ ೫ ೨ ೧ ೨೧
ಜಾऽ೩ । ತವೇऽ೨ದಾऽ೨೩೪ಸಾಮ್ ॥ ಪ್ರಿಯಮ್ಮಿತ್ರಾಮ್ । ನಶ

೩೦ ೨^ ೩೦
ಙ್ಸಿಷಾಮ್ ॥ ಏಹಿಯಾ । ಔಹೋऽ೨೩೪೫ಇ ॥ ಡಾ ॥

ದೀ - ೬ । ಪ - ೧೪ । ಮಾ - ೮ । ಫೈ । ೨೩ । ೫೭ ॥

ಶ್ನೌಷ್ಟೀಗವಮ್ ॥ ಷ್ನುಷ್ಟೀಗುರ್ಬೃಹತ್ಯಗ್ನಿಃ ॥

೩೫.೩. ಯಾಜ್ಞಾಯಾಜ್ಞಾꠅ೨ । ವೋಽಅಗ್ನಾಯಾꠅ೨ಇ ॥ ಗಾಇರಾಗಾ

ಇರಾꠅ೨ । ಚಾದಕ್ಷಾಸಾꠅ೨ಇ । ಪ್ರಪ್ರಾವಾಯಾꠅ೨ಮ್ । ಅಮೃತಂ

ಜಾ೩ । ತವೇꠅ೨ದಾꠅ೨೩೪ಸಾಮ್ ॥ ಪ್ರಾಯಮ್ಮಾಇತ್ರಾꠅ೨ಮ್ ॥

ನಾಶಜ್ಸಾꠅ೨೩ಇಷಾꠅ೩೪೩ಮ್ । ಓꠅ೨೩೪೫ ಇ ॥ ಡಾ ॥

*ದೀ - ೨ । ಪ - ೧೧ । ಮಾ - ೧೨ । ಚಾ । ೨೪ ॥ ೫೮ ॥*

ಯಜ್ಞಾಯಜ್ಞೀಯಮ್ - ಭರದ್ವಾಜಃ - ಅಗ್ನಿರ್ವೈಶ್ವಾನರಃ ॥ ಬೃಹತ್ಯಗ್ನಿಃ ॥

೩೫.೪) ಯಜ್ಞಾꠅ೫ಯ । ಜ್ಞಾꠅ೩ವೋꠅ೩ಗ್ನಾಯಾಇ ॥ ಗಾಇರಾಗಿರಾ ।

ಚಾꠅ೩ದಾಕ್ಷಾꠅ೩ಸಾಇ । ಪ್ರಪ್ರಾꠅ೨ವಯಮಮೃತಮ್ । ಜಾತಾꠅ

೨೩ವಾ । ಹಿಮ್ಮಾಇ ॥ ದಾꠅ೩ಸಾಮ್ ॥ ಪ್ರಾಯಮ್ಮಿತ್ರನ್ನಶಾꠅ೨

ಜ್ಸಿಷಾಉ ॥ ವಾꠅ೩೪೫ ॥

*ದೀ - ೩ । ಪ - ೧೦ । ಮಾ - ೭ । ಣೀ । ೨೫ । ೫೯ ॥*

ಹೇ ಸ್ತೋತಾರಃ! **ವಃ** ಯೂಯಂ **ಯಜ್ಞಾಯಜ್ಞಾ** ಯಜ್ಞೇಯಜ್ಞೇ ಸರ್ವೇಷು ಯಾಗೇಷು **ದಕ್ಷಸೇ** ಪ್ರವೃದ್ಧಾಯ **ಅಗ್ನಯೇ ಗಿರಾ** ಸ್ತುತಿರೂಪಯಾ ವಾಚಾ ಸ್ತೋತ್ರಂ ಕುರುತೇತಿ ಶೇಷಃ - ಚ ಶಬ್ದೋ ಭಿನ್ನಕ್ರಮೋಽವ ಇತ್ಯಸ್ಮಾತ್ ಪರೋದ್ರಷ್ಟವ್ಯಃ - ಯೂಯಂ **ಚ** ಸ್ತೋತ್ರಂ ಕುರುತ ವಯಮಪಿ ತಮಗ್ನಿಂ **ಪ್ರಪ್ರಶಂಸಿಷಮ್ ಪ್ರಸಮುಪೋದಃ**

ಪಾದಪೂರಣೇ - ೮.೧.೬೦ ॥ ಇತಿ ಪ್ರಶಬ್ದಸ್ಯ ದ್ವಿರುಕ್ತಿಃ ಪಾದಪೂರಣಾರ್ಥಾ । ವ್ಯತ್ಯಯೇನೈಕವಚನಂ - ೩.೪.೯೮ । ಛಾಂದಸೋಲುಟ್ ಪ್ರಶಂಸಾಮಃ । ಕೀದೃಶಮ್? **ಅಮೃತಂ** ಮರಣರಹಿತಮ್ । **ಜಾತವೇದಸಂ** ಜಾತಾನಾಂ ವೇದಿತಾರಂ ಜಾತಪ್ರಜ್ಞಾನಂ ಜಾತಧನಂ ವಾ **ಮಿತ್ರಂ** ನ ಸಖಿಭೂತಮಿವ ಪ್ರಿಯಮನುಕೂಲಮ್ । ಯದ್ವಾ ವ್ಯತ್ಯಯೇನ ತ್ವಮಿತ್ಯಸ್ಯ ವಸಾದೇಶಃ - ೩.೪.೧೮ । ಅಗ್ನಯ ಇತಿ ಚ ಕರ್ಮಣಿ ಚತುರ್ಥೀ ಕ್ರಿಯಾಗ್ರಹಣಮಪಿ ಕರ್ತವ್ಯಮ್, ಇತಿ ಕರ್ಮಣಃ ಸಂಪ್ರದಾನತ್ವಾತ್ । ಚ ಶಬ್ದಶ್ಚಣೇತಿ ನಿಪಾತಶ್ಚೇದರ್ಥೇ ವರ್ತ್ತತೇ । ದಕ್ಷಸ ಇತಿ ದಕ್ಷೇರ್ವೃದ್ಧಿಕರ್ಮಣಃ ಅಂತರ್ಭಾವಿತಣ್ಯರ್ಥಾಲ್ಲಟಿರೂಪಮ್ । ಚಣ್ ಯೋಗಾನ್ನಿಪಾತೈರ್ಯದ್ಯದಿಹನ್ತ ಇತಿ ನಿಘಾತ ಪ್ರತಿಷೇಧಃ । ತತ್ರಾಯಮರ್ಥಃ - ಹೇ ಸ್ತೋತಸ್ತ್ವಂ ಯಜ್ಞೇಇಮಮಗ್ನಿಂ ಗಿರಾಸ್ತುತ್ಯಾದಕ್ಷಸೇ ಚ ವರ್ದ್ಧಯಸಿ ಚೇತ್ ವಯಮಪಿ ಅಮೃತತ್ವಾದಿಗುಣಕಂ ತಂ ಪ್ರಶಂಸಾಮಃ ॥

ಹಿಂದೆ ದೇವತೆಗಳು ಮಾಧ್ಯಂದಿನ ಪವಮಾನ ಹಾಗೂ **ಯಜ್ಞಾಯಜ್ಞೀಯ** ಸಾಮಗಾನಗಳಿಂದ ಯಜ್ಞವನ್ನು ಸಂಸ್ಥಾಪಿಸಿ ಪರಿಸಮಾಪ್ತಿಗೊಳಿಸಿ ಸ್ವರ್ಗವನ್ನು ಪಡೆದರು. ಇದನ್ನುತಿಳಿದ ಯಜಮಾನನು ಈ ಸಾಮಗಾನದಿಂದ ಯಜ್ಞವನ್ನು ಸಮಾಪ್ತಿಗೊಳಿಸಿ ಸ್ವರ್ಗವನ್ನು ಪಡೆಯಬಹುದು. ಪಶುಕಾಮನಾದವನು ಈ ಸಾಮಗಾನ ಮಾಡಿ ಪಶುಗಳನ್ನು ಪಡೆಯಬಹುದು - ಸಾ. ಮ. ಬ್ರಾ. ೨.೨, ತಾಂ. ಮ. ಬ್ರಾ. ೧೫.೯.೧೨,೧೪.

**ಯಜ್ಞಾಯಜ್ಞಾ** - ಪ್ರತಿ ಯಜ್ಞದಲ್ಲೂ, **ಗಿರಾಗಿರಾ** - ಪ್ರತಿ ಮನ್ತ್ರದಲ್ಲೂ, ಪ್ರತಿ ಸ್ತೋತ್ರದಲ್ಲೂ, ಪ್ರತಿ ವಾಣಿಯಲ್ಲೂ, **ಅಮೃತಮಾ** - ಅಮರತ್ವವನ್ನು, ಮರಣರಹಿತ ಭಾವವನ್ನು, **ಪ್ರಿಯಂ** - ಪ್ರಿಯವಾದ, **ಮಿತ್ರಂ ನ** - ನಮ್ಮ ಮಿತ್ರನಾದ, **ಜಾತವೇದಸಮ್** - ಜಾತಪ್ರಜ್ಞನಾದ, ಸರ್ವಜ್ಞನಾದ, ಸರ್ವವ್ಯಾಪಕನನ್ನು, **ದಕ್ಷಸೇ** - ಬಲಯುತವಾಗಿ, ಬುದ್ಧಿಯುಕ್ತವಾಗಿ, **ಪ್ರಪ್ರಶಂಸಿಷಮ್** - ಸ್ತುತಿಸುತ್ತೇವೆ, ಉಪದೇಶಿಸುತ್ತೇವೆ, **ವಃ ಚ** - ಸ್ತೋತ್ರಗಣದಲ್ಲಿರುವ ನೀವೂ ಸಹ.

ಮಹಾ ಬಲಶಾಲಿಯೂ ಜಾತಪ್ರಜ್ಞನೂ, ಸರ್ವಜ್ಞನೂ ಅಮರನೂ ನಮ್ಮ ಪ್ರಿಯ ಮಿತ್ರನೂ ಆದ ಅಗ್ನಿಪರಮಾತ್ಮನನ್ನು ಪ್ರತಿಯೊಂದು ಯಜ್ಞದಲ್ಲೂ ಮನ್ತ್ರಮನ್ತ್ರಗಳಿಂದ ನಾವು ಸ್ತುತಿಸುತ್ತೇವೆ. ಸ್ತೋತ್ರಗಣದಲ್ಲಿರುವ ನೀವೂ ಸ್ತೋತ್ರ ಮಾಡಿ.

ಭಗವಂತನಾದ ಅಗ್ನಿಯು ಮನುಷ್ಯರಿಗೆ ಪ್ರಿಯಮಿತ್ರನಂತೆ ಯಜ್ಞಯಜ್ಞಗಳಲ್ಲೂ ಮನ್ತ್ರಮನ್ತ್ರಗಳಲ್ಲೂ ತನ್ನ ದಿವ್ಯಗುಣಕರ್ಮಗಳನ್ನೂ ಬುದ್ಧಿ ಶಕ್ತಿ ಸಾಮರ್ಥ್ಯಾದಿ ಐಶ್ವರ್ಯಗಳನ್ನೂ ಪ್ರಕಾಶಗೊಳಿಸುತ್ತಾ ಅಮೃತತ್ವವನ್ನು ಪಡೆಯುವ ಬಗೆಯನ್ನು ಉಪದೇಶಿಸುತ್ತಿರುತ್ತಾನೆ.

ಸರ್ವಜ್ಞನಂ ಹಿತಪ್ರದನಂ ಗೆಳೆಯನಂ ಸದಾ
ಅಮೃತನಂ ಜಾತವೇದಸನಂ ಪ್ರಿಯಾತ್ಮನಂ ನಾಮ್ ।
ಯಜ್ಞಯೋಜನೆಯಲ್ಲಿ ಭಜಿಸುವೆವು ಬಲಶಾಲಿಯಂ
ಉದ್ಗಾತೃಗಣಗಳೇ! ಸ್ತುತಿಸಿರಾರಾಧಿಸಿರಿ ನೀಮ್ ॥

## ಋಕ್ - ೩೬

ಭರ್ಗಃ ಪ್ರಾಗಾಥಃ ॥ ಬೃಹತ್ಯಗ್ನಿಃ ॥

೩ ೧ ೨ ೩ ೧ ೨ ೩ ೨ಕ ೨ ೩ ೧ ೨
ಪಾಹಿ ನೋ ಅಗ್ನ ಏಕಯಾ ಪಾಹ್ಯುಽತ ದ್ವಿತೀಯಯಾ ।

೩ ೨ ೩ ೨ ೩ ೧ ೨ ೩ ೧ ೨ ೩ ೧ ೨
ಪಾಹಿ ಗೀರ್ಭಿಸ್ತಿಸೃಭಿರೂರ್ಜಾಂ ಪತೇ ಪಾಹಿ ಚತಸೃಭಿರ್ವಸೋ ॥ ೨.೩೬

೩ ೨ ೩ ೧ ೨೦ ೩ ೨ ೩ ೨ ೩ ೧ ೨ ೩ ೨
ಪಾಹಿ - ನಃ - ಅಗ್ನೇ - ಏಕಯಾ । ಪಾಹಿ - ಉತ - ದ್ವಿತೀಯಯಾ ॥ ಪಾಹಿ -

೩ ೨ ೩ ೧ ೨ ೩ ೨ ೩ ೧ ೨ ೩
ಗೀರ್ಭಿಃ - ತಿಸೃಭಿಃ - ಊರ್ಜಾಮ್ - ಪತೇ । ಪಾಹಿ - ಚತಸೃಭಿಃ - ವಸೋ ॥

ಕಾರ್ತ್ತಯಶಮ್ ॥ ಕೃತಯಶಾಬೃಹತ್ಯಗ್ನಿಃ ॥

೫೦ ೨ ^ ೪೫೪೦ ೫ ೧ ೨ ೧ ೨
೩೬.೧. ಪಾಹಿನೊಽ೩ಅಗ್ನಏಕಯಾ ॥ ಪಾಹಿಯುತ । ದ್ವಿತಾಯಾಽ೧

— ೧ ೨೦ ೦ ೧ ೨ —
ಯಾಽ೨ । ಪಾಹಿಗೀರ್ಭಿಸ್ತಿಸೃಭಿಃ । ಊರ್ಜಾಮ್ವಾಽ೧ತಾಽ೨೩ ॥

೧ ೨ ನ ೨ ^ ೨ ೧ ೨^
ಪಾಹಿಚತೌ೩ | ಹೋ೩ವಾ || ಸೃಭಿರ್ವಾ೨೩ಸಾ೩೪೩ಉ |

೧
ಓ೨೩೪೫ಇ || ಡಾ ||

*ದೀ - ೪ | ಪ - ೧೦ | ಮಾ - ೬ | ನೂ | ೨೬ || ೬೦ ||*

ನಾರ್ಮೇಧಮ್ || ನೃಮೇಧಾ - ಭರದ್ವಾಜಃ - ಬೃಹತ್ಯಗ್ನಿಃ ||

೫೦ ೦ ೦ ೫ ೨೦ ೧ ೨ ೧
೩೬.೨. ಪಾಹಿನೋ ಅಗ್ನಏಕಯಾ೨೬ಏ || ಪಾ | ಹೋಇ | ಉ | ತಾ |

೨ ೧ ೨ ^ ೨ ೧೦ ^ ೩ ೫ ೧
ದ್ವಿತಾಯಾ೩ಯಾ | ಪಾಹೋ೨೩ಇಗಾ೨೩೪ಇರ್ಭಿಃ | ತಾ

೨ ೦ ೧ ೨^ ೩೦ ೦ ೫ ೧
ಇಸ್ರುಭಿಃ || ಊರ್ಜಾಮ್ಪಾತಾ | ಔಹೌಹೋ೨೩೪ವಾ | ಪಾ೨

೫ ೨ ೧ ೨^ ೩೦ ೦ ೫ ೧
೩೪ಹಿಹಾಇ | ಚತಾಸೃಭಾ | ಔಹೌಹೋ೨೩೪ವಾ || ವಾ೨೩

೫೦ ೫ ೪
೪ಸಾಉ | ಏಹಿಯಾ೬ಹಾ | ಹೋ೫ಇ || ಡಾ ||

*ದೀ - ೧೧ | ಪ - ೧೭ | ಮಾ - ೧೨ | ಖಾ | ೨೭ | ೬೧ ||*

ಕಾರ್ತವೇಶಮ್ || ಕೃತವೇಶೋ - ಭರದ್ವಾಜಃ - ಬೃಹತ್ಯಗ್ನಿಃ ||

೪೦ ೩ ೪೦ ೫ ೦ ೩ ೨ ೧ ೫ ೦
೩೬.೩. ಪಾಹಿನೋ ಅಗ್ನಏ | ಕಯಾ೩ | ಪಾ೨೩೪ | ಹಿಯುತದ್ವಿತೀ |

೪ ೫ ೪೦ ೩ ೪೦ ೩ ೪ ೩ ೪ ೫೦ ೦ ೨ ೨
ಯಾಯಾ || ಪಾಹಿಗೀರ್ಭಿಸ್ತಿಸೃಭಿರೂರ್ಜಾಮ್ | ಪಾ೩ತಾಇ ||

೧೦ ೨ ^ ೨ ೫೦ ೪ ೫ ೧ ೨ ೦ ೧ ೩
ಪಾಹೋಇಚಾ೩ತಾ೩೪ | ಹಾಓವಾ || ಸೃಭಿರ್ವಸೋ || ಉಪಾ

೧೧೧
೨೩೪೫ || *ದೀ - ೧೧ | ಪ - ೧೧ | ಮಾ - ೬ | ಕೂ | ೨೮ || ೬೨ ||*

೩೭೮

ಹೇ **ಅಗ್ನೇ! ನಃ** ಅಸ್ಮಾನ್ **ಏಕಯಾ** ಋಚಾಗಿರಾ **ಪಾಹಿ** ರಕ್ಷ । **ಉತ** ಅಪಿ ಚ **ದ್ವಿತೀಯಯಾ** ಋಚಾ**ಪಾಹಿ** ಪಾಲಯ । **ತಿಸೃಭಿಃ ಗೀರ್ಭಿಃ** ಸ್ತುತಿಭಿಃ **ಊರ್ಜಾಮ್** ಅನ್ನಾನಾಂ ಬಲಾನಾಂ ವಾ ಹೇ **ಪತೇ!** ಸ್ವಾಮಿನ್! ತಥಾ **ಪಾಹಿ!** ಹೇ **ವಸೋ!** ವಾಸಕ! ಅಗ್ನೇ! **ಚತಸೃಭಿಃ ಗೀರ್ಭಿಃ ಪಾಹಿ** ॥

**ಅಗ್ನೇ** - ಅಗ್ನಿಯೇ, ಪರಮಾತ್ಮನೇ, **ವಸೋ** - ಆಶ್ರಯದಾತನೇ ಅಗ್ನಿಯೇ, ಮಳೆಯ ಮೂಲಕ ರಸವನ್ನು ಎಲ್ಲ ಕಡೆಗೂ ವಿತರಿಸುವ ವಸು ಸಂಜ್ಞಿಕ ದೇವನೇ, ಅನ್ತರ್ಯಾಮಿಯೇ, **ಊರ್ಜಾಂಪತೇ** ಅನ್ನದ/ ಶಕ್ತಿಯ ಒಡೆಯನೇ **ಪಾಹಿ** - ರಕ್ಷಿಸು, **ಏಕಯಾ ಗೀರ್ಭಿಃ** - ಒಂದೇ ಒಂದು ಋಕ್‌ನ ಸ್ತೋತ್ರದಿಂದ ಅಥವಾ ಋಗ್ವೇದದ ಸ್ತೋತ್ರದಿಂದ, **ದ್ವಿತೀಯಯಾ** - ಎರಡು ಋಕ್‌ಗಳ ಸ್ತೋತ್ರದಿಂದ ಅಥವಾ ಯಜುರ್ವೇದದ ಸ್ತೋತ್ರಗಳಿಂದ, **ತಿಸೃಭಿಃ** - ಮೂರು ಋಕ್‌ಗಳ ಸ್ತೋತ್ರದಿಂದ ಅಥವಾ ಸಾಮವೇದದ ಸ್ತೋತ್ರದಿಂದ, **ಚತುಸೃಭಿಃ** - ನಾಲ್ಕು ಋಕ್‌ಗಳ ಸ್ತೋತ್ರದಿಂದ ಅಥವಾ ಅಥರ್ವಣವೇದದ ಸ್ತೋತ್ರದಿಂದ, ನಾಲ್ಕೂ ವೇದಗಳ ಸ್ತೋತ್ರದಿಂದ.

ಎಲ್ಲರ ಆಶ್ರಯದಾತನೂ ಅನ್ತರ್ಯಾಮಿಯೂ, ಶಕ್ತಿಯ ಒಡೆಯನೂ ಆದ ಅಗ್ನಿಭಗವಂತನೇ ಒಂದು ಋಕ್ಕಿನ ಸ್ತೋತ್ರದಿಂದಾಗಲೀ ಎರಡು, ಮೂರು, ನಾಲ್ಕು ಋಕ್ಕುಗಳ ಸ್ತೋತ್ರಗಳಿಂದಾಗಲೀ, ಋಗ್ವೇದ, ಯಜುರ್ವೇದ, ಸಾಮವೇದ ಅಥರ್ವಣ ವೇದಗಳ ಒಂದೊಂದೇ ವೇದದ ಅಥವಾ ನಾಲ್ಕೂ ವೇದಗಳ ಸ್ತೋತ್ರಗಳಿಂದಾಗಲೀ ಪ್ರಸನ್ನನಾಗಿ ನಮಗೆ ಅನ್ನವನ್ನೂ ಶಕ್ತಿಯನ್ನೂ ಕೊಟ್ಟು ರಕ್ಷಿಸು. ದೇಹ, ಮನಸ್ಸು, ಬುದ್ಧಿ ಚಿತ್ತಗಳಿಂದ ಮೂಡಿಬಂದ ಈ ಅಂತಃಕರಣ ಚತುಷ್ಟಯಗಳೊಂದೊಂದೂ ವ್ಯಷ್ಟಿಯಾಗಿ ಹಾಗೂ ಸಮಷ್ಟಿಯಾಗಿ ಮಾಡಿದ ಸ್ತೋತ್ರಗಳಿಂದ ಪ್ರಸನ್ನನಾಗಿ ರಕ್ಷಿಸು.

*ಅಗ್ನಿ! ಪೊರೆಯಯ್ ಪರಾವಾಕ್ಕಿಂ ಮೊದಲ್ ಬೇಳ್ವಿವಾಂ*
*ಕಾಪಿಡಯ್! ಪಶ್ಯಂತಿಯಿಂ ಬೇಳ್ವಿವಾಮಂತೆಯೇ ।*
*ರಕ್ಷಿಸಯ್! ಮಧ್ಯಮೋಕ್ತಿಯಿನಂತೆಯೇ ಬೇಳ್ವಿವಾಂ*
*ಪೊರೆವುದಯ್! ವೈಖರೀ ಸ್ವನದಿಂದೆ ಬೇಳ್ವವಂತೇ ॥*

## ಋಕ್ - ೩೭

ಶಂಯುರ್ಬಾರ್ಹಸ್ಪತ್ಯಃ । ಬೃಹತ್ಯಗ್ನಿಃ ॥

೩ ೧ ೨ ೩ ೧ ೨ ೧ ೨ ೩ ೧ ೨
ಬೃಹದ್ಭಿರಗ್ನೇ ಅರ್ಚಿಭಿಃ ಶುಕ್ರೇಣ ದೇವ ಶೋಚಿಷಾ ।

೩ ೧ ೨ ೩ ೧ ೨ ೩ ೧ ೨
ಭರದ್ವಾಜೇ ಸಮಿಧಾನೋ ಯವಿಷ್ಠ್ಯ ರೇವತ್ಪಾವಕ ದೀದಿಹಿ ॥ ೩.೩೭ //

೩ ೧ ೨ ೩ ೧ ೨ ೩ ೧ ೨ ೩ ೧ ೨ ೩ ೧ ೨
ಬೃಹದ್ಭಿಃ - ಅಗ್ನೇ - ಅರ್ಚಿಭಿಃ । ಶುಕ್ರೇಣ - ದೇವ - ಶೋಚಿಷಾ ॥ ಭರದ್ವಾಜೇ -

೩ ೨ ೩ ೨ ೩ ೨ ೩ ೨ ೩
ಭರತ್ - ವಾಜೇ - ಸಮಿಧಾನಃ - ಸಮ್ - ಇಧಾನಃ - ಯವಿಷ್ಠ್ಯ । ರೇವತ್ - ಪಾವಕ -

ದೀದಿಹಿ ॥ ೩.೩೭ //

ಪೃಶ್ನಿನೀ ದ್ವೇ ॥ ಭರದ್ವಾಜೋ ಬೃಹತ್ಯಗ್ನಿಃ ॥

೨೧ ೪೦ ೫ ೨೧ ೨೦ ೦
೩೭.೧. ಬೃಹಾದ್ಭೀऽ೨೩ರಗ್ನೇ ಅರ್ಚಭಿರ್ಹಾಉ ॥ ಶುಕ್ರಾಇಣದೇವಶೋ

೧ ೨೦ ೧ ೨ ೧ ೨ ೨ ೧
ಚಿಷಾ । ಭರಾದ್ವಾऽ೧ಜೇऽ೨೩ । ಹೋವಾऽ೩ಹಾಇ । ಸಮಿ

೨೦ ೧ ೪ ೧ ೨ ೨ ೦ ೧ ೨
ಧಾನಃ । ಯಾವಿಷ್ಠಿಯಾऽ೨೩ । ಹೋವಾऽ೩ಹಾಇ ॥ ರೇವಾತ್ಪಾ

೧ ೨ ^ ೨ ೧ ೦ ೨ ೧ ೨
ऽ೧ವಾऽ೨೩ । ಹೋವಾऽ೩ಹಾಇ ॥ ಕಾದೀದಿಹಿ । ಇಡಾऽ೨೩ಭಾ

^ ೧
ऽ೩ಳ೩ । ಓऽ೨೩ಳ೫ಇ ॥ ಡಾ ॥

ದೀ - ೭ । ಪ - ೧೩ । ಮಾ - ೮ । ಜೈ । ೨೯ । ೬೩ ॥

೫ ೦ ೫ ೨ ೧ ೨ಂ ೦ ೧ ೨ಂ
೩೭.೨. ಬೃಹದ್ಭಿರಗ್ನೇ ಅರ್ಚಿಭೀಽ೭ರೇ ॥ ಶುಕ್ರಾಇಣದೇವಶೋಚಿಷಾ ।

೧ ೨ ರ ೨ ೧ ೨ಂ ೧ ಅ
ಭರಾದ್ವಾಽ೧ಜೇಽ೨೩ । ಓಽ೩ವಾ । ಸಮಿಧಾನಃ । ಯಾವಿಷ್ಠಿಯಾ

ರ ೨ ೦ ೧ ೨ ರ ೨ ೧ ೦
ಽ೨೩ । ಓಽ೩ವಾ ॥ ರೇವಾತ್ವಾಽ೧ವಾಽ೨೩ । ಓಽ೩ವಾ ॥ ಕಾದೀ

೨ ೧ ೨ ^ ೧
ದಿಹಿ । ಇಡಾಽ೨೩ಭಾಽ೩೪೩ । ಓಽ೨೩೪೫ಇ ॥ ಡಾ ॥

*ದೀ - ೭ । ಪ - ೧೩ । ಮಾ - ೪ । ಜೀ । ೩೦ ॥* **೬೪** ॥

**ಹೇ ದೇವ!** ದಾನಾದಿಗುಣಯುಕ್ತ! **ಯವಿಷ್ಠ**ಯುವತಮ! **ಪಾವಕ** ಶೋಧಕ! ಅಗ್ನೇ! **ಶುಕ್ರೇಣ** ನಿರ್ಮಲೇನ **ಶೋಚಿಷಾ** ತೇಜಸಾ । **ಭರದ್ವಾಜೇ** ಅಸ್ಮದ್ಭ್ರಾತರಿ **ಸಮಿಧಾನಃ** ಸಮಿಧ್ಯಮಾನಸ್ತ್ವಂ **ಬೃಹದ್ಭಿಃ** ಮಹದ್ಭಿಸ್ತೇಜೋಭಿಃ **ನಃ** ಅಸ್ಮದರ್ಥಂ **ರೇವತ್** ಧನಯುಕ್ತಂ ಯಥಾಭವತಿ ತಥಾ **ದೀದಿಹಿ** ದೀಪ್ಯಸ್ವ ॥ **ರೇವತ್ಪಾವಕ** ಇತಿ ಛಂದೋಗಾಃ **ರೇವನ್ನಃ** ಶುಕ್ರ ದೀದಿಹಿದ್ಯುಮಿತ್ಪಾವಕ ಇತಿ ಬಹ್ವೃಚಾಃ ॥

**ದೇವ** - ದಾನಾದಿಗುಣಯುಕ್ತ ದಿವ್ಯ ಐಶ್ವರ್ಯದಿಂದ ಬೆಳಗುವ, **ಯವಿಷ್ಠ** - ಯುವಕನಾದ, ಜರಾರಹಿತನಾದ, ಉರಿಯುತ್ತಿರುವ, ಎಲ್ಲರಿಗಿಂತ ದೊಡ್ಡವನಾದ, ಸೂಕ್ಷ್ಮಾತಿಸೂಕ್ಷ್ಮನಾದ, **ಪಾವಕ** - ಪವಿತ್ರಕಾರಕ, ಪಾವನ ಮಾಡುವ, **ಶುಕ್ರೇಣ** - ನಿರ್ಮಲವಾದ, ಶುದ್ಧ ಕಳಂಕರಹಿತ ಸತ್ಯ ಪ್ರಕಾಶದಿಂದ, **ಶೋಚಿಷಾ** - ತೇಜಸ್ಸಿನಿಂದ ಕೂಡಿದ **ಭರದ್ವಾಜೇ** - ಸ್ಥಾಲೀಪಾಕಾದಿ ಕರ್ಮನಿರತ ಪೌರುಷಯುಕ್ತ ಉಪಾಸಕ, ಸೋದರರ ವಿಷಯದಲ್ಲಿ ಪೂರ್ಣಜ್ಞಾನಿ - ಮನೋ ವೈ ಭರದ್ವಾಜ ಋಷಿಃ, **ಬೃಹದ್ಭಿಃ** - ಭಾರಿ, ಮಹಾನ್, ಬಹುದೊಡ್ಡ, **ನಃ** - ನಮಗೋಸ್ಕರ, **ಸಮಿಧಾನಃ** - ಸಮಿತ್ತನ್ನು ಹೋಮಮಾಡುವುದರಿಂದ ಹೆಚ್ಚು ಪ್ರಕಾಶವಾಗಿ, ಪ್ರದೀಪ್ತವಾಗಿ, **ಅರ್ಚಿಭಿಃ** - ಕಿರಣಗಳಿಂದ, ಜ್ವಾಲೆಗಳಿಂದ, ಅರ್ಚನೆಗಳಿಂದ, ಕಿರಣರೂಪೀಗುಣಗಳಿಂದ, **ರೇವತ್** - ಬಹುಧನ, ವಿದ್ಯಾದಿ ಮಹೈಶ್ವರ್ಯ, **ದೀದಿಹಿ** - ದೀಪ್ತನಾಗು, ಬೆಳಗು, ಅನುಗ್ರಹಿಸು.

೩೮೧

ಜರಾರಹಿತನೂ ಸತ್ಯಪ್ರಕಾಶನೂ ದಿವ್ಯ ಐಶ್ವರ್ಯಯುಕ್ತನೂ ಆದ ಅಗ್ನಿಯೇ ಸ್ಥಾಲೀಪಾಕಾದಿ ಕರ್ಮನಿರತರಾಗಿ ಪೌರುಷಯುಕ್ತವಾದ ಉಪಾಸನೆಯಲ್ಲಿ ತೊಡಗಿರುವ ನಮ್ಮ ಅರ್ಚನೆಗಳಿಂದ ಪ್ರದೀಪ್ತನಾಗಿ ಮಹತ್ತರವಾದ ವಿದ್ಯಾದಿ ಐಶ್ವರ್ಯಗಳನ್ನು ಅನುಗ್ರಹಿಸು.

*ಸುವಿಪ್ರುಲಜ್ವಾಲಾಮನೋಹರನೆ! ತರುಣಾರ್ಚಿಯೇ!*
*ಸಂಪನ್ನತೆಪವಿತ್ರತೆಯನೀವರೊಳ್ ಶ್ರೇಷ್ಠನೇ!*
*ನಿನ್ನ ಪ್ರಖರಕಾಂತಿಯಿಂ ದಿವ್ಯತೇಜದಿಂದಂ*
*ಈ ಭರದ್ವಾಜಮುನಿಗಾಗಿ ಸಾಕ್ಷಾತ್ಕರಿಪ್ರುದಯ್ ॥*

## ಋಕ್ - ೩೮

ವಸಿಷ್ಠೋ ಮೈತ್ರಾವರುಣಿಃ ॥ ಬೃಹತ್ಯಗ್ನಿಃ ॥

೧ ೨ ೩ ೧ ೨ ೩ ೧ ೨
**ತ್ವೇ ಅಗ್ನೇ ಸ್ವಾಹುತ ಪ್ರಿಯಾಸಃ ಸನ್ತು ಸೂರಯಃ ।**

೩ ೨ ೩ ೨ ೩ ೧ ೨ ೩ ೧ ೨ ೩ ೧
**ಯನ್ತಾರೋ ಯೇ ಮಘವಾನೋ ಜನಾನಾಮೂರ್ವಂ**

೨ರ ೩ ೧ ೨
**ದಯನ್ತ ಗೋನಾಮ್ ॥** ೪.೩೮ ॥

೧ ೨ ೩ ೧ ೨ ೩ ೧ ೨
**ತ್ವೇಇತಿ - ಅಗ್ನೇ - ಸ್ವಾಹುತ - ಸು - ಆಹುತ । ಪ್ರಿಯಾಸಃ - ಸನ್ತು - ಸೂರಯಃ ।**

೩ ೧ ೨ ೩ ೧ ೨ ೧ ೨ರ ೩ ೨ ೧ ೨ರ
**ಯನ್ತಾರಃ - ಯೇ - ಮಘವಾನಃ - ಜನಾನಾಮ್ ॥ ಊರ್ವಮ್ - ದಯನ್ತ -**

೧ ೨ರ
**ಗೋನಾಮ್ ॥** ೪.೩೮ ॥

ಉರೋರಾಙ್ಗಿರಸ್ಯ ಸಾಮ ॥ ಉರುರ್ಬೃಹತ್ಯಗ್ನಿಃ ॥

೧೦ ೪೦ ೦ ೫ ೨ ೧೦ ೨ ೦ ೧ ೨
೩೮.೧. ತ್ವೇಽಆ೨೩ಗ್ನೇಸ್ವಾಹುತಹಾಉ ॥ ಪ್ರಿಯಾಸಸ್ಸನ್ತುಸೂರಯಃ ।

೧ ೨ ೩ ೪೦ ೫೦ ೪ ೫೦ ೨ ^
ಯನ್ತಾರೋಽ೧ಯಾ೨೩೪ಇ । ಮಘವಾನೋಽಜನಾ । ನಾ೩

೧ ೮ ೨ ೧೦ ೭೦ ೧
ಮ್ ॥ ಊರ್ವನ್ದಯಾ೨೩ಹಾ ॥ ತಗೋಽನಾ೨ಮ್ । ಇಡಾ೨

೨ ೧
೩ಭಾ೩೪೩ । ಓ೨೩೪೫ಇ ॥ ಡಾ ॥

*ದೀ - ೧೦ । ಪ - ೧೦ । ಮಾ - ೭ । ಮೇ । ೩೧ ॥* **೬೫** ॥

ಹೇ **ಅಗ್ನೇ! ಸ್ವಾಹುತ** ಯಜಮಾನೈಃ ಸ್ತುಷ್ಟುಭಿಃ ಹುತ! **ತ್ವೇ** ತವ **ಸೂರಯಃ** ಪ್ರೇರಕಾಃ ಸ್ತೋತಾರಃ **ಪ್ರಿಯಾಸಃ** ಪ್ರಿಯಾಃ **ಸನ್ತು** ಭವನ್ತು ಕಿಂಚ **ಯೇ ಮಘವಾನಃ** ಧನವನ್ತಃ ಯನ್ತಾರಃ ಪ್ರದಾತಾರಃ ಜನಾನಾಮ್ ಅಸ್ಮದೀಯಾನಾಮ್ **ಊರ್ವಮ್** ಸಮೂಹಮ್ । **ಗೋಽನಾಮ್** ಗವಾಮ್ ಚ ಊರ್ವಮ್ **ಸಮೂಹಂದಯನ್ತ** ಪ್ರಯಚ್ಛನ್ತಿ ತೇ ಚ ತವ ಪ್ರಿಯಾಃ ಸನ್ತು ಇತಿ ಪೂರ್ವೇಣಾನ್ವಯಃ **ಊರ್ವಮ್** ಇತಿ ಛನ್ದೋಗಾಃ । **ಊರ್ವಾನ್** ಇತಿ ಬಹ್ವೃಚಾಃ ॥

ಊರ್ವಂ ವಹ್ನಿತ್ಯರ್ಥಃ । ದಯನ್ತ ವಿಭಜನ್ತಿ । ಗೋನಾಮ್ ದ್ವಾದಶ ಸಂಖ್ಯಾಪರಿಮಾಣಾದಿ ಗವಾಂ ವಿಭಜತಿ ಇತ್ಯರ್ಥಃ ಇತಿ - ಮಾಧವಃ ॥

**ಸ್ವಾಹುತಃ** - ವಿಧಿಪೂರ್ವಕವಾಗಿ ಯಜಮಾನನ ಮೂಲಕ ಆಹುತಿಕೊಡುವ, ಅಂತರಾತ್ಮನ ಧ್ಯಾನದಲ್ಲಿ ಮಗ್ನರಾದ, **ಅಗ್ನೇ** - ಪರಮಾತ್ಮನಾದ, ಅಗ್ನಿಭಗವಂತನೇ, **ಮಘವಾನಃ** - ಯಜ್ಞಮಾಡುವ, ಧನವಂತರು, **ಯನ್ತಾರಃ** - ದಾನಿಗಳು, ಪಾಲಿಸುವವರು, **ಸೂರಯಃ** - ಸ್ತೋತ್ರಗಳಿಂದ ಪ್ರೇರಣೆ ನೀಡುವ ವಿದ್ವಾಂಸರು, **ಜನಾನಾಮ್** - ಪ್ರಜೆಗಳನ್ನು, **ಗೋಽನಾಮ್** - ಪಶುಧನವನ್ನು, ವಾಣಿಗಳನ್ನು, **ಊರ್ವಮ್** - ಸಮೂ

ಹವನ್ನು, ಆಧಿಕ್ಯವನ್ನು, **ದಯನ್ತಃ** - ದಯಾದೃಷ್ಟಿಯಿಂದ ನೋಡುವ, ಕೊಡುವ ಹಾಗೂ ರಕ್ಷಿಸುವವರು, **ತ್ವೇ** - ನಿನಗೆ, **ಪ್ರಿಯಾಃ ಸನ್ತು** - ಪ್ರಿಯರಾಗಲಿ.

ಭಗವಂತನಾದ ಅಗ್ನಿಯೇ ಹೋಮಾದಿ ಯಜ್ಞಗಳಲ್ಲಿ ವಿಧಿಪೂರ್ವಕವಾಗಿ ವೇದ ಮನ್ತ್ರಗಳಿಂದ ಆಹುತಿಕೊಡುವ ವಿದ್ವಾಂಸರೂ, ಪ್ರಜೆಗಳನ್ನೂ ಅವರ ಗೋ ಆದಿ ಸಂಪತ್ತನ್ನೂ ದಯಾದೃಷ್ಟಿಯಿಂದ ಪಾಲಿಸಿ ರಕ್ಷಿಸುವ ಶಕ್ತಿ ಐಶ್ವರ್ಯ ಅಧಿಕಾರಗಳಿಂದ ಬಲಯುತರಾದ ಮುಂದಾಳುಗಳೂ ನಿನಗೆ ಯಾವಾಗಲೂ ಪ್ರೀತಿಪಾತ್ರರಾಗಲಿ.

*ಅನಲ! ತವಕೃಪೆಯಿರ್ಕೆ ವಿಪ್ರರ್ಗೆ ಸೂರಿಗಳ್ಗೆ*
*ಪ್ರಜೆಗಳಂ ಪೊರೆವರ್ಗೆ ವಾಣಿಜ್ಯತತ್ಪರರ್ಗೆ ।*
*ಗೋರಕ್ಷೆ-ಕೃಷಿಮಾಳ್ಪವರ್ಗೆಂದಿಗುಂ ನಲ್ಮೆಯಿಂ;*
*ಇಂತು ಚಾತುರ್ವರ್ಣ್ಯಕಾರುಣ್ಯಕಾರಣಂ ನೀಂ ॥*

## ಋಕ್ - ೩೯

ಭರ್ಗಃ ಪ್ರಾಗಾಥಃ ॥ ಬೃಹತ್ಯಗ್ನಿಃ ॥

೨ ೩ ೧ ೨ ೩ ೧ ೨ ೩ ೧ ೨ ೩ ೧ ೨
**ಅಗ್ನೇ ಜರಿತರ್ವಿಶ್ಪತಿಸ್ತಪಾನೋ ದೇವ ರಕ್ಷಸಃ ।**

೧ ೨ ೩ ೧ ೨
**ಅಪ್ರೋಷಿವಾನ್ ಗೃಹಪತೇ ಮಹಾಜ್ ಅಸಿ**

೩ ೨ ೩ ೧ ೨ ೩ ೨
**ದಿವಸ್ಪಾಯುರ್ದುರೋಣಯುಃ ॥** *ಋ. ೩೯ ॥*

೧ ೨ರ ೧ ೨ರ ೩ ೧ ೨ ೩ ೨ ೩ ೧ ೨ ೧ ೨ರ
**ಅಗ್ನೇ - ಜರಿತಃ - ವಿಶ್ಪತಿಃ । ತಪಾನಃ - ದೇವ - ರಕ್ಷಸಃ ॥ ಅಪ್ರೋಷಿವಾನ್ - ಅ -**

೩ ೨ ೩ ೨ ೩ ೨
**ಪ್ರೋಷಿವಾನ್ - ಗೃಹಪತೇ - ಗೃಹ - ಪತೇ - ಮಹಾನ್ - ಅಸಿ ॥ ದಿವಃ - ಪಾಯುಃ -**

೩ ೨ ೩ ೨
**ದುರೋಣಯುಃ - ದುಃ - ಓನಯುಃ ॥**

ಪೌರುಮದ್ಗೇ ದ್ವೇ ॥ ದ್ವಯೋಃ ಗೋತಮೋ ಬೃಹತ್ಯಗ್ನಿಃ ॥

೩೯.೧. ಅಗ್ನೇ ಜರಿತರ್ವಿಶ್ಪತಿಃ । ಔಹೋವಾ । ಏಹಿಯಾ । ಹಾಉ ॥ ತಪಾ ನೋದೇ೨ವರಕ್ಷಸಃ । ಅಪ್ರೋ೩ಷಾ೧ಇವಾ೨ನ್ । ಗಾರ್ಹಪ ತಾ೩ಇ । ಮಾಹಾಜ್ಆ೨೩ಳಸೀ ॥ ದಿವಾಃ । ಪಾಯೌವಾ ಓ೨೩ಳವಾ ॥ ಹಾ೩ಹಾಇ । ದುರೋ೫ಣಯೂಃ । ಹೋ೫ಇ ॥ ಡಾ ॥ ದೀ - ೬ । ಪ - ೧೪ । ಮಾ - ೧೨ । ಫಾ । ೩೨ ॥ ೬೬ ॥

೩೯.೨. ಅಗ್ನೇಜರಿತರ್ವಿ । ಶ್ಪತೀ೩ಃ । ತಾ೨೩ಳ । ಪಾನೋದೇವರ । ಕ್ಷಸಾಃ ॥ ತಾಪಾನೋದೇವರಕ್ಷಸೋ । ಅಪ್ರೋಷೀ೩ವಾನ್ । ಗೃಹ ಪತಾಇ । ಮಾಹಾಜ್ಆ೨೩ಳಸೀ ॥ ಓ೪ಹಾ । ಹಹಾಇ । ದಿವಪ್ಪಾ ಯೂ೨೩ಳಃ ॥ ಓ೪ಹಾ । ಹಹಾಇ । ದುರೋಣಯೂ೨೩ಳಃ । ಓ೪ಹಾ । ಹಹಾ೩ಳ೩ಇ । ಓ೨೩ಳ೫ಇ ॥ ಡಾ ॥

ದೀ - ೯ । ಪ - ೧೯ । ಮಾ - ೧೧ । ಧ । ೩೩ ॥ ೬೭ ॥

ಹೇ **ಅಗ್ನೇ! ದೇವ! ಜರಿತಃ** ಸ್ತೋತಃ ಸ್ತುತ್ಯ ಇತ್ಯರ್ಥಃ । **ವಿಶ್ಪತಿಃ** ಪ್ರಜಾನಾಂ ಪಾಲಕಃ **ರಕ್ಷಸಃ** ರಾಕ್ಷಸಾನಾಂ **ತಪಾನಃ** ಸಂತಾಪಕಃ ಅಸಿ । ಹೇ **ಗೃಹಪತೇ!** ಯಜಮಾನ ಗೃಹಸ್ಯ ಪಾಲಕಾಗ್ನೇ! ತ್ವಮ್ **ಅಪ್ರೋಷಿವಾನ್** ಯಜಮಾನಸ್ಯ ಗೃಹಮತ್ಯಜನ್ **ಮಹಾನ್** ಅತಿಶ

ಯೇನ ಪೂಜ್ಯೋಽಸಿ । **ದಿವಃ** ದ್ಯುಲೋಕಸ್ಯ **ಪಾಯುಃ** ಪಾತಾ **ದುರೋಣಯುಃ** ಯಜಮಾನ ಗೃಹಸ್ಯ ಮಾಶ್ರಯಿತಾ ಸರ್ವದಾ ವರ್ತಮಾನಃ ಇತ್ಯರ್ಥಃ । ತಾದೃಶಸ್ತ್ವಂ ಮಹಾನಸೀತ್ಯನ್ವಯಃ । ತಪಾನ ತಪಾನ ಇತಿ ಪಾಠೌ । **ಗೃಹಪತೇ ಗೃಹಪತಿಃ** ಇತಿ ಚ ॥

**ಗೃಹಪತೇ** - ಮನೆಯೊಡೆಯನಾದ ಗಾರ್ಹಪತ್ಯಾಗ್ನಿಯೇ, **ಅಗ್ನೇ** - ಪರಮಾತ್ಮನೇ, ಅಗ್ನಿದೇವನೆ, **ಜರಿತಃ** - ಸ್ತುತ್ಯರ್ಹ, ಜ್ಞಾನಿ, ಸರ್ವಪದಾರ್ಥಗಳ, ಗುಣಗಳನ್ನು ತಿಳಿದವನು, **ವಿಶ್ಪತಿಃ** - ಪ್ರಜಾಪಾಲಕನು, **ರಕ್ಷಸಃ** - ದುಷ್ಟರನ್ನು, **ತಪಾನಃ** - ಸುಡುವ, ಸಂತಾಪಪಡಿಸುವ, **ಅಸಿ** - ಆಗಿದ್ದೀಯೆ, **ಅಪ್ರೋಷಿವಾನ್** - ಯಜಮಾನನ ಮನೆಯನ್ನು ಬಿಟ್ಟು ಹೊರಗೆ ಹೋಗದೆ ಎಲ್ಲೆಲ್ಲೂ ವ್ಯಾಪಿಸಿರುವ, **ಸ ಮಹಾನ್** - ಪರಮ ಪೂಜ್ಯ ಮಹಾಮಹಿಮ, **ದಿವಃ** - ದ್ಯುಲೋಕವನ್ನು, **ಪಾಯುಃ** - ರಕ್ಷಣೆ ಮಾಡುವೆ, **ದುರೋಣಯುಃ** - ಮನೆಮನೆಯಲ್ಲೇ ಇರುವ ಹೃದಯನಿವಾಸಿಯಾದ.

ಪರಮಾತ್ಮನಾದ ಅಗ್ನಿಯೇ ಪ್ರತಿಯೊಬ್ಬನ ಹೃದಯನಿವಾಸಿಯಾಗಿ ಮನೆಮನೆಯಲ್ಲೂ ಗಾರ್ಹಪತ್ಯಾಗ್ನಿಯ ರೂಪದಲ್ಲಿದ್ದು ಸಮಸ್ತ ಪದಾರ್ಥಗಳ ಗುಣಗಳನ್ನು ತಿಳಿದಿರುವವನೂ ಮಹಾಮಹಿಮನೂ ಜ್ಞಾನಿಯೂ ಆದ ನೀನು ಪ್ರಜಾಪಾಲಕನಾಗಿ ದುಷ್ಟಶಿಕ್ಷಕನಾಗಿ ದ್ಯುಲೋಕದ ಸಂರಕ್ಷಕನೂ ಆಗಿ ಪ್ರಕಾಶಿಸುತ್ತಾ ಸ್ತುತ್ಯರ್ಹನಾಗಿದ್ದೀಯೆ.

*ಜ್ಞಾನಸ್ವರೂಪನೇ! ಲೋಕರಕ್ಷಣ-ಪೋಷಣ!*
*ಆಸುರೀಪ್ರಕೃತಿಸಂತಾಪಕಾರಣ! ತಾರಣ!*
*ನೀನಲ್ತೆ ಗೃಹಪತಿ, ಸದಾ ನಮ್ಮ ನಿಲಯನಾಥಂ*
*ಹೇ ದ್ಯುಲೋಕಸ್ವಾಮಿ! ನೀಂ ವಂದನೀಯನೆಂದುಂ ॥*

## ಋಕ್ - ೪೦

ಪ್ರಸ್ಕಣ್ವಃ ಕಾಣ್ವಃ ॥ ಬೃಹತ್ಯಗ್ನಿಃ ॥

೨ ೩ ೧ ೨ ೩ ೧ ೨ ೩ ೧ ೨೦
**ಅಗ್ನೇ ವಿವಸ್ವದುಷಸಶ್ಚಿತ್ರಂ ರಾಧೋ ಅಮರ್ತ್ಯ ।**

೨ ೩ ೧ ೨ ೩ ೨ ೩ ೨ ೩ ೧ ೨ ೩ ೧ ೨
**ಆ ದಾಶುಷೇ ಜಾತವೇದೋ ವಹಾ ತ್ವಮದ್ಯಾ ದೇವಾಂ ಉಷರ್ಬುಧಃ ॥**

೧ ೨೦ ೧೨೧ ೩ ೧೨ ೩೨ ೧ ೨೦ ೩
ಅಗ್ನೇ - ವಿವಸ್ವತ್ - ವಿ - ವಸ್ವತ್ - ಉಷಸಃ ॥ ಚಿತ್ರಮ್ - ರಾಧಃ - ಅಮರ್ತ್ಯ - ಅ -

೨ ೩೧೨ ೩ ೨ ೩೨
ಮರ್ತ್ಯ । ಆ - ದಾಶುಷೇ - ಜಾತವೇದಃ - ಜಾತ - ವೇದಃ - ವಹ - ತ್ವಮ್ ॥ ಅದ್ಯ -

೩ ೨ ೩೨ ೩೧ ೨ ೩ ೧ ೨೦
ಅ - ದ್ಯ - ದೇವಾನ್ - ಉಷರ್ಬುಧಃ - ಉಷಃ - ಬುಧಃ ॥

ಮಾಂಡವೇ ದ್ವೇ ॥ ಜಮದಗ್ನಿಃ ದ್ವಯೋಃ ಮಂಡುರ್ಬೃಹತ್ಯಗ್ನಿಃ । ಉಷಾ ವಾ ॥

೫೦ ೦ ೨^ ೧ ೨ ೨ ೧ ೨ ^
೪೦.೧. ಅಗ್ನೇವಿವಾಹಾಉ ॥ ಸ್ವಾ೩ದೂಷಾ೩ಸಾಃ । ಚಾಇತ್ರಾ೩ಜ್

೨ ೧ ೨^ ೨ ^ ೧ ^ ೩ ೫
ಹಾಇ । ರಾಧೋ೩ಹಾ೩ಇ । ಅಮಾ೨ರ್ತಾ೨೩೪ಯಾ ।

೧ ೨ — ೧ ೨೦ ೨ ೧ ೨ —
ಆದಾ೧ಶುಷೇ೨ । ಜಾತವೇದಃ । ವಹಾತೂ೧ವಾ೨ಮ್ ॥

೧೦ ೨ ೧ ^ ೩
ಅದ್ಯಾಹೋಇ । ದಾ೨೩ಇವಾಜ್ ॥ ಉಷಃ । ಬೂ೨ಧಾ೨೩೪

೫೦ ೦ ೨ ೦ ೧ ೩ ೧೧೧
ಔಹೋವಾ ॥ ಹುವೇವಸೂ೨೩೪೫ ॥

ದೀ - ೭ । ಪ - ೧೩ । ಮಾ - ೧೧ । ಜ । ೩೪ ॥ ೬೮ ॥

ವಿದಾವಸುನಿಧನಮ್ ॥ ಮಾಂಡವಮ್ ॥

೫೦ ೪ ೫ ೨೧ ೦ ೨೦ ೧ ೨ಂ
೪೦.೨. ಅಗ್ನೇವಿವಸ್ವದುಷಾಸಾಃ ॥ ಚಿತ್ರಜ್ರಾಧೋಅಮಾ೨ರ್ತಿಯ ।

೧ ೨ — ೧ ೨೦ ೧ ೨ —
ಆದಾ೧ಶುಷೇ೨ । ಜಾತವೇದಃ । ವಹಾತೂ೧ವಾ೨ಮ್ ॥

೧೦ ೨ ೧ ^ ೩ ೫೦ ೦
ಅದ್ಯಾದಾ೨೩ಇವಾಜ್ ॥ ಉಷಃ । ಬೂ೨ಧಾ೨೩೪ಔಹೋ

೨ ೦ ೧ ೩      ೧೧೧
**ವಾ ॥ ವಿದಾವಸೂಽ೨೩೪೫ ॥**

ದೀ - ೯ । ಪ - ೯ । ಮಾ - ೭ । ಧೇ । ೩೫ ॥ **೬೯** ॥

ಹೇ **ಅಗ್ನೇ** ತ್ವಂ **ಉಷಸಃ** ಉಷೋದೇವತಾಯಾಃ ಸಕಾಶಾತ್ **ರಾಧಃ** ಧನಂ **ದಾಶುಷೇ** ಹವಿರ್ದತ್ತವತೇ ಯಜಮಾನಾಯ **ಆವಹ** ಆನೀಯ ಪ್ರಾಪಯ । ಸೋಽಗ್ನಿರ್ವಿಶಿಷ್ಯತೇ । **ಅಮರ್ತ್ಯ** ಮರಣರಹಿತ । ಹೇ **ಜಾತವೇದಃ** ಜಾತಾನಾಂ ವೇದಿತಃ ಕೀದೃಶಂ ರಾಧಃ? **ವಿವಸ್ವತ್** ವಿಶಿಷ್ಟ ನಿವಾಸೋ ಪೇತಮ್ । **ಚಿತ್ರಂ** ನಾನಾವಿಧಮ್ । ಕಿಂಚ! **ಅದ್ಯ** ಅಸ್ಮಿನ್ ದಿನೇ **ಉಷರ್ಬುಧಃ** ಉಷಃಕಾಲೇಪ್ರಬುದ್ಧಾನ್ ದೇವಾನಾವಹ ॥

**ಜಾತವೇದಃ** - ಜಾತಪ್ರಜ್ಞ, ಸರ್ವಜ್ಞ, ವೇದಪ್ರಕಾಶಕ, **ಅಮರ್ತ್ಯ** - ದೇವತೆ, ಅಮರ, ಮರಣಧರ್ಮರಹಿತ, **ಅಗ್ನೇ** - ಪರಮಾತ್ಮನೇ, **ಉಷಸಃ** - ಉಷಃಕಾಲ ಉಷಾ ದೇವತೆಯ, **ವಿವಸ್ವತ್** - ಬಣ್ಣಬಣ್ಣದ, ವಿವಿಧ ವಸ್ತ್ರ, ವಿಶೇಷವಾದ ಸುಖವನ್ನು ಅನುಗ್ರಹಿಸುವ, ವಿಶಿಷ್ಟವಾದ ನಿವಾಸ, **ಚಿತ್ರಮ್** - ವಿವಿಧ ಚಿತ್ರವಿಚಿತ್ರವಾದ, **ಉಷರ್ಬುಧಃ** - ಚೇತನಾಯುಕ್ತನಾದ ವಿದ್ವಾಂಸ, ಉಷಃ ಕಾಲದಲ್ಲಿ ನಡೆಸುವ ದೈವೀಚಿಂತನೆ, **ದೇವಾಸ್** - ದೇವತೆಗಳನ್ನು ಇಂದ್ರಿಯಗಳನ್ನು, **ಅದ್ಯ** - ಈಗ, **ಆವಹ** - ಹೊಂದೋಣ, ಕರೆದು ತಾ, **ರಾಧಃ** - ಭಕ್ತಿ/ ಹವ್ಯರೂಪೀಧನ, ಲೌಕಿಕ ಅಲೌಕಿಕ ಐಶ್ವರ್ಯ, ತೇಜಸ್ಸು, **ದಾಶುಷೇ** - ದಾನಶೀಲ ಉಪಾಸಕನಿಗೆ ಕೊಡುವ, ಹವಿರ್ದಾತನಾದ ಯಜಮಾನನಿಗೆ.

ಅಮರನೂ ಸರ್ವಜ್ಞನೂ ವೇದಪ್ರಕಾಶಕನೂ ಆದ ಅಗ್ನಿಭಗವಂತನೇ! ಉಷಃ ಕಾಲದಲ್ಲಿ ಮೂಡುವ ಚಿತ್ರವಿಚಿತ್ರವಾದ ಬಣ್ಣಬಣ್ಣದ ದೃಶ್ಯಗಳಿಂದಲೂ ಮನಸ್ಸಿಗುಂಟಾಗುವ ದೈವೀಭಾವದಿಂದಲೂ ಇಂದ್ರಿಯಾಧಿದೇವತೆಗಳನ್ನು ಪ್ರಸನ್ನಗೊಳಿಸಿ ಶ್ರದ್ಧಾಭಕ್ತಿಗಳಿಂದ ನಿನ್ನ ಉಪಾಸನೆಯಲ್ಲಿ ತೊಡಗಿರುವ ದಾನಶೀಲನಾದ ವಿದ್ವಾಂಸನಿಗೆ ಲೌಕಿಕ ಅಲೌಕಿಕ ಐಶ್ವರ್ಯಗಳನ್ನು ಅನುಗ್ರಹಿಸು.

*ಹೇ ವಿವಸ್ವಂತ! ದಿವ್ಯಾಗ್ನಿದೇವನೆ! ಉದಯದೊಳ್*
*ನಿನ್ನಿಂದನರ್ಘಕಾಂತಿಯ ಶಕ್ತಿ ಪರಿವುದದಲ್ತೆ ।*
*ಇಂತಪ್ಪ ದಿವ್ಯತೇಜವನೀವುದಯ್ ದಾನಿಗಂ,*
*ಸುಪ್ರಭಾತದೆ ನಲಿವ ದೇವತಾನೀಕಕಂ ಮೇಣ್ ॥*

## ಋಕ್ - ೪೧

ಶಂಯುರ್ಬಾರ್ಹಸ್ಪತ್ಯಃ । ಬೃಹತ್ಯಗ್ನಿಃ ॥

೧ ೨೩೨ ೩ ೨ಉ ೩ ೧ ೨
**ತ್ವಂ ನಶ್ಚಿತ್ರ ಊತ್ಯಾ ವಸೋ ರಾಧಾಂಸಿ ಚೋದಯ ।**

೩ ೨ ೩ ೧ ೨೧ ೩೧ ೨ ೩ ೨ ೩ ೨೩ ೧ ೨೧
**ಅಸ್ಯ ರಾಯಸ್ತ್ವಮಗ್ನೇ ರಥೀರಸಿ ವಿದಾ ಗಾಧನ್ತುಚೇ ತು ನಃ ॥ ೭.೪೧ ॥**

೨ ೩ ೨ ೩ ೨ ೧ ೨೧ ೧ ೨೧ ೩ ೨
**ತ್ವಮ್ - ನಃ - ಚಿತ್ರಃ - ಊತ್ಯಾ । ವಸೋ - ರಾಧಾಂಸಿ - ಚೋದಯ ॥ ಅಸ್ಯ -**

೩ ೨ ೩ ೨ ೩ ೨ ೩ ೨ ೩ ೨ ೩
**ರಾಯಃ - ತ್ವಮ್ - ಅಗ್ನೇ - ರಥೀಃ - ಅಸಿ ॥ ವಿದಾಃ - ಗಾಧಮ್ - ತುಚೇ - ತು - ನಃ ॥**

ಗಾಧಮ್ ॥ ಭರದ್ವಾಜೋ ಬೃಹತ್ಯಗ್ನಿಃ ॥

೧ ೪ ೫೧ ೨ ೧ ೨ ೧ ೨
೪೧.೧. **ತ್ವನ್ನಾ೨೩ಶ್ಚಿತ್ರಊತ್ಯಾ ॥ ವಸೋರಾಧಾ । ಸಿಚೋದಾ೧ಯಾ**

೧ ೨^ ೩ ೫ ೧ ೨೧ ೧ ೨
**೨೩ । ಆಸ್ಯಾರಾ೨೩೪ಯಾಃ । ತ್ವಮಗ್ನೇ । ರಥಾಇಹಾಸಾ೨೩ಇ ॥**

೧ ೨^ ೩ ೫ ೨ ೧ ೨ ೧ ೨
**ವೀದಾಗಾ೨೩೪ಧಾಮ್ । ತುಚಾ೨೩ಹಾಇ ॥ ತುನಾ । ಔ೩**

೫ ೪
**ಹೋವಾ । ಹೋ೫ಇ ॥ ಡಾ ॥**

*ದೀ - ೨ । ಪ - ೧೨ । ಮಾ - ೭ । ಥೇ । ೩೬ ॥* **೭೦** ॥

**ಇತಿ ಗ್ರಾಮೇಗೇಯಗಾನೇ ಪ್ರಥಮಃ ಪ್ರಪಾಠಕಃ ॥ ೧ ॥**

ಹೇ **ವಸೋ** ವಾಸಕ! ಅಗ್ನೇ! **ಚಿತ್ರಃ** ದರ್ಶನೀಯಸ್ತ್ವಂ **ಊತ್ಯಾ**ರಕ್ಷಯಾ **ಸಹ** **ರಾಧಾಂ**ಸಿ ಧನಾಸಿ**ನಃ** ಅಸ್ಮಭ್ಯಂ **ಚೋದಯ** ಪ್ರೇರಯ । **ಅಸ್ಯ**ಲೋಕೇ ಪರಿದೃಶ್ಯಮಾನಸ್ಯ **ರಾಧಃ** ಧನಸ್ಯ ತ್ವಂ **ರಥೀಃ ಅಸಿ** ರಂಹಿತಾನೇತಾ ಭವಸಿ । ಅತಃ ಕಾರಣಾತ್

ಅಸ್ಮಭ್ಯಮ್ ಧನಾನಿಪ್ರೇರಯೇತ್ಯರ್ಥಃ । ಅಪಿ ಚ **ನಃ** ಅಸ್ಮಾಕಂ **ತುಚೇ** - ಅಪತ್ಯನಾಮ್ನೈ ತತ್ - ನೈ.೨.೨೧ । ಅಪತ್ಯಾಯ ಅಪತನ ಹೇತುಭೂತಾಯ ಪುತ್ರಾಯ **ಗಾಧಂ** ಪ್ರತಿಷ್ಠಾಂ **ತು** ಕ್ಷಿಪ್ರಂ ವಿದಾಃ ಲಂಭಯ ॥

**ವಸೋ** - ಯುದ್ಧಾದಿಗಳಲ್ಲಿ ಪರಿತ್ಯಕ್ತವಾದ ಧನದ ಒಡೆಯನಾದ ಅಷ್ಟವಸುಗಳಲ್ಲಿ ಒಬ್ಬನಾದ ಅಗ್ನಿ ಜೀವಿ ಜೀವಿಗಳಲ್ಲಿ ನೆಲಸಿರುವ, ವ್ಯಾಪಕನಾದ, **ಅಗ್ನೇ** - ಜ್ಞಾನ ಸ್ವರೂಪನಾದ ಅಗ್ನಿಯೇ, **ತು** - ಮತ್ತು, **ಊತ್ಯಾ** - ರಕ್ಷಣೆಯೊಂದಿಗೆ, **ರಾಧಾಂಸಿ** - ವಿದ್ಯೆ ಆದಿ ಧನಗಳನ್ನೂ ರತ್ನಾದಿ ಧನಗಳನ್ನೂ ಪಡೆಯಲು, **ಚೋದಯ** - ಪ್ರೇರಿಸು, **ರಾಯಃ** - ಧನ, ಯುದ್ಧಾದಿಗಳಲ್ಲಿ ಬಿಟ್ಟ ಧನ, **ಚಿತ್ರಃ** - ವಿಚಿತ್ರವಾದ, ದರ್ಶನೀಯನಾದ ನೀನು, **ರಥೀಃ** - ನಾಯಕನಾಗಿದ್ದೀಯೆ, ಪ್ರೇರಕನಾಗಿದ್ದೀಯೆ, ಸಾರಥಿಯಾಗಿದ್ದೀಯೆ, ದಾತೃವಾಗಿದ್ದೀಯೆ, **ತುಚೇ** - ಸಂತಾನಕ್ಕಾಗಿ, **ಗಾಧಮ್** - ಆಶ್ರಯ ವನ್ನು, **ವಿದಾಃ** - ನೀಡು, ಅನುಗ್ರಹಿಸು.

ಪ್ರತಿಯೊಂದು ಜೀವಿಯ ಅಂತಃಕರಣದಲ್ಲಿ ನೆಲಸಿ ಜೀವಿಗಳನ್ನು ರಕ್ಷಿಸುತ್ತಿರುವ ಜ್ಞಾನಸ್ವರೂಪಿಯಾದ ಐಹಿಕ ಆಮುಷ್ಮಿಕಸಂಪತ್ತಿನ ಒಡೆಯನಾದ ಅಗ್ನಿಭಗವಂತನೇ, ನಮಗೆ ವಿದ್ಯೆ ಮುಂತಾದ ಧನವನ್ನೂ ಚಿತ್ರವಿಚಿತ್ರವಾದ ರತ್ನಾದಿ ಐಶ್ವರ್ಯವನ್ನೂ ಪಡೆಯಲು ಪ್ರೇರಿಸುತ್ತಾ ನಮ್ಮ ಸಂತಾನಗಳಿಗೂ ಆಶ್ರಯವನ್ನು ಅನುಗ್ರಹಿಸು.

*ಸರ್ವಾಶ್ರಯನೆ! ಅಗ್ನಿ! ನಿನ್ನೂರ್ಜೆಯತ್ಯದ್ಭುತಂ*
*ವೈಭವವನೆಲ್ಲಮಂ ಕೈಗೂಡಿಸಲ್ ಸಮರ್ಥಂ ।*
*ನಮ್ಮೆಡೆ ಸಮೃದ್ಧಿಯನ್ನೊಲಿದು ತಾರಯ್ ದೇವನೇ!*
*ಅಂತೆಯೇ ನಮ್ಮ ಸಂತತಿಗಂ ಪ್ರತಿಷ್ಠೆ ನೀಡಯ್ ॥*

## ಋಕ್ - ೪೨

ಭರ್ಗಃ ಪ್ರಾಗಾಥಃ ॥ ಬೃಹತ್ಯಗ್ನಿಃ ॥

೨ಉ ೩೧ ೨ ೩೧ ೨ ೩ ೨ ೩೨
**ತ್ವಮಿತ್ಸಪ್ರಥಾ ಅಸ್ಯಗ್ನೇ ತ್ರಾತರ್ಋತಃ ಕವಿಃ ।**

೧ ೨೦ ೩ ೧ ೨ ೩೧೨
**ತ್ವಾಂ ವಿಪ್ರಾಸಃ ಸಮಿಧಾನ ದೀದಿವ ಆ ವಿವಾಸನ್ತಿ ವೇಧಸಃ ॥**

೨ ೩೧೨ ೩ ೧೨೦ ೩ ೧೨೦ ೩ ೨ ೩೨
ತ್ವಮ್ - ಇತ್ - ಸಪ್ರಥಾಃ - ಸ - ಪ್ರಥಾಃ - ಅಸಿ । ಅಗ್ನೇ - ತ್ರಾತಃ - ಋತಃ - ಕವಿಃ ॥

೧೨೦ ೩
ತ್ವಾಮ್ - ವಿಪ್ರಾಸಃ - ವಿ - ಪ್ರಾಸಃ - ಸಮಿಧಾನ - ಸಮ್ - ಇಧಾನ - ದೀದಿವಃ ।

೨ ೩ ೧೨
ಆ - ವಿವಾಸನ್ತಿ - ವೇಧಸಃ ॥ ೮. ೪೨ ॥

ಉಭಯತಸ್ತೋಭಮ್ ಗೌತಮಮ್ । ಗೋತಮೋ ಬೃಹತ್ಯಗ್ನಿಃ ॥

೫೦ ೦ ೧೦ ೨೦ ೧ ೧ ೮
೪೨.೧. ಹಾಉತ್ವಮಿತ್ಸಪ್ರಥಾಅಸಿಹಾಉ ॥ ಆಗ್ನೇತ್ರಾತಃ । ಋತಾಃಕವಾ೨

೩೦ ೨ ೧೦ ೨೦ ೧ ೨೦ ೧ ೦ ಸು
೨೩೪ಇಃ । ಹಾಹೋಇ । ತ್ವಾಂವಿಪ್ರಾಸಃಸಮಿಧಾ । ನಾದೀದಿವಾ೨

೩೦ ೨ ೧ ೨ ೩೦ ೨ ೨ ೧
೩೪ಃ । ಹಾಹೋಇ ॥ ಆವಿವಾಸಾ೨೩೪ । ಹಾಹೋ೨೩ ॥ ತಿವೋ

೫ ೪ ॥ ೫
೨೨೩೪ವಾ ॥ ಧಾ೨೫ಸೋ೭೬ಹಾಇ ॥

ದೀ - ೧೧ । ಪ - ೧೧ । ಮಾ - ೧೦ । ಕೌ । ೧ । ೭೧ ॥

ಗೌತಮಮ್ ॥ ಗೋತಮೋ ಬೃಹತ್ಯಗ್ನಿಃ ॥

೫ ೫ ೨ ೧ ೨^ ೩ ೫ ೧೦
೪೨.೨. ತ್ವಂತ್ವಾ೬ಮೇ ॥ ಇತ್ಸಪ್ರಾ೨೩ಥಾಯಾಸಾಇ । ಆ೨೨೩೪ಸೀ । ಆಗ್ನೇ

೨೦ ೧ ೮ ೩ ೫ ೧೦ ೨೦ ೧
ತ್ರಾತಃ । ಋತಾಃಕವಾ೨೨ಇಃ । ಕಾ೨೨೩೪ವೀಃ । ತ್ವಾಂವಿಪ್ರಾಸಃಸಮಿ

೨೦ ೧ ೦ ೨^ ೩ ೫ ೧ ೨೦ ೧ ೨
ಧಾ । ನಾದೀದಿವೋ । ದಾ೨೨೩೪ಇವಾಃ ॥ ಆವಿವಾಸಾ೨೨೩ಹಾ ॥

೧೦ ೨ ೧
ತಿವೇಧಾ೨೨೩ಸಾ೨೩೪೩ಃ । ಓ೨೨೩೪೫ಇ ॥ ಡಾ ॥

ದೀ - ೮ । ಪ - ೧೩ । ಮಾ - ೯ । ಡೋ । ೨ ॥ ೭೨ ॥

೩೯೧

ಹೇ **ಅಗ್ನೇ! ತ್ರಾತಃ** ರಕ್ಷಕ! **ಋತಃ** ಸತ್ಯಭೂತಃ ಕವಿಃ ಕ್ರಾನ್ತಪ್ರಜ್ಞಃ **ತ್ವಮಿತ್** ತ್ವಮೇವ ಸಪ್ರಥಾಃ ಸರ್ವತಃ ಪೃಥುಃ **ಅಸಿ** ಭವಸಿ । ಹೇ **ಸಮಿಧಾನ**, ಸಮಿದ್ಧ್ಯಮಾನ! ಹೇ **ದೀದಿವಃ** ದೀಪ್ತಾಗ್ನೇ **ತ್ವಾಂ ವಿಪ್ರಾಸಃ** ವಿಪ್ರಾಃ ಮೇಧಾವಿನಃ ವಿಧಾತಾರಃ ಸ್ತೋತಾರಃ **ಆವಿವಾಸನ್ತಿ** ವಿಚರನ್ತಿ ॥

**ಸಮಿಧಾನಃ** - ಸಮಿತ್ತಿನಿಂದ ಪ್ರಜ್ವಲಿಸಿದ ನಂತರ ಧ್ಯಾನಾನಂತರ ಸ್ವಯಂಪ್ರಕಾಶ ಸ್ವರೂಪ **ದೀದಿವಃ** - ತೇಜೋಮಯನಾದ, ಪ್ರಕಾಶಿಸುತ್ತಿರುವ, ಉರಿಯುತ್ತಿರುವ, ತೇಜಸ್ವಿಯಾದ, **ತ್ರಾತಃ** - ಶತ್ರು, ರೋಗಾದಿಗಳಿಂದ, ಕಾಪಾಡುವ, ಸರ್ವರಕ್ಷಕ, **ಅಗ್ನೇ** - ಅಗ್ನಿಭಗವಂತನೇ, **ಸಪ್ರಥಾಃ** - ಮಾರ್ಗದರ್ಶಿ, ಸರ್ವತ್ರ ವ್ಯಾಪ್ತ, ಪ್ರಸಿದ್ಧ, **ಋತಃ** - ಸತ್ಯ, ಎಲ್ಲರಿಗಿಂತ ದೊಡ್ಡವ, **ತ್ವಮ್ ಇತ** - ತಮಗಷ್ಟೇ, ನೀನೇ, **ಕವಿಃ** - ದ್ರಷ್ಟಾರ, ಜ್ಞಾನ ದೃಷ್ಟಿಯವ, **ತ್ವಾಮ್** - ನಿನ್ನನ್ನು, **ವೇಧಸಃ** - ಸ್ತುತಿಸುವ, ಮೇಧಾವಿಗಳಾದ, **ವಿಪ್ರಾಸಃ** - ವಿಪ್ರರು, **ಆ ವಿವಾಸನ್ತಿ** - ಸೇವಿಸುತ್ತಾರೆ, ಸರ್ವತೋ ಭಾವದಿಂದ ಭಜಿ ಸುತ್ತಾರೆ, ಉಪಾಸಿಸುತ್ತಾರೆ.

ಸಮಿತ್ತಿನಿಂದ ಜಾಜ್ವಲ್ಯಮಾನನಾದ ತೇಜಸ್ವಿಯಾದ ಸರ್ವವ್ಯಾಪಿಯಾದ ಅಗ್ನಿಭಗ ವಂತನೇ! ನಿನ್ನಿಂದ ಮಾರ್ಗದರ್ಶನವನ್ನೂ ರಕ್ಷಣೆಯನ್ನೂ ಪಡೆಯಲು ಸತ್ಯವಂತರೂ ಜ್ಞಾನಿ ಗಳೂ ದ್ರಷ್ಟಾರರೂ ಮೇಧಾವಿಗಳೂ ಆದ ವಿಪ್ರರು ಸರ್ವತೋಭಾವದಿಂದ ನಿನ್ನ ಉಪಾಸನೆ ಮಾಡುತ್ತಾರೆ.

*ಸರ್ವರಕ್ಷಕಾವಹ್ನಿ! ನಿನ್ನಗುಣಧರ್ಮದಿಂ ನೀಂ*
*ಸುಪ್ರಸಿದ್ಧಂ; ಸತ್ಯಸುಜ್ಞಾನರೂಪಿ ನೀನಯ್!*
*ಋತಕಾವೀಶ್ವರ! ದೀಪ್ತಿಧರ! ನಿನ್ನ ಸೇವೆಗೆಂದೇ*
*ಜ್ಞಾನಿಯಾಜ್ಞಿಕವೃಂದಮಿರ್ಪುದೈ ಸ್ತುತಿಸುತಿಲ್ಲಿ ॥*

## ಋಕ್ - ೪೩

ಭರ್ಗಃ ಪ್ರಾಗಾಥಃ ಬೃಹತ್ಯಗ್ನಿಃ ॥

೧ ೨ ೩ ೧ ೨ ೩ ೧ ೨ ೩ ೧ ೨
ಆ ನೋ ಅಗ್ನೇ ವಯೋವೃಧಜ್ ರಯಿಂ ಪಾವಕ ಶಜ್‌ಸ್ಯಮ್ ।

೧ ೨ ೩ ೨ ೩ ೧ ೨ ೩ ೧ ೨
ರಾಸ್ವಾ ಚ ನ ಉಪಮಾತೇ ಪುರುಸ್ಪೃ ಹಜ್ ಸುನೀತೀ ಸುಯಶಸ್ತರಮ್ ॥

೩ ೧ ೨ ೩ ೧ ೨೦ ೩ ೨ ೩
ಆ - ನಃ - ಅಗ್ನೇ - ವಯೋವೃಧಮ್ - ವಯಃ - ವೃಧಮ್ । ರಯಿಮ್ - ಪಾವಕ -

೧ ೨೦ ೧ ೨೦ ೩ ೧ ೨
ಶಜ್‌ಸ್ಯಮ್ ॥ ರಾಸ್ವ - ಚ - ನಃ - ಉಪಮಾತೇ - ಉಪ - ಮಾತೇ - ಪುರುಸ್ಪೃಹ

೩ ೧ ೨೦ ೧ ೨೧ ೩ ೧ ೨೦
ಮ್ - ಪುರು - ಸ್ಪೃಹಮ್ । ಸುನೀತೀ - ಸು - ನೀತೀ - ಸುಯಶಸ್ತರಮ್ - ಸು -

೩
ಯಶಸ್ತರಮ್ ॥ ೯. ೪೩ ॥

ಆಯುಸ್ಸಾಮ ॥ ಅಗ್ನಿರ್ಬೃಹತ್ಯಗ್ನಿಃ ॥

೩೦ ೪೦ ೫೦ ೦ ೪ ೫ ೨^ ೩ ೨^ ೧೧೧
೪೩.೧. ಆನೋಅಗ್ನೇವಯೋವೃಧಮ್ । ಏऽ೩೪ । ರಯಾऽ೩೪೫ಇಮ್ ॥

೨೦ ^ ೧ ಅ ೨ ೧೦ ೨೦ ೧ ೨೦ ೦
ಪಾವऽ೩ಕಾಶಜ್‌ಸಾऽ೨೩ಯಾಮ್ । ರಾಸ್ವಾಚನಉಪಮಾತೇ ।

೧ ಅ ೧ ೨ ೨ ೩ ೨೧
ಪೂರುಸ್ಪೃಹಾऽ೨ಮ್ ॥ ಸುನಾಇತಾಇಸೂऽ೩ಹಾಇ ॥ ಯಶಸ್ತರಾ

೪ ೫ ೪
ಮ್ । ಔऽ೨೩ಹೋವಾ । ಹೋऽ೫ಇ ॥ ಡಾ ॥

ದೀ - ೯ । ಪ - ೧೧ । ಮಾ - ೧೨ ॥ ತಾ । ೩ । ೭೩ ॥

ಹೇ **ಅಗ್ನೇ! ಪಾವಕ**ಶೋಧಕ! **ವಯೋವೃಧಮ್** ಅನ್ನಸ್ಯ ವರ್ಧ್ಧಕಂ **ಶಂಸ್ಯಂ** ಸ್ತುತಿವನ್ತಂ **ರಯಿಂ** ಧನಂ **ನಃ** ಅಸ್ಮಭ್ಯಮ್ ಆಭರೇತಿ ಶೇಷಃ । ಆಹೃತ್ಯಚಹೇ **ಉಪ ಮಾತೇ** ಉಪಾಸ್ಮಾತ್ಸಮೀಪೇಮಾತಿರ್ಥ್ಯತಮಿತ್ಯುಪಮಾತಿಃ ಹೇ ತಾದೃಶ ಅಗ್ನೇ **ನಃ** ಅಸ್ಮಭ್ಯಂ **ಸುನೀತೀ**! ಸುನೀತ್ಯಾ ಶೋಭನ ನಯನೇನ **ಪುರುಸ್ಪೃಹಂ** ಬಹುಭಿಃ ಸ್ಪೃಹ ಣೀಯಂ **ಸುಯಶಸ್ತರಮ್** ಅತ್ಯಂತ ಸ್ವಭೂತಂ ಕೀರ್ತಿಮ್ - ಧನಂ **ರಾಸ್ವ** ದೇಹಿ **ಸುಯ ಶಸ್ತರಂ ಸ್ವಯಶಸ್ತರಂ** ಇತಿ ಪಾಠೌ ||

**ಉಪಮಾತೇ** - ಸೃಷ್ಟಿಕರ್ತ, ರಕ್ಷಕ ಜಗದ್ಧಾರಕ, ಜ್ಞಾನಸಂಪನ್ನ, ಜೀವನವನ್ನು ಎತ್ತರಕ್ಕೆ ಒಯ್ಯುವ, ಆಜ್ಯಾಹುತಿ ಇಚ್ಛಿಸುವವ, ಎಲ್ಲವನ್ನೂ ಹತ್ತಿರದಿಂದಲೇ ಅಳೆಯ ಬಲ್ಲ, ಸರ್ವಸಾಕ್ಷಿ, **ಪಾವಕಃ** - ಪವಿತ್ರಮಾಡುವ, ಪತಿತಪಾವನ, **ಚ** - ಮತ್ತು, **ಅಗ್ನೇ** - ಜ್ಞಾನ ಪ್ರಕಾಶಕ, ಪರಮಾತ್ಮ, **ವಯೋವೃಧಂ** - ಆಯುರ್ವರ್ಧಕವಾದ, ಅನ್ನವನ್ನು ವೃದ್ಧಿಸುವ, **ಶಂಸ್ಯಂ** - ಸ್ತುತಿಯೋಗ್ಯವಾದ, **ರಯಿಂ** - ಅನ್ನ ನೀರನ್ನು, ಧನವನ್ನು, ಐಶ್ವರ್ಯವನ್ನು, ಯಶೋಧನವನ್ನು, **ಆ ಭರ** - ಅನುಗ್ರಹಿಸು, **ಸುನೀತೀ** - ಒಳ್ಳೆಯ ನೀತಿಯಿಂದ ಕೂಡಿದ್ದ **ಪುರುಸ್ಪೃಹಂ** - ಅತ್ಯಂತ ಇಷ್ಟವಾದ ಬಹುಜನ ಪ್ರಶಂಸನೀಯವಾದ, **ಸು ಯಶಸ್ತರಂ** - ಸುಂದರವಾದ, ಕೀರ್ತಿಪ್ರದವಾದ ಯಶಸ್ಸನ್ನು, **ರಾಸ್ವ** - ಅನುಗ್ರಹಿಸು.

ಪತಿತಪಾವನನೂ ಜ್ಞಾನಸಂಪನ್ನನೂ ಜಗತ್ತನ್ನೇ ಧರಿಸಿರುವವನೂ ಆದ ಅಗ್ನಿ ಭಗವಂತನೇ! ನಮಗೆ ಆಯುರ್ವರ್ಧಕವಾದ ಅನ್ನವನ್ನೂ ನೀರನ್ನೂ ಅತ್ಯಂತ ಅಪೇಕ್ಷ ಣೀಯವಾದ ಬಹುಜನ ಪ್ರಶಂಸನೀಯವಾದ ನೀತಿಯುಕ್ತವಾದ ಕೀರ್ತಿಪ್ರದವಾದ ಯಶೋಧನವನ್ನೂ ಅನುಗ್ರಹಿಸು.

*ಪಾವನಕರಾಗ್ನಿಯೇ! ಧನವೃದ್ಧಿಸಿದ್ಧಿನಿಧಿಯೇ!*
*ನೀತಿಮಾರ್ಗದೆ ಬಂದು, ಧರ್ಮವಿಧಿಯಿಂ ಸಂದು ಮೇಣ್ ।*
*ಕೀರ್ತಿಕೌಮುದಿಯ ಕಾಂತಿಯನೀಯುವಂತಪ್ಪ, ನಾಂ*
*ಕೋರುವಂತಪ್ಪ ಸಂಪದಮಿತ್ತು ಸಂರಕ್ಷಿಸಯ್ ॥*

## ಋಕ್ - ೪೪

ಸೌಭರಿಃ ಕಾಣ್ವಃ ॥ ಬೃಹತ್ಯಗ್ನಿಃ ॥

೨ಉ ೩ ೧ ೨ ೩ ೨೩ ೧ ೨ ೩ ೧ ೨೧
ಯೋ ವಿಶ್ವಾ ದಯತೇ ವಸು ಹೋತಾ ಮನ್ದ್ರೋ ಜನಾನಾಮ್ ।

೩ ೧ ೨೧ ೩ ೧ ೨ ೩ ೧ ೨೧ ೩ ೧ ೨
ಮಧೋರ್ನ ಪಾತ್ರಾ ಪ್ರಥಮಾನ್ಯಸ್ಮೈ ಪ್ರ ಸ್ತೋಮಾ ಯನ್ತ್ವಗ್ನಯೇ ॥

*ಸ್ವ - ೯ । ಉ - ೩ । ಧಾ - ೮೩ । ದೀ । ದ - ೪ ॥*

೨ ೧ ೨೧ ೧ ೨೧ ೧ ೨೧ ೧ ೨೧ ೩ ೨ ೧ ೨೧
ಯಃ - ವಿಶ್ವಾ - ದಯತೇ - ವಸು । ಹೋತಾಮ್ - ಮನ್ದ್ರಃ - ಜನಾನಾಮ್ ॥

೧ ೨೧ ೧ ೨೧ ೩ ೧ ೨ ೩ ೨ ೧ ೨೧ ೩
ಮಧೋಃ - ನ - ಪಾತ್ರಾ - ಪ್ರಥಮಾನಿ - ಅಸ್ಮೈ । ಪ್ರ - ಸ್ತೋಮಾಃ - ಯನ್ತು -

೧ ೨
ಅಗ್ನಯೇ ॥ *೧೦.೪೪ ॥*  *ಆ - ೩೩ । ಅ - ೨೫ । ಪ - ೧೯೪ । ಣೀ । ದ - ೪ ॥*

ಇತಿ ಚತುರ್ಥೀ ದಶತಿಃ ॥ ೪ ॥ ಇತಿ ಚತುರ್ಥಃ ಖಣ್ಡಃ ॥ ೪ ॥

ಹರಸೀ ದ್ವೇ ॥ ದ್ವಯೋರಗ್ನಿರ್ಬೃಹತ್ಯಗ್ನಿಃ ॥

೫೦ ೨ ೪ ೫ ೪೦ ೫ ೧ ೧
೪೪.೧. ಯೋವಿಶ್ವಾ೨೩ದಾಯತೇವಸೂ ॥ ಹೋತಾ೨ಮಾನ್ದ್ರೋ೨ ।

೧೦ ೦ ೧ ೧ ೧೦ ೦ ೦
ಜನಾನಾಮ್ । ಮಾಧೋ೨ರ್ನಾಪಾ೨ । ತ್ರಾಪ್ರಥಮಾನ್ಯಸ್ಮೈ ॥

೧ ೨ ೧ ೫ ೪
ಪ್ರಾಸ್ತೋ೨ಮಾಯಾ೨೩ ॥ ತುವೋ೨೩೪ವಾ ॥ ಗ್ನಾ೫ಯೋ

೫
೬ಹಾಇ ॥  *ದೀ - ೭ । ಪ - ೮ । ಮಾ - ೨ । ಜಾ । ೪ ॥೭೪ ॥*

೪೪.೨. ಯೋವಿಶ್ವಾದಯತೇವಸುಹಾಉ ॥ ಹೋತಾऽ೨ಮಾನ್ದ್ರೋऽ೨ । ಜನಾನಾಮ್ । ಓವಾ । ಓವಾ । ಮಾಧೋऽ೨ರ್ನ್ನಾಃಪಾऽ೨ । ತ್ರಾಪ್ರಥ ಮಾನ್ಯಸ್ತೈ । ಓವಾ । ಓವಾ ॥ ಪ್ರಾಸ್ತೋऽ೨ಮಾಯಾऽ೨೩ ॥ ತುವೋऽ೨೩೪ವಾ ॥ ಗ್ನಾऽ೫ಯೋऽ೬ಹಾಇ ॥

ದೀ - ೮ । ಪ - ೧೨ । ಮಾ - ೩ । ಶೀ । ೫ ॥ ೭೫ ॥

ದೈರ್ಘಶ್ರವಸೇ ದ್ವೇ ॥ ದ್ವಯೋಃ ದೀರ್ಘಶ್ರವಾಬೃಹತ್ಯಗ್ನಿಃ ॥

೪೪.೩. ಯೋವಿಶ್ವಾದಯತೇವಸ್ವೋಹಾಓಹಾऽ೬ಏ ॥ ಹೋತಾऽ೨ ಮಂನ್ದ್ರೋಜನಾऽ೨ನಾಮ್ । ಓऽ೩ಹಾ । ಓऽ೩ಹಾऽ೩ಏऽ೩೪ ॥ ಮಧೋऽ೩೪ರ್ನಪಾ । ತ್ರಾಪ್ರಥ । ಮಾನಾಯಸ್ಮಾಇ । ಓऽ೩ಹಾ । ಓऽ೩ಹಾऽ೩ಏऽ೩೪ ॥ ಪ್ರಸ್ತೋऽ೩೪ಮಾಯಾऽ೩ ॥ ತುವೋऽ ೨೩೪ವಾ । ಗ್ನಾऽ೫ಯೋऽ೬ಹಾಇ ॥

ದೀ - ೧೩ । ಪ - ೧೨ । ಮಾ - ೭ । ಠೇ । ೬ ॥ ೭೬ ॥

೪೪.೪. ಯೋವಿಶ್ವಾದಯತೇವಸೂऽ೬ಏ ॥ ಹೋತಾಮನ್ದ್ರೋಜನಾ ನಾಮ್ । ಮಾಧೋऽ೧ರ್ನಾಃಪೌ । ವಾऽ೩೨ ॥ ತ್ರಾಪ್ರಥಮಾನ್ಯ

೧ ೧ ೨ ೨ ^ ೧ ೨೦ ೧
ಸ್ಮೈ । ಪ್ರಾಸ್ತೋ೬ರಗಿಮಾಯೌ । ವಾ೬ಇ೨ ॥ ತ್ವಗ್ನಯೇ । ಇಡಾ೬೨

೨ ^ ೧
ಇಭಾ೬ಇಳಇ । ಓ೬೨ಇಳಶಇ ॥ ಡಾ ॥

ದೀ - ೧೨ । ಪ - ೧೧ । ಮಾ - ೩ । ಚ । ೭ ॥ ೭೭ ॥

**ದ್ವಾವಿಂಶತಿಃ । ಚತುರ್ಥಃ ಖಣ್ಡಃ ॥ ೪ ॥ ಚತುರ್ಥೀ ದಶತಿಃ ॥ ೪ ॥**

**ಹೋತಾ** ದೇವಾನಾಮಾಹ್ವಾತಾ **ಮನ್ದ್ರಃ** ಮೋದನಃ ಯಃ ಅಗ್ನಿಃ **ವಿಶ್ವಾ** ಸರ್ವಾಣಿ **ವಸು** ವಸೂನಿ ಧನಾನಿ **ಜನಾನಾಂ** ಜನೇಭ್ಯಃ **ದಯತೇ** ಪ್ರಯಚ್ಛತಿ । **ತಸ್ಮೈ** ಅಸ್ಮೈ ಅಗ್ನಯೇ **ಮಧೋಃ** ನ ಮದಕರಸ್ಯ ಸೋಮಸ್ಯೇವ **ಪ್ರಥಮಾನಿ** ಮುಖ್ಯಾನಿ **ಪಾತ್ರಾ** ಪಾತ್ರಾಣಿ **ಸ್ತೋಮಾಃ** ಸ್ತೋತ್ರಾಣಿ **ಪ್ರಯನ್ತಿ** ಗಚ್ಛನ್ತಿ ॥

**ಇತಿ ಪ್ರಥಮಾಧ್ಯಾಯಸ್ಯ ಚತುರ್ಥಃ ಖಂಡಃ ॥**

**ಹೋತಾ** - ಕರ್ಮಫಲ ದಾತೃ, ದೇವತೆಗಳನ್ನು ಆಹ್ವಾನಿಸುವ, **ಮನ್ದ್ರಃ** - ಆನಂದ ವನ್ನುಂಟುಮಾಡುವ, **ಜನಾನಾಮ್** - ಮನುಷ್ಯರಿಗೆ, ಯಜಮಾನನಿಗೆ, **ವಿಶ್ವಾವಸು** - ವಿದ್ಯೆ ಆದಿ ಸಕಲ ಸಂಪತ್ತನ್ನೂ ಸುಖಸಾಧನಗಳನ್ನೂ, ಧನವನ್ನೂ, **ದಯತೇ** - ಕೊಡು ತ್ತಾನೆ, **ಅಸ್ಮೈ ಅಗ್ನಯೇ** - ಇಂತಹ ಅಗ್ನಿಪರಮಾತ್ಮನಿಗೆ, **ಮಧೋಃ ಪಾತ್ರಾನ್** - ಜೇನಿ ನಂತಹ ಸೋಮವು ತುಂಬಿದ ಪಾತ್ರೆಯನ್ನು, ಸತ್ಪಾತ್ರನಿಗೆ, **ಪ್ರಥಮಾನಿ** - ಎಲ್ಲರಿಗಿಂತ ಮೊದಲೇ, ಮುಖ್ಯವಾಗಿ, **ಪ್ರಸ್ತೋಮ** - ಪ್ರಶಸ್ತವಾದ ಸ್ತುತಿರೂಪವಾದ ಸಾಮಗಾನವು, **ಯನ್ತು** - ಸಲ್ಲಲಿ.

ಕರ್ಮಫಲದಾತೃವೂ ಆನಂದಸಮುದ್ರನೂ ಆದ ಅಗ್ನಿಪರಮಾತ್ಮನು ನಮಗೆ ಎಲ್ಲಾ ವಿಧವಾದ ವಿದ್ಯೆ ಐಶ್ವರ್ಯ ಸುಖಸಾಧನ ಸಂಪತ್ತುಗಳನ್ನೂ ದಯಪಾಲಿಸಿದ್ದಾನೆ. ಇಂತಹ ಮಹಾನುಭಾವನಿಗೆ, ಜೇನಿನಂತಹ ಸೋಮರಸವನ್ನು - ಯಜ್ಞದಲ್ಲಿ ಜೇನಿ ನಂತಹ ಸೋಮರಸವು ಸತ್ಪಾತ್ರನಿಗೆ ಪ್ರಪ್ರಥಮವೇ ಸಲ್ಲಿಸುವಂತೆ - ನಮ್ಮ ಪ್ರಶಸ್ತವಾದ ಸಾಮಗಾನಗಳ ಸ್ತುತಿಯೂ ಎಲ್ಲರಿಗಿಂತ ಮೊದಲೇ ಸಲ್ಲಲಿ.

ಯಾಜಕರಿಗಸಮಾನಧನಧಾನ್ಯಸಂಪತ್ಪ್ರದ !
ಆನಂದಶರಧಿ! ಮಹಿತಾನಲನೆ! ಆದ್ಯವಂದ್ಯ!
ನಿನ್ನಂ ಮೊದಲ್ ನುತಿಸಿ, ನಿನಗೆ ಸೋಮದ ಪಾತ್ರಮಂ
ಮೊದಲೊಳ್ ಸಮರ್ಪಿಪರ್ಗೆಲ್ಲಮಮಂ ಕುಡುವೆಯಲ್ತೆ ॥

## ಋಕ್ - ೪೫

ವಸಿಷ್ಠೋ ಮೈತ್ರಾವರುಣಿಃ ॥ ಬೃಹತ್ಯಗ್ನಿಃ ॥

೩ ೧ ೨ ೩ ೧ ೨೦ ೩ ೧ ೨೦ ೩ ೧ ೨
ಏನಾ ವೋ ಅಗ್ನಿಂ ನಮಸೋರ್ಜೋ ನಪಾತಮಾ ಹುವೇ ।

೩ ೧ ೨೦ ೩ ೧ ೨ ೩ ೧ ೨೦ ೩ ೨ ೩ ೧ ೨
ಪ್ರಿಯಂ ಚೇತಿಷ್ಠಮರತಿಜ್ ಸ್ವಧ್ವರಂ ವಿಶ್ವಸ್ಯ ದೂತಮಮೃತಮ್ ॥

೩ ೨ ೩ ೨ ೧ ೨೦ ೩ ೨ ೧ ೨೦ ೩
ಏನಾ - ವಃ - ಅಗ್ನಿಮ್ - ನಮಸಾ । ಊರ್ಜಃ - ನಪಾತಮ್ - ಆ - ಹುವೇ ॥

೨ ೧ ೨೦ ೩ ೨ ೩ ೨ ೩ ೨ ೧ ೨೦
ಪ್ರಿಯಮ್ - ಚೇತಿಷ್ಠಮ್ - ಅರತಿಮ್ - ಸ್ವಧ್ವರಮ್ - ಸು - ಅಧ್ವರಮ್ । ವಿಶ್ವಸ್ಯ -

೩ ೨ ೩ ೧ ೨ ೩ ೧ ೨೦
ದೂತಮ್ - ಅಮೃತಮ್ - ಅ - ಮೃತಮ್ ॥ *೧.೪೫* ॥

ಆಗ್ನೇಯೇ ದ್ವೇ ॥ ದ್ವಯೋರಗ್ನಿರ್ಬೃಹತ್ಯಗ್ನಿಃ ॥

೫೦ ೦ ೦ ೪ ೫ ೧ ೦ ೨೦ ೧ ೨
೪೫.೧. ಏನಾವೋಅಗ್ನಿಂನಾಮಸಾ ॥ ಊರ್ಜೋನಪಾ । ತಾಮಾ೨೧ಹು

— ೧ ೨೦ ೨ ೧ ೨ —
ವೇ೨೨ । ಪ್ರಾಯಂಚೇತಿಷ್ಠಮರತಿಮ್ । ಸುವಾಧ್ವಾ೨೧ರಾ೨೨ಮ್ ॥

೧ ೨ — ೧ ೨ ೧ ೨^
ವಿಶ್ವಾಸ್ಯಾ೨೧ದೂ೨೨ ॥ ತಾಮಮೃತಮ್ । ಇಡಾ೨೨೩ಭಾ೨೩೪೩ ।

೧
ಓಽ೨೩೪೫ಇ ॥ ಡಾ ॥

ದೀ - ೬ । ಪ - ೧೦ । ಮಾ - ೫ । ಜು । ೮ । ೭೮ ॥

೫೦ ೦ ೦ ೧ ೦ ೨೦ ೧ ೨
೪೫.೨. ಏನಾವೋೕಅಗ್ನಿಂನ್ನಮಸಾಹಾಉ ॥ ಊರ್ಜೋೕನಪಾ । ತಾಮಾಽ

೨ ೧ ೨೦ ೨ ೧
೧ಹುವೇಽ೨೩ । ಹಾಉ । ಪ್ರಾಯಂಚೇತಿಷ್ಠಮರತಿಮ್ । ಸುವಾ

೨ ೨ ೧ ೨ ೨
ಧ್ವಾಽ೧ರಾಽ೨೩ಮ್ । ಹಾಉ ॥ ವಿಶ್ವಾಸ್ಯಾಽ೧ದೂಽ೨೩ । ಹಾಉ ॥

೧ ೨ ೧ ೨ ೧
ತಾಮಮೃತಮ್ । ಇಡಾಽ೨೩ಭಾಽ೩೪೩ । ಓಽ೨೩೪೫ಇ ॥ ಡಾ ॥

ದೀ - ೭ । ಪ - ೧೩ । ಮಾ - ೯ । ಜೋ । ೯ ॥ ೭೯ ॥

ಮನಾಜ್ಯೇ ದ್ವೇ ॥ ದ್ವಯೋರ್ಗೋೕತಮೋೕ ಬೃಹತ್ಯಗ್ನಿಃ ॥

೫೦ ೪೦ ೫೦ ೪ ೪ ೫ ೪ ೨೦ ೧೦ ೨೦ ೧೦ ೨ ೦
೪೫.೩. ಏನಾವೋೕಅಗ್ನಿಮೇಽ೫ನಮಸಾ ॥ ಊರ್ಜೋೕನಪಾತಮಾಹುವೇ ।

೧ ೨ ೧ ೨ ೧ ೨ ೧ ೨
ಪ್ರಾಽ೨೩ಯಾಮ್ । ಚಾಇತಿಷ್ಠಮ್ । ಆರತಿಮ್ । ಸುವಾಧ್ವಾಽ೧

— ೧ ೨ — ೧ ೨ ೧
೧ ರಾಽ೨ಮ್ ॥ ವಿಶ್ವಾಸ್ಯಾ೧ದೂಽ೨ ॥ ತಾಮಮೃತಮ್ । ಇಡಾಽ೨

೨ ೧
೩ಭಾಽ೩೪೩ । ಓಽ೨೩೪೫ಇ ॥ ಡಾ ॥

ದೀ - ೮ । ಪ - ೧೧ । ಮಾ - ೮ । ಟೈ । ೧೦ ॥ ೮೦ ॥

೫೦ ೪೦ ೫೦ ೪ ೫ ೦ ೦ ೪ ೫ ೧ ೦ ೨ ೦
೪೫.೪. ಏನಾವೋಽಗ್ನಿನ್ನಮಸೋ । ಜೋನಪೋವಾ ॥ ತಾಮಾಹುವೇ ।

೧ ೨ ೧ ೨ ೧ ೨
ಪ್ರಾಽ೨೩ಯಾಮ್ । ಚಾಇತಿಷ್ಠಮ । ರಾಽ೨೩ತೀಮ್ । ಸ್ವಧ್ವ

೧ ೨ ೧ ೨ ೧ ೨
ರಮ್ ॥ ವಿಶ್ವಸ್ಯಾಽ೨೩ದೂ ॥ ತಾಮಮೃತಮ್ । ಇಡಾಽ೨೩ಭಾಽ

೧
೩೪೩ । ಓಽ೨೩೪೫ಇ ॥ ಡಾ ॥

*ದೀ - ೭ । ಪ - ೧೨ । ಮಾ - ೮ । ಥೇ । ೧೧ ॥ ೮೧ ॥*

**ಊರ್ಜಃ** ಬಲಸ್ಯ **ನಪಾತಮ್** ಪುತ್ರಂ **ಪ್ರಿಯಂ** ಅಸ್ಮಾಕಂ **ಚೇತಿಷ್ಠಮ್** ಅತಿಶಯೇನಜ್ಞಾತಾರಂ ಪ್ರಜ್ಞಾತಾರಂ ಪ್ರಜ್ಞಾಪಕಂ ವಾ । **ಅರತಿಂ** ಗಂತಾರಂ ಸ್ವಾಮಿನಂ ವಾ **ಸ್ವಧ್ವರಂ** ಸುಯಜ್ಞಂ **ವಿಶ್ವಸ್ಯ** ಸರ್ವಸ್ಯ ಯಜಮಾನಸ್ಯ **ದೂತಮ್ ಅಮೃತಮ್** ನಿತ್ಯಮ್ **ಅಗ್ನಿಮ್ ಏನಾ** ಏನೇನ **ನಮಸಾಸ್ತೋತ್ರೇಣ** - ಯದ್ಯಪ್ಯತ್ರಾನ್ವಾದೇಶೋಸ್ತಿ ತಥಾಪಿ ಛಾಂದಸತ್ವಾದಿದಂಶಬ್ದೇಸ್ಯೈನಾದೇಶಃ - ಹೇಸ್ತೋತಾರಃ **ವಃ** ಯುಷ್ಮದರ್ಥಮ್ **'ಆಹುವೇ'** ಆಹ್ವಯಾಮಿ ॥

ಸ ಜಾಯಸೇ ಮಥ್ಯಮಾನಃ ಸಹೋ ಮಹತ್ವಮಾಹುಃ ಸಹಸಸ್ಪುತ್ರಮಙ್ಗಿರಃ । ಋ.ಸಂ.೫.೧೧.೬ ॥ ಪ್ರಾಣಾದ್ಧಿ ಬಲಾನ್ಮಥ್ಯಮಾನೋಽಧಿಜಾಯತೇ ॥ ಐ.ಬ್ರಾ. ೮.೨೮ ॥

**ಏನಾ ನಮಸಾ** - ನಮ್ರವಾದ ಗುಣವರ್ಣನಾರೂಪವಾದ ಈ ಸ್ತೋತ್ರದಿಂದ, **ಊರ್ಜಃ** - ಬಲಶಕ್ತಿಗಳ ರಕ್ಷಕ, **ನಪಾತಮ್** - ಕುಗ್ಗದಂತೆ, ಪುತ್ರ, ಬಾಲಕನು ಕ್ಷೀಣಿಸದಂತೆ, **ಪ್ರಿಯಮ್** - ಸ್ನೇಹಿತ, ಹಿತಕರ, ಪ್ರೀತಿಪಾತ್ರ, **ಚೇತಿಷ್ಠಮ್** - ಚೈತನ್ಯದಾಯಕ, ಅತಿಶಯವಾಗಿ, ಪೂರ್ಣಜ್ಞಾತೃ, **ಅರತಿಮ್** - ಕಾಮವಾಸನಾರಹಿತ, ಸ್ವಾಮಿ, **ಸ್ವಧ್ವರಮ್** - ವಿಧಿಪೂರ್ವಕವಾದ ಯಜ್ಞ, ಅಧ್ಯಾತ್ಮಯಜ್ಞ, **ವಿಶ್ವಸ್ಯ** - ಪ್ರಪಂಚದ ಎಲ್ಲರ, ಸಮಸ್ತ ಯಜಮಾನರ, **ದೂತಮ್** - ದೂತನಂತೆ, ದುಃಖದೂರಮಾಡುವ, ಕರ್ಮಫಲದಾತೃ **ಅಮೃತಮ್** - ಮರಣರಹಿತನಾದ, **ಅಗ್ನಿಂ** - ಅಗ್ನಿ ಪರಮಾತ್ಮನನ್ನು, **ಆಹುವೇ** - ಆಮನ್ತ್ರಿಸುವೆ.

ಉಪಾಸಕನ, ಆತ್ಮಬಲವನ್ನು ಕುಗ್ಗಿಸದೆ ಅನ್ನಾದಿಗಳಿಂದ ದೈಹಿಕಬಲವನ್ನು ವೃದ್ಧಿಸುವ, ಕಾಮಾದಿ ವಾಸನೆಗಳಿಂದ ದೂರ ಮಾಡುವ, ಸ್ನೇಹಿತನಂತೆ ಹಿತವನ್ನುಂಟು ಮಾಡುವ, ಶ್ರೇಷ್ಠವಾದ ಯಜ್ಞವನ್ನು ವಿಧಿಪೂರ್ವಕವಾಗಿ ನಿರ್ವಹಿಸುವ ಅವರವರ ಕರ್ಮಫಲವನ್ನು ದೂತನಂತೆ ತಲುಪಿಸುವ ದುಃಖದೂರ ಮಾಡುವ ಚೈತನ್ಯದಾಯಕನೂ ಮರಣ ರಹಿತನೂ ಆದ ಅಗ್ನಿಭಗವಂತನನ್ನು ನನ್ನ ಹೃದಯದಲ್ಲಿ ನೆಲಸಲು ಆಮನ್ತ್ರಿಸುವೆ.

*ಅನ್ನವ ಕರುಣಿಸಿ ಶಕ್ತಿಯನೀಯುವ ಚೇತನಪ್ರದಾತ!*
*ಸ್ನೇಹವನುಳಿಸುವ ನಲ್ಮೆಯ ಬೆಳಸುವ ದಿವ್ಯಯಜ್ಞನಾಥ ।*
*ಜ್ಞಾನಪ್ರದನೆ! ಸನಾತನನೇ! ಸೌಹಾರ್ದಪರ್ವಪ್ರೂತ!*
*ಅನಲನೆ! ನಿನ್ನನು ಆಹ್ವಾನಿಸುವೆವು ನಮನಸುಮನದೊಡನೆ ॥*

## ಋಕ್ - ೪೬

ಭರ್ಗಃ ಪ್ರಾಗಾಥಃ ॥ ಬೃಹತ್ಯಗ್ನಿಃ ॥

೨ ೩ ೧ ೨ ೩ ೨ ೩ ೨ ೩ ೧ ೨
**ಶೇಷೇ ವನೇಷು ಮಾತೃಷು ಸನ್ತ್ವಾಮರ್ತಾಸ ಇನ್ಧತೇ ।**

೧ ೨ ೩ ೧ ೨ ೩ ೨ ೩ ೨ಉ ೩ ೧ ೨
**ಅತನ್ದ್ರೋ ಹವ್ಯಂ ವಹಸಿ ಹವಿಷ್ಕೃತ ಆದಿದ್ದೇವೇಷು ರಾಜಸಿ ॥ ೨. ೪೬ ॥**

೧ ೨೦ ೧ ೨೦ ೩ ೧ ೨ ೩ ೧ ೨೦ ೩ ೧ ೨
**ಶೇಷೇ - ವನೇಷು - ಮಾತೃಷು । ಸಮ್ - ತ್ವಾ - ಮರ್ತಾಸಃ - ಇನ್ಧತೇ ॥ ಅತನ್ದ್ರಃ -**

೩ ೨ ೩ ೧ ೨ ೩ ೧ ೨೦
**ಅ - ತನ್ದ್ರಃ - ಹವ್ಯಮ್ - ವಹಸಿ - ಹವಿಷ್ಕೃತಃ - ಹವಿಃ - ಕೃತಃ । ಆತ್ - ಇತ್ -**

೩ ೧ ೨ ೩
**ದೇವೇಷು - ರಾಜಸಿ ॥ ೨. ೪೬ ॥**

ದೈವರಾಜಮ್ ॥ ದೇವರಾಡ್ - ಗೌತಮಃ - ಬೃಹತ್ಯಗ್ನಿಃ ॥

೪೦ ೦ ೦ ೪ ೧ ೨೦ ೧ ೨೦ ೧
**೪೬.೧. ಶೇಷೇವನಾಽ೩ಇಷುಮಾತೃಷೂ ॥ ಸಾಂತ್ವಾಮರ್ತಾಸಃ । ಇನ್ಧಾಽ**

೨ ೧ ೨೦ ೧ ೨ ೧ ಅ ^ ೩
**೨೩ತಾಇ । ಆತಂದ್ರೋಹವ್ಯಂವಹ । ಸಾಇ । ಹವೀಽ೨ಷ್ಕಾಽ೨೩ಳ**

**ತ್ವಾಂ ಮರ್ತಾಸಃ ಸಮಿನ್ಧತೇ ಅತನ್ದ್ರಂ ಹವ್ಯವಾಹನಮ್ ।**
೩ ೧ ೨೦ ೧ ೨ ೧೦ ೨^ ೧
**ತ್ರ್ತಾಃ ॥ ಆದಿದ್ದೇವಾಇ ॥ ಷುರಾಜಾ೨ಇಸಾ೨ಇ೪೩ಇ । ಓ೨೨ಇ**

**೪೫ಇ ॥ ಡಾ ॥** *ದೀ - ೮ । ಪ - ೧೦ । ಮಾ - ೮ । ಣೈ । ೧೨ ॥* **೮೨ ॥**

ಹೇ **ಅಗ್ನೇ! ವನೇಷು ಮಾತೃಷು** ಚ ಸ್ವಪಿಷಿವರ್ತಸೇ ತಥಾಭೂತಂ **ತ್ವಾ** ತ್ವಾಂ **ಮರ್ತ್ತಾಸಃ** ಮನುಷ್ಯಾಃ ಅಧ್ವರ್ಯುರ್ವಾದಯಃ ಮಂಥನೇನೋತ್ಪಾದ್ಯ **ಸಮಿಂಧತೇ** । ಪಶ್ಚಾತ್ ಪ್ರವೃದ್ಧಸ್ತ್ವಂ **ಅತಂದ್ರಃ** ಅನಲಸಃ ಸನ್ **ಹವಿಷ್ಕೃತಃ** ಯಜಮಾನಸ್ಯ **ಹವ್ಯಂ** ಹವಿಃ **ವಹಸಿ** ದೇವಾನ್‌ಪ್ರತಿ । **ಆದಿದ್** ಅನಂತರಮೇವ **ದೇವೇಷು** ಮಧ್ಯೇ **ರಾಜಸಿ** ದೀಪ್ಯಸೇ । ಮಾತೃಷು ಮಾತ್ರೋೢ ಇತಿ ಪಾಠೌ । ಹವ್ಯಂ ಹವ್ಯಃ ಇತಿ ಚ ॥

**ಮರ್ತಾ ಸಃ** - ಮನುಷ್ಯನು, **ವನೇಷು** - ಕಾಡಿನಲ್ಲಿ, ವನಸ್ಥಾನೀಯ ದೇಹದಲ್ಲಿ **ಮಾತೃಷು** - ಮಾತೃಸ್ಥಾನದಲ್ಲಿ, ಕಟ್ಟಿಗೆಯೊಳಗೆ, ಭೂಗರ್ಭದಲ್ಲಿ ಸಾಕ್ಷಾತ್ಕಾರವಾಗುವ ಹೃದಯದೇಶದಲ್ಲಿ, **ಶೇಷೇ** - ಶಯನಿಸುತ್ತಿರುವ, ಗುಪ್ತರೂಪದಲ್ಲಿರುವ, **ಸಮ್ ಇದ್ಧತೇ** - ಪ್ರದೀಪ್ತಿಗೊಳಿಸುತ್ತಾನೆ, ಧ್ಯಾನಿಸುತ್ತಿರುತ್ತಾನೆ, **ಅತನ್ದ್ರಃ** - ಆಲಸ್ಯರಹಿತ, ಜಾಗೃತ, ಪ್ರದೀಪ್ತಗೊಂಡ, **ಹವಿಷ್ಕೃತಃ** - ಯಜ್ಞಕರ್ತೃವು ಕರ್ಮಯೋಗಿಯು, **ಹವ್ಯಮ್** - ಹವಿಸ್ಸನ್ನು ಕರ್ಮಫಲವನ್ನು, **ವಹಸಿ** - ತಲುಪಿಸುತ್ತಾನೆ, **ಅತ್ - ಇತ್** - ಅನಂತರ, ಮತ್ತು, **ದೇವೇಷು** - ಪೃಥ್ವಿಯಾದಿ ಸಮಸ್ತ ತತ್ವಗಳಲ್ಲಿ, ದೇವತೆಗಳಲ್ಲಿ, **ರಾಜಸಿ** - ಪ್ರಕಾಶಿಸುವೆ, ವಿರಾಜಿಸುವೆ.

ಅಗ್ನಿಭಗವಂತನೇ ನಿನ್ನ ಮಾತೃಸ್ಥಾನವಾದ ಕಾಡಿನಲ್ಲಿ ಕಟ್ಟಿಗೆಯೊಳಗಿನ ಬೆಂಕಿಯಂತೆ ಗುಪ್ತರೂಪದಲ್ಲಿರುವ ನಿನ್ನನ್ನು ಮನುಷ್ಯನು ಮಂಥನದಿಂದ ಪ್ರದೀಪ್ತಿಗೊಳಿಸಿದನಂತರ ಜಾಜ್ವಲ್ಯಮಾನವಾಗಿ ಯಜ್ಞದಲ್ಲಿ ಅರ್ಪಿಸಿದ ಹವಿಸ್ಸನ್ನು ದೇವತೆಗಳಿಗೆ ತಲುಪಿಸಿ ಎಲ್ಲೆಲ್ಲೂ ಸಮಸ್ತ ಪದಾರ್ಥಗಳಲ್ಲೂ ವಿರಾಜಿಸುತ್ತಿರುವೆ.

ಮನುಷ್ಯನು ತನ್ನ ಹೃದಯದಲ್ಲಿ ನೆಲೆಸಿರುವ ಭಗವಂತನನ್ನು ಧ್ಯಾನದಿಂದ ಒಲಿಸಿಕೊಂಡು ತನ್ನ ನಿಷ್ಕಾಮ ಕರ್ಮದ ಫಲವನ್ನು ಅರ್ಪಿಸಿ ತೇಜೋವಂತನಾಗುತ್ತಾನೆ.

ಮಾತೆಯ ಬಸಿರಿನೊಳಿರುವಂದದೆ ನೀ ವನದೊಳಿರುವೆಯಡಗಿ
ಶ್ರದ್ಧಾಸಮಿಧೆಗಳಿಂದ ಯಾಜಕರು ನಿನ್ನನೆಬ್ಬಿಸುವರಯ್ !

ಹೋತೃಗಳರ್ಪಿಪ ಹವ್ಯವ ನೀ ಕೊಂಡೊಯ್ವೆ ಜತನದಿಂದ
ಅನಲನೆ! ನೀನಾ ದೇವತೆಗಳೊಳತಿ ತೇಜದಿಂದ ಮೆರೆವಯ್ ॥

## ಋಕ್ - ೪೭

ಸೌಭರಿಃ ಕಾಣ್ವಃ ॥ ಬೃಹತ್ಯಗ್ನಿಃ ॥

೧ ೨ ೩ ೧ ೨ ೩ ೧ ೨ ೩ ೧ ೨ ೩ ೨
**ಅದರ್ಶಿ ಗಾತುವಿತ್ತಮೋ ಯಸ್ಮಿನ್ವ್ರತಾನ್ಯಾದಧುಃ ।**

೨ ೩ ೨ ೩ ೧ ೨ರ ೩ ೧ ೨ ೩ ೧ ೨ ೩ ೧ ೨
**ಉಪೋ ಷು ಜಾತಮಾರ್ಯಸ್ಯ ವರ್ಧನಮಗ್ನಿಂ ನಕ್ಷನ್ತು ನೋ ಗಿರಃ ॥**

೧ ೨ರ ೩ ೧ ೨ ೩ ೧ ೨ರ ೧ ೨ರ ೩ ೧ ೨ ೩ ೨
**ಅದರ್ಶಿ - ಗಾತುವಿತ್ತಮಃ - ಗಾತು - ವಿತ್ತಮಃ । ಯಸ್ಮಿನ್ - ವ್ರತಾನಿ - ಆದಧುಃ -**

೩ ೨ ೧ ೨ರ ೩ ೨ ೩ ೨ ೧ ೨ರ ೧ ೨ರ ೩ ೨
**ಆ - ದಧುಃ ॥ ಉಪ - ಉ - ಸು - ಜಾತಮ್ - ಆರ್ಯಸ್ಯ - ವರ್ಧನಮ್ । ಅಗ್ನಿಮ್ -**

೩ ೧ ೨ರ
**ನಕ್ಷನ್ತು - ನಃ - ಗಿರಃ ॥ ೩.೪೭ ॥**

ಗಾಥಿನಸ್ಸಾಮ ॥ ಕೌಶಿಕೋಗಾಥಿರ್ಬೃಹತ್ಯಗ್ನಿಃ ॥

೫ ೦ ೫ ೧ ೨ ೧೦ ೨ರ
**೪೭.೧. ಅದರ್ಶಿಗಾತುವಿತ್ತಮಾಽ೬ಏ ॥ ಯಾಸ್ಮಿನ್ -ಸ್ಥಿ- ವ್ರತಾನಿಯಾ**

೧ ೦ ೨ ೨ ೨ ೧೦ ೨ ೧
**ದಧುಃ । ಊಪೋಷುಜಾಽ೩ । ಹಾಽ೩ಹಾಇ । ತಮಾರಿಯಸ್ಯವ**

೨ ೧ ೨ ೨ ^ ೨ ೦ ೧ ೨
**ರ್ಧನಮ್ ॥ ಅಗ್ನಾಇನ್ನಕ್ಷಾಽ೩ । ಹಾಽ೩ಹಾ ॥ ತುನೋಗಿರಃ ।**

೧ ೨ ^ ೧
**ಇಡಾಽ೨೩ಭಾಽ೩೪೩ । ಓಽ೨೩೪೫ಇ ॥ ಡಾ ॥**

*ದೀ - ೬ । ಪ - ೧೧ । ಮಾ - ೮ । ಕೈ । ೧೩ ॥ ೮೩ ॥*

**ಯಸ್ಮಿನ್** ಅಗ್ನೌ **ವ್ರತಾನಿ** ಕರ್ಮಾಣಿ **ಆದಧುಃ** ಯಜಮಾನಾಃ ಆಹಿತವನ್ತಃ **ಗಾತುವಿತ್ತಮಃ** ಅತಿಶಯೇನ ಮಾರ್ಗಾಣಾಂ ಜ್ಞಾತಾ ಸೋಽಗ್ನಿಃ । **ಅದರ್ಶಿ** ಪ್ರಾದುರಭೂತ್ । ಕಿಂಚ । **ಸುಜಾತಂ** ಸಮ್ಯಕ್ ಪ್ರಾದುರ್ಭೂತಂ ಅಸ್ಯ **ಆರ್ಯಸ್ಯ** ಉತ್ತಮವರ್ಣಸ್ಯ **ವರ್ದ್ಧನಂ** ವರ್ದ್ಧಯಿತಾರಂ **ಅಗ್ನಿಂ ನಃ** ಅಸ್ಮಾಕಂ **ಗಿರಃ** ಸ್ತುತಿರೂಪಾಃ ವಾಚಃ **ಉಪೋನಕ್ಷನ್ತು** ಉಪಗಚ್ಛನ್ತು । ನಕ್ಷಗತಾವಿತಿ ಧಾತುಃ । **ನಕ್ಷನ್ತುನೋಗಿರಃ** ಇತಿ ಛಂದೋಗಾಃ । **ನಕ್ಷನ್ತನೋಗಿರಃ** ಇತಿ ಬಹ್ವೃಚಾಃ ॥

**ಗಾತುವಿತ್ತಮಃ** - ಯೋಗವೇತ್ತರು, ಯಜ್ಞಕರ್ಮ ಅನುಷ್ಠಾನ ನಿರತರು, ಭಕ್ತರ ಭಾವಗಳನ್ನು ಅರಿತವರು ಧರ್ಮಮಾರ್ಗಿಗಳು, **ಅಗ್ನಿ** - ಪರಮಾತ್ಮ, **ಯಸ್ಮಿನ್** - ಯಾವ **ವ್ರತಾನಿ** - ಸತ್ಯ ಅಹಿಂಸಾ ಬ್ರಹ್ಮಚರ್ಯವ್ರತ ನಿರತರು, ಕರ್ಮಗಳನ್ನೂ ನಿಯಮಗಳನ್ನೂ ವಿಧಿಪೂರ್ವಕವಾಗಿ ಪಾಲಿಸುವವರು, **ಆದಧುಃ** - ಅರ್ಪಿಸುವವರು, ಸ್ಥಾಪಿಸಿದರು, ಆಧಾರಗೊಂಡಿರುವ, **ಅದರ್ಶಿ** - ಸಾಕ್ಷಾತ್ಕಾರವಾದವರು, ಜ್ಞಾತೃ. ಪ್ರದೀಪ್ತ **ಸುಜಾತಮ್** - ಸುಪ್ರಸಿದ್ಧರು, ಸ್ಪಷ್ಟವಾಗಿ ಪ್ರಕಟವಾಗಿ, **ಆರ್ಯಸ್ಯ** - ಉಪಾಸಕನ, ಸದಾಚಾರಿಯ, ಯಾಜ್ಞಿಕನ, ಶ್ರೇಷ್ಠನಾದವನ, **ವರ್ಧನಮ್** - ಉಚ್ಛ್ರಾಯವನ್ನು ಏಳಿಗೆಯನ್ನು, ಉನ್ನತಿಯನ್ನು, **ಗಿರಃ** - ಸ್ತುತಿಗಳು, ಸ್ತೋತ್ರಗಳು, **ಉಪ ಉನಕ್ಷನ್ತು** - ನಿರನ್ತರವಾಗಿ ಅರ್ಪಿತವಾಗಲಿ.

ಯೋಗವೇತ್ತರೂ ಯಜ್ಞಕರ್ಮನಿರತರೂ ಭಕ್ತನ ಭಾವ ತಿಳಿದವರೂ ಬ್ರಹ್ಮಚರ್ಯಾದಿ ವ್ರತನಿರತರೂ ನಿಷ್ಕಾಮ ಕರ್ಮಿಗಳೂ ಸದಾಚಾರಿಗಳೂ ಆದ ಉಪಾಸಕರನ್ನು ಉಚ್ಛ್ರಾಯಸ್ಥಿತಿಗೇರಿಸಿ ಸಾಕ್ಷಾತ್ ದರ್ಶನಕೊಡುವ ಅಗ್ನಿ ಭಗವಂತನಿಗೆ ನಮ್ಮ ಸ್ತೋತ್ರಗಳು ನಿರಂತರವಾಗಿ ಅರ್ಪಿತವಾಗಲಿ.

ಧರ್ಮದ ದಾರಿಯ ದೇವನೀತನೆ ಪ್ರಕಟವಾಗುತಿಹನು
ಈತನ ಮಾಧ್ಯಮದಿಂದೀ ಯಾಗವು ಅರ್ಥಪೂರ್ಣವಹುದು ।
ಅತ್ಯುತ್ತಮಸನ್ಮಾರ್ಗದ ಫಲವೀ ಅಗ್ನಿಕರುಣೆ ನಮಗೆ;
ಸಕಲಪ್ರಗತಿಯ ಗತಿಯೀ ಸ್ವಾಮಿಯು ನಮ್ಮ ನುತಿಗೆ ನಲಿಗೆ ॥

# ಋಕ್ - ೪೮

ಮನುರ್ವೈವಸ್ವತಃ ॥ ಬೃಹತ್ಯಗ್ನಿಃ ॥

೩ ೨ ೩ ೨ ೩ ೧ ೨ ೩ ೧ ೨ ೩ ೧ ೨ ೩ ೨
ಅಗ್ನಿರುಕ್ಥೇ ಪುರೋಹಿತೋ ಗ್ರಾವಾಣೋ ಬರ್ಹಿರಧ್ವರೇ ।

೩ ೧ ೨ ೩ ೨ ೩ ೨ ೩ ೧ ೨
ಋಚಾ ಯಾಮಿ ಮರುತೋ ಬ್ರಹ್ಮಣಸ್ಪತೇ ದೇವಾ ಅವೋ ವರೇಣ್ಯಮ್ ॥

೩ ೨ ೩ ೨ ೩ ೧ ೨ ೩ ೨ ೩ ೧ ೨ರ ೩ ೨
ಅಗ್ನಿಃ - ಉಕ್ಥೇ - ಪುರೋಹಿತಃ - ಪುರಃ - ಹಿತಃ । ಗ್ರಾವಾಣಃ - ಬರ್ಹಿಃ -

೩ ೨ ೩ ೨ ೩ ೧ ೨ರ ೧ ೨ರ
ಅಧ್ವರೇ ॥ ಋಚಾ - ಯಾಮಿ - ಮರುತಃ - ಬ್ರಹ್ಮಣಃ - ಪತೇ । ದೇವಾಃ - ಅವಃ -

೧ ೨ರ
ವರೇಣ್ಯಮ್ ॥ ೪. ೪೮ ॥

ಬಾರ್ಹದುಕ್ಥೇ ದ್ವೇ ॥ ದ್ವಯೋರ್ಬೃಹದುಕ್ಥೋ ಬೃಹತ್ಯಗ್ನಿಃ ॥

೫ ೩ ೨ ೪ ೫ ೨ರ ೧ರ ೨ರ ೧ ೩ ೨
೪೮.೧. ಅಗ್ನಿರುಕ್ಥಾಇ ॥ ಪುರೋऽಹಿಹಾಇತಾಃ । ಗ್ರಾವಾಣೋಬ । ರ್ಹಿರಾ

೪ ೫ ೨ ೧ರ ರ ರ ಅ —
ऽಇಧ್ವಾರಾಇ । ಋಚಾಯಾಮಿಮರುತೋಬ್ರಹ್ಮಾಣಸ್ಪಾತಾऽ೨ಇ ॥

೧ — ೧ ೨ ೧ ೫ ೪
ದಾಇವಾऽ೨ಆವಾऽ೨೩: ॥ ವರೋऽ೨೩೪ವಾ ॥ ಣಾऽ೫ಯೋऽ

॥ ೫
ಓಹಾಇ ॥ *ದೀ - ೬ । ಪ - ೮ । ಮಾ - ೯ । ಗೋ । ೧೪ ॥ ೮೪ ॥*

೫ ರ ರ ೪ ೫ ೩ ೨ ^ ೩ ೫ ೪
೪೮.೨. ಅಗ್ನಿರುಕ್ಥಾಔಹೋಹೋಹಾಇ ॥ ಪುರೌವಾಓऽ೨೩೪ವಾ । ಹಿತಾಃ।

೨ರ ೧ರ ೨ರ ೧ ೩ ೨ ^ ೩ ೫ ೪ ೨ ನ
ಗ್ರಾವಾಣೋಬ । ರ್ಹಿರೌವಾಓऽ೨೩೪ವಾ । ಧ್ವರಾಇ । ಋಚೌऽ

೪೦೫

೨ ೧೦ ೦ ೩ —
೩ಹೋ । ಯಾಮಿಮರುತೋಽಬ್ರಹ್ಮಾಣಿಸ್ಪಾತಾಽ೨ಇ ॥ ದಾ೩ವಾ

— ೧ ೨ ೧ ೫ ೪ ॥ ೫
ಽ೨ಆವಾಽ೨೩ಃ ॥ ವರೋಽ೨೩೪ವಾ ॥ ಣಾಽ೫ಯೋಽ೬ಹಾಇ ॥

*ದೀ - ೭ । ಪ - ೧೧ । ಮಾ - ೧೧ । ಚ । ೧೫ । ೮೫ ॥*

**ಉಕ್ಥೇ** ಸ್ತೋತ್ರ ಶಸ್ತ್ರಾತ್ಮಕೇ **ಅಧ್ವರೇ** ಹಿಂಸಾ ರಹಿತೇ ಅಸ್ಮಿನ್ ಯಜ್ಞೇ **ಅಗ್ನಿಃ ಪುರೋಹಿತಃ** ಯಜ್ಞಾತ್ಪುರತಃ ಉತ್ತರವೇದ್ಯಾಮ್ ಋತ್ವಿಗ್ಭಿರ್ನಿಹಿತೋಽಭೂತ್ । ತಥಾ **ಗ್ರಾವಾಣಃ** ಸೋಮಾಭಿಷವಾರ್ಥಂ ಪುರತೋ ನಿಹಿತಾಃ **ಬರ್ಹಿಃ** ಚ ಪುರತೋ ನಿಹಿತಮ್ ಆಸಾದಿತಮ್ । ಏವಂ ಸಾಮಗ್ರ್ಯಾಂ ಸತ್ಯಾಂ **ಹೇಮರುತಃ** ಏಕೋನ ಪಂಚಾಶನ್ಮರುದ್ಗಣಾಃ । ಹೇ **ಬ್ರಹ್ಮಣಸ್ಪತೇ** ಸ್ತೋತ್ರಸ್ಯಪಾಲಕ! ಏತನ್ನಾಮಕ! ದೇವ! ಹೇ **ದೇವಾಃ** ದ್ಯೋತನಾದಿ ಗುಣಯುಕ್ತಾಃ ಇಂದ್ರಾದಯಃ **ವರೇಣ್ಯಂ** ವರಣೀಯಂ ಭಜನೀಯಂ **ಅವಃ** ರಕ್ಷಣಮ್ **ಋಚಾ**ಸೂಕ್ತರೂಪಯಾ ಸ್ತುತ್ಯಾ **ವಃ** ಯುಷ್ಮಾನ್ **ಯಾಮಿ** ಮನುರಹಂ ಯಾಚಯಾಮಿ । ಯಾಚತೇರ್ಲಟಿರೂಪಮ್ । ವರ್ಣಲೋಪಶ್ಛಾಂದಸಃ । ಮರುತೋ ಬ್ರಹ್ಮಣಸ್ಪತೇ ದೇವಾಃ ಇತಿ ತ್ರೀಣ್ಯಾಮನ್ತ್ರಿತತ್ವೇನ ಛಂದೋಗಾಃ ಪಠನ್ತಿ । ಮರುತಃ - ಬ್ರಹ್ಮಣಸ್ಪತಿಂ - ದೇವಾನ್ ಇತಿ ದ್ವಿತೀಯಾನ್ತತ್ವೇನ ಬಹ್ವೃಚಾಃ ॥ ಮರುತೋ ಬ್ರಹ್ಮಣಸ್ಪತೇ ದೇವಾಃ ಇತಿ ತ್ರೀಣಿ ಸಂಬೋಧನಾನಿ - ಐ.ಬ್ರಾ.೩.೧೭ ॥

**ಉಕ್ಥೇ** - ಯಜ್ಞದಲ್ಲಿ ನೆರವೇರಿಸುವ ಶಸ್ತ್ರಾತ್ಮಕ ಸ್ತೋತ್ರ ಪ್ರಶಂಸನೀಯವಾದ ಸ್ತುತಿರೂಪದ ವಾಙ್ಮಯ, **ಅಧ್ವರೇ** - ಯಜ್ಞ, ಜ್ಞಾನಯಜ್ಞ, ಜೀವನಯಜ್ಞ, **ಪುರೋಹಿತಃ** - ಯಜ್ಞಾದಿಗಳ ಕಾರ್ಯದ ಮುಂದಾಳು, **ಗ್ರಾವಾಣಃ** - ಸೋಮರಸವನ್ನು ಪಡೆಯಲು ಉಪಯೋಗಿಸುವ, ಜಜ್ಜುವ ಕಲ್ಲು, ವಾಯುಗಳು, ತಾಲು ಆದಿ ಸ್ಥಾನಗಳು, ಅಕ್ಷರಗಳು ದಯಿಸುವ ಹುಟ್ಟುವಸ್ಥಾನ, ಋತ್ವಿಜರು, **ಬರ್ಹಿಃ** - ದರ್ಭಾಸನ, **ದೇವಾಃ** - ಪ್ರಾಣಾದಿ ವಾಯು, ಜೀವಿಗಳು, ಅಗ್ನಿ, ಮರುತ್, ಬ್ರಹ್ಮಣಸ್ಪತಿ ಆದಿ ದೇವತೆಗಳು, **ಮರುತಃ** - ಋತ್ವಿಜರು, ಮರುತ್‌ಗಣಗಳು, **ಬ್ರಹ್ಮಣಸ್ಪತೇ** - ವೇದಪ್ರಕಾಶಕ, ಭಗವಂತ, ಬ್ರಹ್ಮಾಂಡ ಪಾಲಕ, **ಋಚಾ** - ವೇದಮನ್ತ್ರಗಳ ಸ್ತುತಿರೂಪೀ ಸೂಕ್ತಗಳು, **ವರೇಣ್ಯಮ್** - ಉತ್ತಮ ಶ್ರೇಷ್ಠವಾದ, ಸ್ವೀಕಾರಯೋಗ್ಯವಾದ, **ಅವಃ** - ರಕ್ಷಣೆಗಾಗಿ, **ಯಾಮಿ** - ಬೇಡುತ್ತೇನೆ.

ಈ ಯಜ್ಞದಲ್ಲಿ ಶಸ್ತ್ರಾತ್ಮಕ ಸ್ತೋತ್ರಗಳನ್ನು ಗಾನಮಾಡುತ್ತಾ ಅಗ್ನಿಯನ್ನೂ ಸೋಮ ರಸ ತೆಗೆಯುವ ಕಲ್ಲನ್ನೂ ಆಯಾಸ್ಥಾನಗಳಲ್ಲಿ ವಿಧಿಪೂರ್ವಕವಾಗಿ ಪ್ರತಿಷ್ಠಿಸಿ ಮರುದ್ಗಣ ಗಳನ್ನೂ ಬ್ರಹ್ಮಣಸ್ಪತಿಯನ್ನೂ ಇನ್ದ್ರಾದಿ ದೇವತೆಗಳನ್ನೂ ವಿಧಿಪೂರ್ವಕವಾಗಿ ಆವಾಹಿಸಿ ಯಥಾಯೋಗ್ಯ ಕೈಂಕರ್ಯಗಳನ್ನೂ ಸೋಮರಸವನ್ನೂ ಅರ್ಪಿಸಿರುವ ಮನು ವೆಂಬ ನಾನು ಉತ್ತಮೋತ್ತಮ ರಕ್ಷಣೆ ನೀಡಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ.

ಪ್ರಶಂಸನೀಯವಾದ ಜೀವನಯಜ್ಞದಲ್ಲಿ ಅಗ್ನಿಯೇ ಪುರೋಹಿತನಾಗಿರುವ, ವಾಯುವೇ ಸೋಮರಸ ತೆಗೆಯುವ ಕಲ್ಲಾಗಿರುವ, ದೇವತೆಗಳೇ ಜೀವಿಗಳಾಗಿರುವ ಮರುದ್ಗಣಗಳೇ ಋತ್ವಿಜರಾಗಿರುವ, ಬೃಹಸ್ಪತಿಯೇ ಬ್ರಹ್ಮಾಂಡಪಾಲಕನಾಗಿರುವ ನಿಮ್ಮನ್ನು ಉತ್ತಮರಕ್ಷಣೆಗಾಗಿ ಬೇಡುವೆನು.

ವಾಣಿಯ ಉತ್ಪತ್ತಿಗೆ ಕಾರಣನಾದ ಅಗ್ನಿಯೇ ಪುರೋಹಿತನಾಗಿರುವ ತಾಲು-ಆದಿ -ಅಕ್ಷರಜನ್ಯಸ್ಥಾನಗಳೇ ಉಚ್ಚಾರಣೆಯ ಗುರುತ್ವ ಲಘುತ್ವಾದಿಗಳನ್ನು ವಿಭಾಗಿಸುವ ದರ್ಭಾಸನಗಳಾಗಿರುವ ಈ ವಾಕ್‌ಯಜ್ಞದ ಉತ್ತಮೋತ್ತಮ ರಕ್ಷಣೆಯಾಗಬೇಕೆಂದು ನಿಮ್ಮನ್ನು ಬೇಡುತ್ತೇನೆ.

ಉಕ್ಥ್ಯವೆಂಬ ಸವನದೆ ನೀನಗ್ನಿಯೆ! ಮೊದಲು ತೋರಿ ನಿಲುವೆ,
ಬಳಿಕ ಸೋಮವನು ಕುಟ್ಟುವ ಕಲ್ಗಳು ದರ್ಭೆಯಾಸ್ತರಣವೂ ।
ಯಾಗಶಾಲೆಯಲಿ ಸಲ್ಲುವುವಲ್ಲವೆ; ವೇದಮಂತ್ರವಿಧಿಯಿಂ
ಮರುತರೆ! ದೇವರೆ! ಸುರಗುರುವೇ! ನೀವೆಮ್ಮ ಪೊರೆಯಿರೊಲಿದು ॥

## ಋಕ್ - ೪೯

ಸುದೀತಿ ಪುರಮೀಳಾವಾಂಗಿರಸೌ ॥ ಬೃಹತ್ಯಗ್ನಿಃ ॥

೩ ೧ ೨ ೩ ೧ ೨ ೩ ೧ ೨ ೩ ೧ ೨
ಅಗ್ನಿಮೀಡಿಷ್ವಾವಸೇ ಗಾಥಾಭಿಃ ಶೀರಶೋಚಿಷಮ್ ।

೩ ೨ ೩ ೧ ೨ ೩ ೨ಉ ೩ ೧ ೨ ೩ ೧ ೨ ೩ ೨
ಅಗ್ನಿಜ್‌ರಾಯೇ ಪುರುಮೀಢ ಶ್ರುತನ್ನರೋಗ್ನಿಃ ಸುದೀತಯೇ ಛರ್ದಿಃ ।

೩ ೨ ೩ ೧ ೨೧ ೧ ೨೧ ೩ ೧ ೨ ೩ ೨ ೩
ಅಗ್ನಿಮ್ - ಈಡಿಷ್ವ - ಅವಸೇ । ಗಾಥಾಭಿಃ - ಶೀರಶೋಚಿಷಮ್ - ಶೀರ ಶೋಚಿ

೩ ೨ ೩ ೨ ೩ ೨
ಷಮ್ ॥ ಅಗ್ನಿಮ್ - ರಾಯೇ - ಪುರುಮೀಢ - ಪುರು - ಮೀಢ - ಶ್ರುತಮ್ -

೧ ೨೧ ೩ ೨ ೩ ೧ ೨ ೩ ೧ ೨ ೩ ೨
ನರಃ । ಅಗ್ನಿಃ - ಸುದೀತಯೇ - ಸು - ದೀತಯೇ - ಛರ್ದಿಃ ॥ *ಸ. ೪೯ ॥*

ಪೌರುಮೀಢಮ್ ॥ ಪುರುಮೀಢೋಬೃಹತ್ಯಗ್ನಿಃ ॥

೫ ೪ ೫ ೧ ೩ ೨ ೩ ೧ ೪ ೧ ೫ ೧ ೨ ೧ ೧ ೧ ೨ ೧ ೦
೪೯.೧. ಅಗ್ನಿಮೀ । ಡಿಷ್ವಾ೨೩೪ಔಹೋವಾ ॥ ಆವಸೇ । ಗಾಥಾಭಿಃಶೀ ।

೧೧ ೨ ೧ ೦
ರಶೋಚಾ೨೩ಇಷಾಮ್ । ಅಗ್ನಿಙ್‌ರಾಯಾಇ । ಪುರೂಮಾ೨

೨ ೧ ೧ ೨ ೧
೩ಇಢಾ । ಶ್ರುತನ್ನರೋ ॥ ಅಗ್ನಿಃಸೂ೨೩ದೀ ॥ ತಯಾಇಛಾ೨

೧ ೨ ೧ ೧ ೧ ೧
೩೪೫ರ್ದಿ೬ಹಾಃ ॥ ದಕ್ಷಾ೩ಯಾ೨೩೪೫ ॥

*ದೀ - ೯ । ಪ - ೧೧ । ಮಾ - ೭ । ತೇ । ೧೬ । **೮೬** ॥*

ಹೇ ಪುರುಮೀಢ ತ್ವಮ್ **ಅಗ್ನಿಮ್ ಅವಸೇ** ರಕ್ಷಣಾಯ **ಈಡಿಷ್ವ** ಸ್ತುಹಿ **ಗಾಥಾಭಿಃ** ಗಾಥೇತಿವಾಙ್‌ನಾಮ - *೧.೧೧.೩೬ ॥* ಮನ್ತ್ರರೂಪಾಭಿಃ ವಾಗ್ಭಿಃ । ಕೀದೃಶಮ್? **ಶೀರ ಶೋಚಿಷಮ್** ಶಯನಸ್ವಭಾವ ರೋಚಿಷಮ್ । ತಥಾ**ರಾಯೇ**ಧನಾಯ ಈಡಿಷ್ವ । **ಶ್ರುತಮ್ ಏನಂ ನರಃ** ಅನ್ಯೇऽಪಿಯಜಮಾನಾಃ ಸ್ತುವನ್ತಿಸ್ವಾರ್ಥಮ್ । ತಸ್ಮಾತ್ **ಸುದೀ ತಯೇ** ಮಹ್ಯಮ್ । **ಅಗ್ನಿಃ** ತ್ವಯಾಭಿಷ್ಟುತಃ ಸನ್ **ಛರ್ದಿಃ** ಗೃಹಮ್ ಪ್ರಯಚ್ಛತ್ವಿತ್ಯೇವಂ ಸುದೀತಿಃ ಪುರುಮೀಢಂ ಬ್ರೂತೇ । **ಅಗ್ನಿಃ ಸುದೀತಯೇ ಛರ್ದಿಃ** ಇತಿ ಛಂದೋಗಾಃ । **ಅಗ್ನಿಂ ಸುದೀತಯೇ ಛರ್ದಿಃ** ಇತಿ ಬಹ್ವೃಚಾಃ ॥

**ಪುರುಮೀಢ** - ಸ್ತುತಿಗಳಿಂದ ಸಂತಸಪಟ್ಟಿರುವ, **ಶೀರಶೋಚಿಷಮ್** - ಪ್ರಜ್ವಲಿತ ವಾಗಿರುವ ಜ್ವಾಲೆ, ಪಸರಿಸಿರುವ ಜ್ಯೋತಿಸ್ವರೂಪನಾದ, **ಶ್ರುತಮ್** - ಶ್ರುತಿ ಪ್ರಸಿದ್ಧವಾದ, ತಿಳಿದಿರುವ, **ಅಗ್ನಿಮ್** - ಅಗ್ನಿ ಭಗವಂತನನ್ನು, **ಅವಸೇ** - ರಕ್ಷಣೆಗಾಗಿ, **ರಾಯೇ** - ಐಶ್ವರ್ಯಕ್ಕಾಗಿ, ಮೋಕ್ಷಕ್ಕಾಗಿ, **ಗಾಥಾಭಿಃ** - ಮಂತ್ರರೂಪವಾದ ವಾಣಿಯಿಂದ, ಗಾನ ದಿಂದ, **ಈಡಿಷ್ವ** - ಸ್ತುತಿಸಿರಿ, **ನರಃ** - ಮನುಷ್ಯನು, ಯಜಮಾನನು, **ಸುದೀತಯೇ** - ಯೋಗ್ಯರಕ್ಷಣೆಗಾಗಿ, ಪ್ರಕಾಶಯುಕ್ತವಾಗಲು, **ಛರ್ದಿಃ** - ಮನೆ, ಗೃಹನಾಮ.

ಶ್ರುತಿಪ್ರಸಿದ್ಧವಾದ ಪ್ರಜ್ವಲಿಸುತ್ತಿರುವ ಅಗ್ನಿಯನ್ನು ಮನ್ತ್ರರೂಪವಾದ - ಗಾನಾದಿ ವಾಣಿಗಳಿಂದ ಬಹುವಾಗಿ ಸ್ತೋತ್ರಮಾಡಿ ಉತ್ತಮರಕ್ಷಣೆಯನ್ನು ನೀಡುವ ಪ್ರಕಾಶಯುಕ್ತ ವಾದ ಮನೆಯನ್ನು ಮನುಷ್ಯರು ಕೇಳಿಕೊಳ್ಳುತ್ತಾರೆ.

*ಸ್ತೋತ್ರಪಾಠಕರೆ! ನುತಿಸಿರಿ ಜ್ವಾಲಾಜಟಾಲವಹ್ನಿಯನು*
*ಉದ್ಗಾತೃಗಳೇ! ಕರಾಳವಿಶಾಲಧೂಮಕೇತುವಿವನಂ ।*
*ಒಳ್ಳೆಯ ನೆಲೆಗೆಂದೊಳ್ಳೆಯ ಫಲಕೆಂದಮಿತಭಾಗ್ಯಕೆಂದು*
*ಓಜೋಮಯನಂ ತೇಜೋಮಯನಂ ಪಾಡಿಪ್ರೊಗಳಿರೀಗಳ್ ॥*

## ಋಕ್ - ೫೦

ಪ್ರಸ್ಕಣ್ವ ಕಾಣ್ವಃ ॥ ಬೃಹತ್ಯಗ್ನಿಃ ॥

**ಶ್ರುಧಿ ಶ್ರುತ್ಕರ್ಣ ವಹ್ನಿಭಿರ್ದೇವೈರಗ್ನೇ ಸಯಾವಭಿಃ ।**
**ಆ ಸೀದತು ಬರ್ಹಿಷಿ ಮಿತ್ರೋ ಅರ್ಯಮಾ ಪ್ರಾತರ್ಯಾವಭಿರಧ್ವರೇ ॥**

**ಶ್ರುಧಿ - ಶ್ರುತ್ಕರ್ಣ - ಶ್ರುತ್ - ಕರ್ಣ - ವಹ್ನಿಭಿಃ । ದೇವೈಃ - ಅಗ್ನೇ - ಸಯಾವಭಿಃ -**

೩ ೧ ೨೦ ೩ ೧ ೨ ೩ ೨ ೩ ೨ ೩ ೨
ಸ - ಯಾವಭಿಃ ॥ ಆ - ಸೀದತು - ಬರ್ಹಿಷಿ - ಮಿತ್ರಃ - ಮಿ - ತ್ರಃ - ಅರ್ಯಮಾ ।

೩ ೧ ೨ ೩ ೧ ೨೦ ೩ ೨
ಪ್ರಾತರ್ಯಾವಭಿಃ - ಪ್ರಾತಃ - ಯಾವಭಿಃ - ಅಧ್ವರೇ ॥

ಕಾರ್ಣಶ್ರವಸಮ್ ಪ್ರಾಸ್ಕಣ್ವಂ ವಾ ॥ ಕರ್ಣಶ್ರವಾ ಬೃಹತ್ಯಗ್ನಿಃ ॥

೩ ೨ ೧ ೫ ೪ ೫ ೨೦ ೧೦
೫೦.೧. ಶ್ರುಧೀ೭೩ । ಶ್ರೂ೭೨೩೪ । ಧಿಶ್ರುತ್ಕರ್ಣವ । ಹ್ನಿಭಾಇಃ ॥ ದೇವೈ

೦ ೨ ೧೦ ೨ ೧೦ ೦ ೦
ರಗ್ನೇಸಯಾವಾ೭೨೩ಭೀಃ । ಆಸೀದತುಬರ್ಹಿಷಿಮಿತ್ರೋ೩ಅರ್ಯಾ

೨ ೦ ೧ ೨ ೧ ^ ೩
೭೨೩ಮಾ ॥ ಪ್ರಾತರ್ಯಾ೭೨೩ವಾ೭೩ ॥ ಭಾ೭೨ಇರಾ೭೨೩೪

೫೦ ೦ ೨ ^ ೨ ೩ ೨
ಔಹೋವಾ ॥ ಏ೭೩ । ಧ್ವರಆ ॥

ದೀ - ೧೦ । ಪ - ೧೦ । ಮಾ - ೭ । ಮೇ । ೧೭ ॥ ೮೭ ॥

ಹೇ **ಶ್ರುತ್ಕರ್ಣ**! ಶ್ರವಣಸಮರ್ಥಾಭ್ಯಾಂ ಕರ್ಣಾಭ್ಯಾಂ ಯುತ! ಅಗ್ನೇ! ಅಸ್ಮದೀಯಂ ವಚನಂ **ಶ್ರುಧಿ** ಶ್ರುಣು । ಯಃ **ಮಿತ್ರಃ** ದೇವಃ ಅರ್ಯಮಾ ದೇವಶ್ಚ. **ಅನ್ಯೈಃ ಪ್ರಾತರ್ಯಾವಭಿಃ** ಪ್ರಾತಃ ಕಾಲೇದೇವಯಜನಂ ಗಚ್ಛದ್ಭಿಃ **ದೇವೈಃ** ಸರ್ವೈಃ **ಸಯಾವಭಿಃ** ಆಹವನೀಯಾಗ್ನಿನಾ ತ್ವಯಾ ಸಮಾನಗತಿಭಿಃ ಅನ್ಯೈಃ **ವಹ್ನಿಭಿಃ** ದೇವೈಃ ಸಹ **ಅಧ್ವರೇ** ಕ್ರತು ನಿಮಿತ್ತೇ **ಬರ್ಹಿಷಿ** ದರ್ಭೇ **ಆಸೀದತು** ಉಪವಿಶತು । ಆಸೀದತು ಬರ್ಹಿಷಿ ಮಿತ್ರೋ ಅರ್ಯಮಾ ಪ್ರಾತರ್ಯಾವಭಿರಧ್ವರೇ ಇತಿ ಛಂದೋಗಾಃ । ಆಸೀದನ್ತು ಬರ್ಹಿಷಿ ಮಿತ್ರೋ ಅರ್ಯಮಾ ಪ್ರಾತರ್ಯಾವಾಣೋ ಅಧ್ವರಮ್ ಇತಿ ಬಹ್ವೃಚಾಃ ॥

**ಶ್ರುತ್ಕರ್ಣ** - ಶ್ರವಣ ಸಮರ್ಥ, ಒಳ್ಳೆಯದನ್ನೇ ಕೇಳಿಸಿಕೊಳ್ಳುವವ, **ಶ್ರುಧಿ** - ಕಿವಿ ಗೊಟ್ಟು ಕೇಳಿ, ಆಲಿಸಿ, **ಅಗ್ನಿಃ** - ಪರಮಾತ್ಮ, **ಮಿತ್ರಃ** - ಸ್ನೇಹಿತ, ಪ್ರಾಣವಾಯು, ಮಿತ್ರ

ದೇವತೆ, **ಅರ್ಯಮಾ** - ನ್ಯಾಯವನ್ನೇ ದಯಪಾಲಿಸುವ ದೇವತೆ, **ಪ್ರಾತರ್ಯಾವಭಿಃ** - ಪ್ರಾತಃಕಾಲದ ದೇವಯಜನಕ್ಕೆ ದಯಮಾಡುವ ದೇವತೆಗಳೊಂದಿಗೆ, ದಿನವೂ ಕರ್ಮ ಧ್ಯಾನಾನುಷ್ಠಾನದಿಂದೊಡಗೂಡಿದ, **ಅಧ್ವರೇ** - ಅಪ್ರತಿಹತವಾದ, ಯಜ್ಞದ, ಯೋಗ ಯಜ್ಞದ **ಬರ್ಹಿಷಿ** - ಯಜ್ಞಾನುಷ್ಠಾನಕ್ಕಾಗಿ ಹಾಸಿರುವ ದರ್ಭಾಸನದಲ್ಲಿ ಹೃದಯಾಕಾಶದಲ್ಲಿ, **ಸಯಾವಭಿಃ** - ಸಮಾನಗತಿಯುಳ್ಳ, ಸಹವರ್ತಿ, ಆಹವನೀಯಾದಿ ಅಗ್ನಿಗಳ ಸಮಾನಗತಿಯುಳ್ಳ, **ವಹ್ನಿಭಿಃ** - ಪ್ರಪಂಚವನ್ನು ನಿರ್ವಹಿಸುವ, ಹವ್ಯಸ್ವೀಕರಿಸುವ ಅಗ್ನಿ, **ದೇವೈಃ** - ದೇವತೆಗಳೊಂದಿಗೆ, **ಆಸೀದತು** - ಆಸೀನರಾಗಲಿ, ವಿರಾಜಮಾನರಾಗಲಿ.

ಶ್ರವಣಸಾಮರ್ಥ್ಯವಿರುವ ಅಗ್ನಿಭಗವಂತನೇ ನಮ್ಮ ಪ್ರಾರ್ಥನೆಯನ್ನು ಕಿವಿಗೊಟ್ಟು ಕೇಳುವ ಕೃಪೆ ಮಾಡು. ಮಿತ್ರ ಅರ್ಯಮಾದಿ ಪ್ರಾತಸ್ಸವನಯಜ್ಞ ದೇವತೆಗಳೊಂದಿಗೆ ಆಹವನೀಯ ಗಾರ್ಹಪತ್ಯ ದಕ್ಷಿಣಾಗ್ನಿ ಆದಿ ಸಮಾನ ಗತಿಯುಳ್ಳ ದೇವತೆಗಳೊಡನೆ ದಯ ಮಾಡಿ ಯಜ್ಞವೇದಿಯಲ್ಲಿ ಕ್ರತು ನಿಮಿತ್ತ ನಿರ್ಮಿಸಿರುವ ದರ್ಭಾಸನದ ಮೇಲೆ ವಿರಾಜ ಮಾನನಾಗು. ಇದರಿಂದ ಕರ್ತವ್ಯವಾದ ಪ್ರಾತರಗ್ನಿ ಪರಿಚರ್ಯೆಯನ್ನು ಮಾಡಲನು ಕೂಲವಾಗುವುದು.

ಒಳ್ಳೆಯದನ್ನು ಮಾತ್ರ ಕೇಳುವ ಸಾಮರ್ಥ್ಯವಿರುವ ಸಾಧಕರೇ ಆಲಿಸಿ. ಪ್ರಪಂಚ ವನ್ನೇ ನಿರ್ವಹಿಸುವ '**ವಹ್ನಿ**' ಎಲ್ಲರ ಹಿತೈಷಿಯಾದ '**ಮಿತ್ರ**' ನ್ಯಾಯವನ್ನೇ ದಯಪಾಲಿಸುವ '**ಅರ್ಯಮಾ**' ಆದಿದೇವತೆಗಳೂ ದಿನದಿನವೂ ಕರ್ಮದಲ್ಲಿ ತೊಡಗಿರುವ ಯೋಗಿಗಳ ಹೃದಯಾಕಾಶದಲ್ಲೇ ಅಪ್ರತಿಹತಗತಿಶೀಲಗಾದ ಭಗವಂತನೂ ವಿರಾಜಿಸುತ್ತಿದ್ದಾನೆ.

*ನಮ್ಮ ಪ್ರಾರ್ಥನೆಗಳನಾಲಿಸುವನೆ! ಭಕ್ತಾಲಗ್ನ! ಅಗ್ನಿ!*
*ನಮ್ಮೀ ಸ್ತುತಿಗಳನೊಪ್ಪಿಸಿಕೊಳ್ಳಯ್! ಮಿತ್ರ-ಅರ್ಯಮಾದಿ ।*
*ಇತರ ದೇವತೆಗಳೊಡನೆ ನಿನ್ನಯ ಸಮಾನ ಮಹಿಮರೊಡನೆ*
*ಪ್ರಾತಃಕಾಲದ ಸವನದ ವೇಳೆಗೆ ಬಂದು ನೆಲಸು ಜವದಿ ॥*

## ಋಕ್ - ೫೧

ಸೌಭರಿಃ ಕಾಣ್ವಃ ॥ ಬೃಹತ್ಯಗ್ನಿಃ ॥

೧ ೨ರ ೩ ೨ ೩ ೨ಉ ೩ ೨ ೩ ೧ ೨
ಪ್ರ ದೈವೋದಾಸೋ ಅಗ್ನಿರ್ದೇವ ಇನ್ದ್ರೋ ನ ಮಜ್ಮನಾ ।

೧ ೨ ೩ ೧ ೨ ೩ ೧ ೨ರ ೩ ೧ ೨ರ ೩ ೧ ೨
ಅನು ಮಾತರಂ ಪೃಥಿವೀಂ ವಿ ವಾವೃತೇ ತಸ್ಥೌ ನಾಕಸ್ಯ ಶರ್ಮಣಿ ॥

೧ ೨ರ ೧ ೨ರ ೩ ೨ ೩ ೨ ೧ ೨ರ ೩ ೧
ಪ್ರ - ದೈವೋದಾಸಃ - ದೈವಃ - ದಾಸಃ - ಅಗ್ನಿಃ । ದೇವಃ - ಇನ್ದ್ರಃ - ನ - ಮಜ್ಮ

೨ ೧ ೨ರ ೩ ೧ ೨ ೩ ೨ ೩ ೨ ೧ ೨ರ
ನಾ ॥ ಅನು - ಮಾತರಮ್ - ಪೃಥಿವೀಮ್ - ವಿ - ವಾವೃತೇ । ತಸ್ಥೌ - ನಾಕಸ್ಯ -

೧ ೨ರ
ಶರ್ಮಣಿ ॥ ೭.೫೧ ॥

ದೈವೋ ದಾಸಮ್ ॥ ದಿವೋದಾಸೋ ಬೃಹತ್ಯಗ್ನಿಃ ॥

೫ ೦ ೦ ೦ ೪ ೫ ೨ರ ೧ ೨೧
೫೧.೧) ಪ್ರದೈವೋದಾಸೋಗ್ನೀಃ ॥ ದೇವಇನ್ದ್ರೋನಮಜ್ಮನಾ । ಅನುಮಾ

೨ ೧ ೨ ೧೧ ೦ ೨
ꣳ೨೩ತಾ । ರಂಪೃಥಿವೀಂವಿವಾವೃತಾಇ ॥ ತಸ್ಥೌನಾꣳ೨೩ಕಾ ॥

೧ ೨ ೧ ೨ ೧
ಸ್ಯಾಶರ್ಮಣಿ । ಇಡಾꣳ೨೩ಭಾꣳ೩೪೩ । ಓꣳ೨೩೪೫ಇ ॥ ಡಾ ॥

*ದೀ - ೬ । ಪ - ೯ । ಮಾ - ೪ । ಘೀ । ೧೮ ॥ ೮೮ ॥*

ಹೇ ಅಗ್ನಿ! **ದೇವಃ** ದ್ಯೋತಮಾನ ಇಂದ್ರಃ ಪರಮೈಶ್ವರ್ಯಯುಕ್ತಃ **ದೈವೋ ದಾಸಃ** ದಿವೋದಾಸೇನಾಹೂಯಮಾನಃ **ಅಗ್ನಿಃ ಮಾತರಂ** ಸರ್ವಸ್ಯ ಲೋಕಸ್ಯ ಧಾರಣಾತ್ ಪೃಥಿವೀಮಾತಾ, ತಾಮ್, ಪೃಥಿವೀಮ್ **ಅನು ಪ್ರ ವಿ ವಾವೃತೇ** ದೇವಾನ್ ಪ್ರತಿಹ

ವಿರ್ವೋಢುಂ ವಿಶೇಷೇಣ ಪ್ರವರ್ತಯತಿ । ಯಸ್ಮಾದೇನಮಗ್ನಿಂ ದಿವೋದಾಸಃ **ಮಜ್ಮನಾ** ಬಲೇನ ಆಜುಹಾನ ತಸ್ಮಾದಯಮ್ ಅಗ್ನಿಃ **ನಾಕಸ್ಯ** ಸ್ವರ್ಗ ಸ್ವರ್ಗಸ್ಯ ಶರ್ಮಣಿ ಗೃಹೇ ಸ್ವಾಯತನೇ ಏವ **ತಸ್ಥೌ** ಅತಿಷ್ಠತ್ **ಅಗ್ನಿರ್ದೇವ ಇನ್ದ್ರಃ** ಇತಿ **ನಾಕಸ್ಯ ಶರ್ಮಣಃ** ಇತಿ ಚ ಛಂದೋಗಾಃ । **ಅಗ್ನಿರ್ದೇವಾಜ್ ಅಚ್ಛ** ಇತಿ **ನಾಕಸ್ಯ ಸಾನವಿ** ಇತಿ ಚ ಬಹ್ವೃಚಾಃ ॥

**ದೈವೋ ದಾಸಃ** - ಋಷಿ, ದಿವ್ಯಗುಣದಾತೃ ಪರಮಾತ್ಮ ದಾಸೋದರ್ಶತಃ, ದಸ್ ದರ್ಶನೇ, ಸೂರ್ಯ ದ್ಯುಲೋಕದ, **ಅನುಚರ** - ಮಿಂಚು ಆದಿ ತತ್ವಗಳು, **ಅಗ್ನಿ** - ಅಗ್ನಿ ಪರಮಾತ್ಮ, **ದೇವ** - ಬೆಳಗುವ, **ಇನ್ದ್ರಃ ನ** - ಇನ್ದ್ರನಂತೆ, **ಮಾತರಂ** - ಸಮಸ್ತವನ್ನೂ ಧಾರಣೆ ಮಾಡಿರುವ ತಾಯಿ ಸ್ವರೂಪಳಾದ, **ಪೃಥಿವೀಂ** - ಭೂಮಿ, ಧಾರಯತ್ರೀ, ಪೃಥ್ವೀ ಮಾತೆ, ಪುನಃ ಪುನಃ ಪ್ರವೃತ್ತಿ ನಿವೃತ್ತಿ ಎಂಬ ಅನುಶಾಸನಕ್ಕೆ ಬದ್ಧವಾದ ತತ್ತ್ವ **ಅನು** - ಸುತ್ತಲೂ ಅನುಕೂಲವಾದಂತೆ, **ಮಜ್ಮನಾ** - ಶಕ್ತಿಯುತ, ಬಲಪೂರ್ವಕ, ಆತ್ಮ ಬಲದಿಂದ, **ಪ್ರ-ವಿ-ವೃತೇ** - ಅತ್ಯಂತ ಭಾವರೂಪದಲ್ಲಿಂದ ಕೂಡಿರುವ ದೇವತೆಗಳಿಗೆ ಹವಿಸ್ಸನ್ನು ತಲುಪಿಸುವ ಪ್ರವೃತ್ತಿಯುಳ್ಳ, **ನಾಕಸ್ಯ ಶರ್ಮಣಿ ತಸ್ಥೌ** - ಆನಂದಧಾಮವಾದ ಸ್ವರ್ಗದಲ್ಲಿರುವ, ಸ್ವರ್ಗದಲ್ಲಿ ಆಶ್ರಯ ಪಡೆದಿರುವ ದ್ಯುಲೋಕದಲ್ಲಿರುವ.

ದಿವೋದಾಸನೆಂಬ ದಿವ್ಯಗುಣಗಳುಳ್ಳ ಋಷಿಯು ಪೃಥಿವಿಯಲ್ಲಿನ ಅಗ್ನಿಯನ್ನು ಆಹ್ವಾನಿಸಿ ಇನ್ದ್ರನಂತೆ ಶಕ್ತಿಯುತನನ್ನಾಗಿಸಿದ್ದಾನೆ. ಅವನು ಕೊಟ್ಟ ಹವಿಸ್ಸನ್ನು ಆಯಾ ದೇವತೆಗಳಿಗೆ ತಲುಪಿಸುತ್ತಾ ಸ್ವರ್ಗದಲ್ಲಿ ಅಗ್ನಿಯು ತನ್ನ ನೆಲೆಯಲ್ಲಿರುತ್ತಾನೆ.

ದಿವ್ಯಗುಣಗಳ ದಾತಾರನಾದ ಬಲಶಾಲಿಯಾದ ಭಗವಂತನು ಪೃಥಿವ್ಯಂತರಿಕ್ಷಗಳನ್ನೆಲ್ಲಾ ಆವರಿಸುವ ಮಿಂಚಿನ ಪ್ರಕಾಶದಂತೆ ವ್ಯಾಪ್ತನಾಗಿ ಆನಂದ ಧಾಮದಲ್ಲಿರುತ್ತಾನೆ.

*ಪುರುಹೂತನಿಗೆಣೆಯೆನಿಸುವ ಬಲಿಯೇ! ದಿವೋದಾಸಗೆಂದು*
*ಮಾತೆ ವಸುಧೆಯೊಳು ಮೂಡಿಬಂದವನೆ! ವೀತಿಹೋತ್ರ! ದೇವ!*
*ನಿನ್ನಯ ಕರುಣೆಯ ಬೆಳಕಿಂದಲ್ಲವೆ ದಿವೋದಾಸರಾಜಂ*
*ನಾಕಲೋಕನಾಯಕನೆನಿಸಿದನಯ್! ಯಜ್ಞತತ್ತ್ವತೇಜಂ ॥*

## ಋಕ್ - ೫೨

ಮೇಧಾತಿಥಿ ಮೇಧ್ಯಾತಿಥೀ ಕಾಣ್ವೌ ॥ ಬೃಹತೀ ಇಂದ್ರಃ ॥

೨ ೩ ೧ ೨೦ ೩ ೧ ೨ ೩ ೧ ೨ ೩ ೧ ೨೦
ಅಧ ಜ್ಮೋ ಅಧ ವಾ ದಿವೋ ಬೃಹತೋ ರೋಚನಾದಧಿ ।

೩ ೧ ೨ ೩ಕ ೨೦ ೩ ೨ಉ ೩ ೧ ೨
ಅಯಾ ವರ್ಧಸ್ವ ತನ್ವಾ ಗಿರಾ ಮಮಾ ಜಾತಾ ಸುಕ್ರತೋ ಪೃಣ ॥

೧ ೨೦ ೧ ೨೦ ೩ ೨ ೩ ೨ ೩ ೨ ೧ ೨೦ ೩ ೨
ಅಧ - ಜ್ಮಃ - ಅಧ - ವಾ - ದಿವಃ । ಬೃಹತಃ - ರೋಚನಾತ್ - ಅಧಿ ॥ ಅಯಾ -

೩ ೨ ೩ ೨ ೧ ೨೦ ೩ ೨ ೩
ವರ್ಧಸ್ವ - ತನ್ವಾ - ಗಿರಾ - ಮಮ । ಆ - ಜಾತಾ - ಸುಕ್ರತೋ - ಸು - ಕ್ರತೋ -

ಪೃಣ ॥ ೫.೮೧ ॥

ಸೌಕ್ರತವಮ್ ॥ ಸುಕ್ರತುರ್ಬೃಹತ್ಯಗ್ನಿಃ ॥

೫ ೦ ೪ ೫ ೧ ೨ ೧೦ ೦ ೨
೫೨.೧. ಅಧಜ್ಮಾ ಓವಾ ॥ ಧವಾದಾ೨೧ಇವಾ೨೨ಃ । ಬೃಹತೋರೋಚಾನಾ

೧ ೦ ೨೦ ^ ೨ ೧ ೨ ೦
೨೧ದಾಧೀ೨೨ । ಆ । ಯೌ । ಹೌಹೋ೭೩ವಾ । ವಾರ್ದ್ಧಸ್ವತನ್ವಾ ।

೧ ೨ ೧ ೨೦ ೦ ೨
ಗಾಇರಾ೨೧ಮಮಾ೨೨ । ಆಜಾತಾಸೌ । ಹೌಹೋ೭೩ವಾ೨೩ಳ ॥

೫ ೨ ೨ ೦ ೩ ೧೧೧
ಹಾ । ಹಾಉವಾ೨೩ ॥ ಕ್ರತೋಪೃಣಾ೨೨೩ಳ೫ ॥

ದೀ - ೯ । ಪ- ೧೩ । ಮಾ - ೫ । ದು । ೧೯ ॥ ೮೯ ॥

ಹೇ **ಇಂದ್ರ! ಅಧ** ಅಧುನಾ! **ಜ್ಮಃ** ಜಮನ್ತಿಗಚ್ಛನ್ತ್ಯಸ್ಯಾಮಿತಿ ಜ್ಮಾ ಪೃಥಿವೀ ತಸ್ಯಾಃ ಸಕಾಶಾತ್ । **ಅಥವಾ** ಅಪಿವಾ **ದಿವಃ** ಅನ್ತರಿಕ್ಷಾತ್ **ಬೃಹತಃ** ಮಹತಃ ರೋಚನಾತ್ ನಕ್ಷತ್ರೈ

ರ್ದೀಪ್ಯಮಾನಾತ್ ಸ್ವರ್ಗಾದ್ವಾ ಆಗತ್ಯ **ಅಧಿ** ಪಂಚಮ್ಯರ್ಥಾನು ವಾದೀ । **ಅಯಾ** ಅನಯಾ **ತನ್ವಾ**ತಥಾ ವಿಸ್ತೃತಯಾ **ಮಮಾ** ಮದೀಯಯಾ ಗಿರಾಸ್ತುತ್ಯಾ **ವರ್ಧಸ್ವ** ವೃದ್ಧೋ ಭವ । ಹೇ **ಸುಕ್ರತೋ** ಶೋಭನ ಕರ್ಮನ್ನಿಂದ್ರ! **ಜಾತಾ**ಜಾತಾನ್ ಅಸ್ಮದೀಯಾನ್ ಜನಾನ್ ಅಭಿಲಕ್ಷಿತೈಃ ಫಲೈರಾಪೂರಯ ॥

**ಸುಕ್ರತೋ** - ಉತ್ತಮೋತ್ತಮ ಯಜ್ಞದಲ್ಲಿ, ತೊಡಗಿದ ಇಂದ್ರ/ ಅಗ್ನಿ ಶೋಭಾಯಮಾನನಾದ, ಸುಕರ್ಮನಿರತನಾದ, **ಜ್ಮಃ ಅಧಿ** - ಪೃಥಿವಿಯ ಮೇಲೆ, ಕೆಳಗೆ, **ಅಧ** - ಈಗ **ಅಧ - ವಾ** - ಕೆಳಗೆ, **ಅಧವಾ** - ಅಥವಾ, ಮತ್ತು, **ದಿವಃ** - ಅಂತರಿಕ್ಷ, **ಬೃಹತ್ ರೋಚನಾತ್ ದಿವಃ ಅಧಿ** - ಅತೀವ ಪ್ರಕಾಶಮಾನವಾದ, ತಾರಾಮಂಡಲದ, ದ್ಯುಲೋಕದ ಕೆಳಗೆ, **ಅಯಾ** - ಈ, ಇದರಿಂದ, **ಗಿರಾ** - ವಾಣಿ, ಸ್ತುತಿಯೊಂದಿಗೆ, **ತನ್ವಾ** - ವಿಸ್ತಾರವಾದ ಶರೀರ, ತೇಜಸ್ಸಿನಿಂದ, ಶರೀರ ಧರಿಸಿ, **ವರ್ಧಸ್ವ** - ವೃದ್ಧಿ ಹೊಂದು, **ಮಮ ಜಾತಾ** - ನನ್ನ ಜನಗಳ, ನಮ್ಮ ಉತ್ಪನ್ನಗಳ, **ಪೃಣ** - ಪುಷ್ಟಿಮಾಡು, ತೃಪ್ತಿಮಾಡು, ಪೋಷಿಸು, ಇಷ್ಟಾರ್ಥವನ್ನು, ನೆರವೇರಿಸು, ಪೂರ್ಣಗೊಳಿಸು.

ಉತ್ತಮೋತ್ತಮಯಜ್ಞಾದಿ ಕರ್ಮಗಳಲ್ಲಿ ನಿರತನಾಗಿರುವ ಅಗ್ನಿಯೇ ಪೃಥ್ವಿಯ ಕೆಳಗೆ ಮೇಲೆ ಪ್ರಕಾಶಮಯವಾದ ದ್ಯುಲೋಕದಲ್ಲಿ ಇಂದ್ರನಾಗಿ ನನ್ನ ಈ ವಿಸ್ತಾರವಾದ ಸ್ತುತಿರೂಪವಾದ ಸಾಮಗಾನದಿಂದ ಇನ್ನೂ ತೇಜಸ್ವಿಯಾಗಿ ವೃದ್ಧಿಸುತ್ತಾ ನಮ್ಮ ಜನಗಳನ್ನು ಪುಷ್ಟಿಯಾಗಿ ಬೆಳಸಿ ಪೋಷಿಸುತ್ತಿರು.

ಉತ್ತಮೋತ್ತಮಯಜ್ಞಗಳನ್ನು ನೆರವೇರಿಸಿ ಶೋಭಾಯಮಾನವಾಗಿರುವ ಪೃಥ್ವಿಯ ಮೇಲೆ ಅಗ್ನಿಯಾಗಿರುವ ಇಂದ್ರನೇ ತಾರಾಮಂಡಲಗಳಿಂದ ಪ್ರಕಾಶಮಾನವಾಗಿರುವ ದ್ಯುಲೋಕದಿಂದ ಸಕಾಲಕ್ಕೆ ಮಳೆಸುರಿಸಿ ಈ ಭೂಮಿಯ ಮೇಲೆ ವಿಸ್ತಾರವಾಗಿ ಹರಡಿರುವ ಕೃಷಿ ಹಾಗೂ ವನ್ಯಕ್ಷೇತ್ರಗಳಲ್ಲಿ ಬೆಳೆಗಳನ್ನು ಬೆಳಸುತ್ತಾ, ಪೋಷಿಸುತ್ತಾ ಪುಷ್ಟಿಯಾಗುವಂತೆ ವೃದ್ಧಿಸುತ್ತಿರು.

*ಉತ್ತಮಾಧ್ವರದ ಆಧಾರವೆ ನೀನಗ್ನಿ! ತತ್ತ್ವಮಗ್ನೆ!*
*ಕೆಳಗಿರುವೀ ಬುವಿಯಂ ಮೇಲಿರುವಾ ಬಾನನಂತೆ ಬೆಳಗಿ ।*
*ವಿಶಾಲವಾಗಿಸಿ ಪಾಲಿಸು ದೇವಾ! ನಿನ್ನ ನಲ್ಮೆಯಿಂದ*
*ನನ್ನ ನಡೆ-ನುಡಿಗಳೆಲ್ಲ ನೇರ್ಪಾಗಿ ಗೆಳೆಯರೊಲಿದು ಬರಲಿ ॥*

## ಋಕ್ - ೫೩

ವಿಶ್ವಾಮಿತ್ರೋ ಗಾಥಿನಃ ॥ ಬೃಹತ್ಯಗ್ನಿಃ ॥

೧ ೨ ೩ ೨ಉ ೩ ೧ ೨ರ ೩ ೨
ಕಾಯಮಾನೋ ವನಾ ತ್ವಂ ಯನ್ಮಾತೄರಜಗನ್ನಪಃ । ಗ

೧ ೨ರ ೩ ೧ ೨ ೩೧೨ ೩ ೨ ೩ ೨ಉ ೩ ೧ ೨
ನ ತತ್ತೇ ಅಗ್ನೇ ಪ್ರಮೃಷೇ ನಿವರ್ತನಂ ಯದ್ದೂರೇ ಸನ್ನಿಹಾಭುವಃ ॥

೧ ೨ರ ೩ ೨ ೩ ೨ ೧೨ರ ೩೨
ಕಾಯಮಾನಃ - ವನಾ - ತ್ವಮ್ । ಯತ್ - ಮಾತೄಃ ಅಜಗನ್ - ಅಪಃ ॥ ನ - ತತ್ -

೩ ೧ ೨ ೩ ೧ ೨ರ ೧೨ ೩ ೧೨ರ
ತೇ - ಅಗ್ನೇ - ಪ್ರಮೃಷೇ - ಪ್ರ - ಮೃಷೇ - ನಿವರ್ತನಮ್ - ನಿ - ವರ್ತನಮ್ ।

೩ ೨ ೩ ೨ ೩೨ ೧೨ರ
ಯತ್ - ದೂರೇ - ದುಃ - ಏ - ಸನ್ - ಇಹ - ಅಭುವಃ ॥ ೯. ೫೩ ॥

ಕಾಣ್ವೇ ದ್ವೇ ॥ ದ್ವಯೋಃ ಕಣ್ವೋ ಬೃಹತ್ಯಗ್ನಿಃ ॥

೪೦ ೦ ೦ ೪ ೨ ೧೧ ೨೧ ೧ ೧ ೨
೫೩.೧. ಕಾಯಮಾನೋऽ೫ವನಾತುವಾಮ್ ॥ ಯನ್ಮಾತ್ರೂರಾ । ಜಾಗ

೩ ೫ ೨ ೧ ^ ೧ ೨ ೨
ನ್ನಾऽ೨೩ಳಪಾಃ । ನತತ್ತೇಅಗ್ನೇऽ೩ । ಪ್ರಮೃಷೇऽ೩ಹಾऽ೩ಇ ।

೧ ೩ ೫ ೨ ೧೧ ೨ ^
ನಿವಾऽ೨ರ್ತಾऽ೨೩ಳನಾಮ್ ॥ ಯದ್ದೂರಾऽ೨೩ಇಸಾನ್ ॥

೩ ೦ ೨ ೧ ೨ ೪ ೫ ೪
ಇಹಾಭುವಾ । ಔऽ೩ಹೋವಾ । ಹೋऽ೫ಇ ॥ ಡಾ ॥

ದೀ - ೮ । ಪ - ೧೧ । ಮಾ - ೮ । ಟೈ । ೨೦ ॥ ೯೦ ॥

೪ ೫ ೧೧ ೩ ೨^ ೩ ೫ ೨^
೫೩.೨. ಏಕಾಯಾ ॥ ಮಾನೋ । ವನಾತೂऽ೨೩ಳವಾಮ್ । ಓಇ ।

೩ ೫ ೪ ೫ ನ ೨
ತೂऽ೨೩ಳವಾಮ್ । ಉಹುವಾಹಾಇ । ಔऽ೩ಹೋऽ೩೧ಇ ।

೨ ೧೧ ೨೦ ೧ ೧ ೨ ೩ ೫ ೩ ೫ ೪
ಯನ್ಮಾತ್ರೂರಾ । ಜಾಗನ್ನಾ೭೨೩ಳಪಾಃ । ಆ೭೨೩ಳಪಾಃ । ಉಹು

೫ ನ ^ ೨ ೨೧೨೧ ೨ ೧ ೨
ವಾಹಾಇ । ಔ೭೩ಹೋ೭೩೧ಇ ॥ ನತತ್ತಆ । ಗ್ನಾ೭೩ಇಪ್ರಮೃಷಾ

೧ ^ ೩ ೫ ೩ ೫
೭೩ಇ । ನಿವಾ೭೨ರ್ತಾ೭೨೩ಳನಾಮ್ । ತಾ೭೨೩ಳನಾಮ್ ।

೪ ೫ ನ ^ ೨ ೨ ೧೧ ೨೦ ೧
ಉಹುವಾಹಾಇ । ಔ೭೩ಹೋ೭೩೧ಇ ॥ ಯದ್ದೂರೇಸಾನ್ ।

೨^ ೩ ೫ ೩ ೫ ೪ ೫
ಇಹಾಭೂ೭೨೩ಳವಾಃ । ಭೂ೭೨೩ಳವಾಃ ॥ ಉಹುವಾಹಾಇ ।

ನ ೨ ^ ೩ ೫೦ ೦ ೩ ೫
ಔ೭೩ಹೋ೭೩೧೨ । ಯಾ೭೨೩ಳಔಹೋವಾ ॥ ಊ೭೨೩ಳಪಾ ।

*ದೀ - ೭ । ಪ - ೨೫ । ಮಾ - ೨೧ । ಜ್ವಾ । ೨೧ ॥ ೯೧ ॥*

ಹೇ **ಅಗ್ನೇ! ವನಾ** ವನಾನಿ ಕಾನನಾನಿ ಭಕ್ಷಿತುಂ **ಕಾಯಮಾನಃ** ಕಾಮಯಮಾನಃ ತ್ವಂ **ಯತ್** ಯಸ್ಮಾತ್ ಕಾರಣಾತ್ ತಾನಿ ವಿಹಾಯ **ಮಾತೃಃ** ಮಾತೃಭೂತಾ **ಅಪಃ ಅಜಗನ್** ಅಗಮಃ ಗತವಾನಸಿ । ಅಪ್ಸುಪ್ರವಿಷ್ಟತ್ವಾಚ್ಛನ್ನೋ ವರ್ತಸೇ । **ತತ್-ತಸ್ಮಾತ್ ತೇ** - ತವ ನಿವರ್ತನಂ - ನಿತರಾಂ ತತ್ರೈವ ವರ್ತನಂ, ತೇನ ಚ ವಿನಾಶೋಲಕ್ಷ್ಯತೇ । ಸಃ ನ **ಪ್ರಮೃಷೇ** - ಕೃತ್ಯಾರ್ಥೇ ಕೇನ ಪ್ರತ್ಯಯಃ - ನ ಪ್ರಮೃಕ್ಷ್ಯತೇ ನ ಸಹ್ಯತೇ । ಕುತಃ? ಇತ್ಯತ - ಆಹ **ಯತ್** ಯಸ್ಮಾತ್ಕಾರಣಾತ್ **ದೂರೇಸನ್** ದೂರೇ ಅದೃಶ್ಯತಯಾ ವರ್ತಮಾನಸ್ತ್ವಂ **ಇಹ** ಅಸ್ಮತ್ಸಂಬಂಧಿಷ್ವರಣೀ ರೂಪೇಷು ಕಾಷ್ಠೇಷು **ಆಭುವಃ** ಸಮನ್ತಾತ್ ಭವೇಃ । ಮನ್ಥನಾತ್ ಕ್ಷಣಮಾತ್ರೇಣಾಸ್ಮಾಕಂ ಸಮೀಪೇ ಭವಸಿ, ತಸ್ಮಾತ್ತವ ದೂರತೋ ವರ್ತನಮ್ ಅಸ್ಮಭ್ಯಂ ನರೋಚತೇ । ಇಹಾಭುವಃ ಇತಿ ಇಹಾ ಭವ ಇತಿ ಚ ಪಾಠೌ ॥

**ಅಗ್ನೇ** - ಅಗ್ನಿಯೇ ಪರಮಾತ್ಮನೇ, **ವನಾ** - ಕಾಡುಗಳು, ಕಿರಣಗಳು, ಜಗತ್ಕಾರಣವಾದ ಪರಮಾಣುಗಳು, **ಕಾಯಮಾನಃ** - ಅಪೇಕ್ಷಿಸುವ, ಸೇರಿಸುವ, **ಅಪಃ** - ನೀರು, ವ್ಯಾಪಕ ವಿದ್ಯುತ್ತನ್ನುಂಟುಮಾಡುವ, **ಮಾತುಃ** - ತಾಯಂದಿರ, **ಯತ್** - ಈ, ಆದುದ

ರಿಂದ **ಅಜಿಗನ್** - ಜಗತ್ತನ್ನು ಸೃಷ್ಟಿಸಿ, ಪ್ರಾಪ್ತವಾಗಿಸಿ, **ಇಹ** - ಪೃಥ್ವಿಯಮೇಲಿರುವ, ಕಟ್ಟಿಗೆಯಲ್ಲಿ, **ದೂರೇ ಆಭುವಃ ಸನ್** - ದೂರವಾಗಿದ್ದೂ ಅದೃಶ್ಯವಾಗಿದ್ದೂ, ಇಲ್ಲೂ ಇರುವೆ, ದೂರವಾಗಿಯೂ, ಇರುವೆ, **ನಿವರ್ತನಮ್** - ವಾಸಮಾಡುವುದನ್ನು, ಸ್ಥಾನ ವಿಶೇಷವನ್ನು, **ನ ಪ್ರಮೃಷೆ** - ಸಹಿಸುವುದಿಲ್ಲ, ಸರಿ ತೋರುವುದಿಲ್ಲ, ತಿಳಿಯಲಾ ಗುವುದಿಲ್ಲ.

ಅಗ್ನಿಭಗವಂತನೇ ಕಾಡುಗಳನ್ನು ದಹಿಸಲು ಇಚ್ಛಿಸುವ ನೀನು ನಿನ್ನ ಜನ್ಮವಿತ್ತ ತಾಯಿಯಾದ ನೀರಿನಲ್ಲಿ, ಅಡಗಿರುವುದನ್ನು ಅರಿಯಲಾರರು ಎಂದು ತಿಳಿದು, ದೂರದಲ್ಲಿದ್ದೂ ಸಹ ನಮ್ಮ ಸಮಿತ್ತು ಆದಿ ಕಾಷ್ಠಗಳಲ್ಲಿ ಕೃಪೆ ಮಾಡಿ ಪ್ರತ್ಯಕ್ಷವಾಗುವೆ.

ತಾಯಿಯಿಂದ ಜನಿಸಿದ ಮಗುವು ತಾಯಿಯಿಂದ ದೂರವಾಗುಳಿಯಲಾರದೆ ತಾಯಿಯ ಕಡೆಗೇ ಹೋಗುವಂತೆ ದೈವೋದಾಸಾದಿ ಸಂಜ್ಞಿಕ ಅಗ್ನಿಯು ಪ್ರತಿಕ್ಷಣವೂ ಭೂಮಿಯಿಂದ ಹೊರಹೊಮ್ಮುತ್ತಾ ತನ್ನ ಕಾರಣರೂಪವಾದ ದ್ಯುಲೋಕವನ್ನು/ ವಿದ್ಯುತ್ತನ್ನು ಸೇರುತ್ತಿರುತ್ತದೆ.

ಜಗತ್ಕಾರಣವಾದ ಪರಮಾಣುಗಳನ್ನು ಸೇರಿಸುತ್ತಾ ಜಗತ್‌ಸೃಷ್ಟಿಕಾರಕವಾದ ಜಲ ರಾಶಿ ಮುಂತಾದಗಳನ್ನುಂಟುಮಾಡುತ್ತಿರುವ ಪರಮಾತ್ಮನು ದೂರದಲ್ಲಿದ್ದೂ ಸಹ ಹತ್ತಿರ ದಲ್ಲಿರುವುದರಿಂದ ಅವನ ಸ್ಥಾನವನ್ನು ನಾವು ತಿಳಿಯಲಾರರಾಗಿದ್ದೇವೆ.

*ಸಕಲ ಪದಾರ್ಥಗಳಂ ಸಂಘಟಿಸಲು ಶಕ್ತನಲ್ತೆ ನೀನೇ;*
*ಆದುದರಿಂ ನಿನ್ನಯ ತಾಯ್ ಜಲದಂದದಲಿ ರಕ್ಷಿಸೆಮ್ಮಂ ।*
*ಮತ್ತೆ ಸಲಿಲದೊಳಗಡಗದಿರಯ್ ನೀಂ ಭಕ್ತಕಾಮಧೇನು!*
*ದೂರದೊಳಿರ್ದುಂ ಸನಿಹಕೆ ಬಾರೈ! ತೋರು ನಿನ್ನ ನೀನೇ!*

## ಋಕ್ - ೫೪

ಕಣ್ವೋಘೌರಃ ॥ ಬೃಹತ್ಯಗ್ನಿಃ ॥

೧ ೨೦೩ ೧ ೨ ೩ ೨ ೩೧ ೨ ೩ ೧೨
ನಿ ತ್ವಾಮಗ್ನೇ ಮನುರ್ದಧೇ ಜ್ಯೋತಿರ್ಜನಾಯ ಶಶ್ವತೇ ।

೩ ೨ ೩ ೧ ೨ ೩ ೧ ೩ ೧ ೨೦ ೩ ೧ ೨ ೩ ೧ ೨
ದೀದೇಥ ಕಣ್ವ ಋತಜಾತ ಉಕ್ಷಿತೋ ಯಂ ನಮಸ್ಯನ್ತಿ ಕೃಷ್ಟಯಃ ॥

*ಸ್ವ - ೧೫ । ಉ - ೬ । ಧಾ - ೭೧ ॥ ಪ । ದ - ೫ ॥*

೨ ೩ ೧ ೨೦ ೩ ೧ ೨೦ ೧ ೨೦ ೧ ೨೦ ೩ ೧
ನಿ - ತ್ವಾಮ್ - ಅಗ್ನೇ - ಮನುಃ - ದಧೇ । ಜ್ಯೋತಿಃ - ಜನಾಯ - ಶಶ್ವತೇ ॥ ದೀದೇ

೨ ೧ ೨೦ ೩ ೧ ೨ ೩ ೨ ೩ ೨ ೩ ೧ ೨
ಥ - ಕಣ್ವೇ - ಋತಜಾತಃ - ಋತ - ಜಾತಃ - ಉಕ್ಷಿತಃ । ಯಮ್ - ನಮಸ್ಯನ್ತಿ -

೩ ೧ ೨
ಕೃಷ್ಟಯಃ ॥ *೧೦.೫೪ ॥ ಆ - ೪೭ । ಅ - ೨೦ । ಪ - ೧೯೦ ॥ ಇತ್ರೈ । ದ - ೫ ॥*

ಇತಿ ಪಂಚಮೀ ದಶತಿಃ ॥ ೫ ॥ ಪಂಚಮಃ ಖಂಡಃ ॥ ೫ ॥

ಇತಿ ಪ್ರಥಮಪ್ರಪಾಠಕೇ ಪ್ರಥಮೋಽರ್ಧಃ ॥

ಮಾನವಾದ್ಯೇ ದ್ವೇ । ದ್ವಯೋರ್ಮನುಬೃಹತ್ಯಗ್ನಿಃ ॥

೫ ೦ ೨ ೩ ೫ ೧ ೨ ೦
೫೪.೧. ನಿತ್ವಾಮಗ್ನಾಇ ॥ ಮನುರ್ದ್ಧಾಽ೨ಇ೪ಧಾಇ । ಜ್ಯೋತಿರ್ಜನಾ ।

೧ ಅ ― ೦ ೧ ೨ ೧ ಅ ೨ ೧
ಯಾಶಶ್ವಾತಾಽ೨ಇ । ದೀ । ದಾಇ । ಥಕ । ಣ್ವಾಋತಜಾಽ೩ । ತ

^ ೩ ೫ ೧ ೨ ೧ ೧ ೩
ಊಽ೨ಕ್ಷಾಽ೨೩೪ಇತಾಃ ॥ ಯನ್ನಮಸ್ಯಾಽ೨೩ ॥ ತಾಽ೨ಇಕೃಽ೨

೫೦ ೦ ೩ ೫
೩೪ಔಹೋವಾ ॥ ಷ್ಟಾಽ೨೩೪ಯಾಃ ॥

*ದೀ - ೫ । ಪ - ೧೨ । ಮಾ - ೧೧ । ಫ । ೨೨ ॥ ೯೨ ॥*

ಮಾನವೋತ್ತರಮ್ ॥ ಮನುರ್ಬಾರ್ಹಸ್ಪತ್ಯಗ್ನಿಃ ॥

೫೪.೨) **ಹೋವಾಇ । ನಿತ್ವಾಮಗ್ನೇಮನುರ್ದಧೇ । ಹೋವಾಇ ॥ ಜ್ಯೋತಿರ್ಜನಾಯಶಶ್ವತೇ । ದಾಇದೇऽ೧ಥಕ । ಣ್ವಾಋತಜಾऽಃ೧ । ತಊऽ೨ಕ್ಷಾऽ೨೩೪ಇತಾಃ ॥ ಯನ್ನಾಮಾऽ೨೩ಸ್ಯಾऽಃ ॥ ತಾऽ೨ಇಕೃऽ೨೩೪ಔಹೋವಾ ॥ ಷ್ಟಾऽ೨೩೪ಯಾಃ ॥**

*ದೀ - ೮ । ಪ - ೧೦ । ಮಾ - ೧೦ । ಣಾ । ೨೩ ॥ ೯೩ ॥*

**ಪಞ್ಚಮಃ ಖಣ್ಡಃ ॥ ೫ ॥ ಪಂಚಮೀ ದಶತಿಃ ॥ ೫ ॥**

ಹೇ **ಅಗ್ನೇ! ಜ್ಯೋತಿಃ** ಪ್ರಕಾಶರೂಪಂ **ಶಶ್ವತೇ** ಬಹುವಿಧಾಯ ಯಜಮಾನಾಯ **ಮನುಃ** ಪ್ರಜಾಪತಿಃ **ನಿದಧೇ** ದೇವಯಜನ ದೇಶೇ ಸ್ಥಾಪಿತವಾನ್ । ಹೇ **ಅಗ್ನೇ!** ತ್ವಮ್ **ಋತಜಾತಃ** ಋತೇನ ಯಜ್ಞೇನ ನಿಮಿತ್ತಭೂತೇನೋತ್ಪನ್ನಃ ಉಕ್ಷಿತಃ ಹವಿರ್ಭಿಸ್ತರ್ಪಿತಃ ಸನ್ **ಕಣ್ವೇ** ಏತನ್ನಾಮಕೇ ಮಹರ್ಷೌ ಮಯಿ **ದೀದೇಥ** ದೀಪ್ತವಾನಸಿ । **ಯಮ್** ಅಗ್ನಿಂ **ಕೃಷ್ಟಯಃ** ಮನುಷ್ಯಾಃ **ನಮಸ್ಯನ್ತಿ** ನಮಸ್ಕುರ್ವನ್ತಿ ಸತ್ವಮಿತಿ ಪೂರ್ವತ್ರಾನ್ವಯಃ ॥

ಸ್ಫುರದ್ರೂಪೀ ಸಂತಾನವನ್ನಪೇಕ್ಷಿಸುವವರು ಈ ಸಾಮ ಸಹಿತ ಸಾ. ವಿ. ಬ್ರಾ. ೨.೮.೧, ೨ರಲ್ಲಿ ಉಕ್ತವಾಗಿರುವ ಅನ್ಯಸಾಮಗಳನ್ನಾಗಲೀ ಅಥವಾ ಒಂದೇ ಸಾಮವನ್ನಾಗಲೀ ವಿಧಿ ಪೂರ್ವಕವಾಗಿ ಗಾನಮಾಡಬೇಕು.

**ಅಗ್ನೇ** - ಪ್ರಕಾಶಸ್ವರೂಪನಾದ ಪರಮಾತ್ಮನೇ, **ಮನುಃ** - ಮನನಶೀಲ ಮನುಷ್ಯ, ಮನು ಪ್ರಜಾಪತಿ, **ಶಶ್ವತೇ ಜನಾಯ** - ಅನೇಕ ಯಜಮಾನರಿಗೆ, ಅಮರರಿಗೆ ಪ್ರಾಣಿ ಮಾತ್ರಕ್ಕೆ ಪ್ರಾಚೀನ ಅರ್ವಾಚೀನ ಭವಿಷ್ಯತ್ತಿನ ಜನರೆಲ್ಲರಿಗೂ, ಸನಾತನ ಪುರುಷನಿಗಾಗಿ, **ಜ್ಯೋತಿಃ** - ಪ್ರಕಾಶಸ್ವರೂಪ, **ನಿದಧೇ** - ಸ್ಥಾಪಿಸಿರುವನು, ಸತತವಾಗಿ ಧ್ಯಾನ ಧಾರಣೆ ನಿದಿಧ್ಯಾಸನ ಮಾಡುವೆ, ಪ್ರಕಾಶಿಸುವೆ, **ಕಣ್ವೇ** - ಕಣ್ವಋಷಿಃ, ಜ್ಞಾನವಂತ, ಮೇಧಾವಿ,

**ದೀದೇಥ** - ದೀಪ್ತಿಗೊಳಿಸಿದ್ದಾರೆ, ಪ್ರಕಾಶಿಸಿದ್ದಾರೆ, ಪ್ರಜ್ವಲಿಸುತ್ತಿದ್ದಾರೆ, **ಋತ ಜಾತಃ** - ಯಜ್ಞಕ್ಕಾಗಿ ಉತ್ಪನ್ನವಾಗಿರುವ, ವೇದಪ್ರಸಿದ್ಧವಾದ, ಹೆಚ್ಚು ಪ್ರಜ್ವಲಿಸುತ್ತಿರುವ, **ಉಕ್ಷಿತಃ** - ಮಹತ್ವ ಉಳ್ಳವ, ಹವಿಸ್ಸಿನಿಂದ ತೃಪ್ತವಾಗಿರುವ, **ಯಮ್** - ಇಂತಹ, **ಕೃಷ್ಟಯಃ** - ಜನ ಸಾಮಾನ್ಯರು, **ನಮಸ್ಯನ್ತಿ** - ನಮಸ್ಕರಿಸುತ್ತಾರೆ, ಸತ್ಕರಿಸುತ್ತಾರೆ.

ಅಗ್ನಿಭಗವಂತನೇ ನಾನಾವಿಧವಾದ ಬೆಳಕನ್ನೂ ಶಕ್ತಿಯನ್ನೂ ಪ್ರಜೆಗಳಿಗೆ ಕೊಡಲೂ ವಿವಿಧ ಯಜ್ಞಗಳನ್ನು ನೆರವೇರಿಸುವ ಅನೇಕ ಯಜ್ಞಕರ್ತೃಗಳಿಗಾಗಿಯೂ ಮನು ಪ್ರಜಾಪತಿಯು ಜ್ಯೋತಿಸ್ವರೂಪನಾದ ನಿನ್ನನ್ನು ಸೃಷ್ಟಿಸಿ ಯಜ್ಞವೇದಿಯಲ್ಲಿ ಸ್ಥಾಪಿಸಿದ್ದಾನೆ. ಮೇಧಾವಿಗಳಾದ ಕಣ್ವಾದಿ ಮಹರ್ಷಿಗಳು ಹವಿಸ್ಸಿನಿಂದ ತೃಪ್ತಿಗೊಳಿಸಿ ದೀಪ್ತಿಗೊಳಿಸಿರುವ ನಿನ್ನನ್ನು ಮನುಷ್ಯರು ಭಕ್ತಿಯಿಂದ ನಮಸ್ಕರಿಸಿ ಸತ್ಕರಿಸುತ್ತಾರೆ.

ಭಗವಂತನ ಸತ್ಯಸ್ವರೂಪದ ಜ್ಞಾನವನ್ನು ವೇದಶ್ರವಣಮಾಡಿ ನಮಸ್ಕರಿಸಿ ಕೆಲವರು ತೃಪ್ತರಾಗುತ್ತಾರೆ. ಮನನಶೀಲರು ಉಪಾಸನೆ ಮಾಡುತ್ತಾ ಧ್ಯಾನಧಾರಣಾದಿ ಸಾಧನಗಳಲ್ಲಿ ತೊಡಗುತ್ತಾರೆ. ಮೇಧಾವಿಗಳು ಜ್ಞಾನದಿಂದ ತಮ್ಮಲ್ಲೇ ಸಾಕ್ಷಾತ್ಕರಿಸಿಕೊಂಡು ದಿವ್ಯಜ್ಯೋತಿ ಯಲ್ಲಿ ಒಂದಾಗಿ ಪ್ರಕಾಶಿಸುತ್ತಿರುತ್ತಾರೆ.

*ಪ್ರಜ್ಞಾವಂತಂ ಮಾನವನೆಂದು ನಿನ್ನ ನರಿವನಲ್ತೆ*
*ಅನಾದಿಕಾಲಪರಂಪರೆಯಿಂದಂ ನರರ ಬೆಳಕು ನೀನೇ!*
*ನಿನ್ನ ಕಾಂತಿ ಕಣ್ವಾದಿಮುನಿಗಳಿಗೆ ಋತದ ಫಲಮೆನಿಕ್ಕುಂ*
*ಯಜ್ಞದಲ್ಲಿ ನಿನ್ನಾವಿರ್ಭಾವಂ, ಸಕಾಲವಂದ್ಯ ನೀನಯ್!*

## ಋಕ್ - ೫೫

ವಸಿಷ್ಠೋ ಮೈತ್ರಾವರುಣಿಃ ॥ ಬೃಹತ್ಯಗ್ನಿಃ ॥

**ದೇವೋ ವೋ ದ್ರವಿಣೋದಾಃ ಪೂರ್ಣಾಂ ವಿವಷ್ಟ್ವಾಸಿಚಮ್ ।**

**ಉದ್ವಾ ಸಿಞ್ಚಧ್ವಮುಪ ವಾ ಪೃಣಧ್ವಮಾದಿದ್ವೋ ದೇವ ಓಹತೇ ॥**

೩ ೨ ೩ ೨ ೩ ೨ ೩ ೨ ೩
ದೇವಃ - ವಃ - ದ್ರವಿಣೋದಾಃ - ದ್ರವಿಣಃ - ದಾಃ । ಪೂರ್ಣಾಮ್ - ವಿವಷ್ಟು -

೧ ೨ ೩ ೧ ೨ರ ೩ ೧ ೨ ೧ ೨ರ ೩
ಆಸಿಚಂ - ಆ - ಸಿಚಮ್ ॥ ಉತ್ - ವಾ - ಸಿಂಚಧ್ವಮ್ - ಉಪ - ವಾ - ಪೃಣುಧ್ವಮ್ ।

೨ ೩ ೨ ೩
ಆತ್ - ಇತ್ - ವಃ - ದೇವಃ - ಓಹತೇ ॥ *೧.೫೫* ॥

ದ್ರವಿಣಮ್ ॥ ಅಗ್ನಿರ್ಬೃಹತ್ಯಗ್ನಿಃ ॥

೫ರ ೪ ೨ ೪ ೫ರ ೨ರ ೧ರ ೨ರ ೧ ೨
೫೫.೧. ದೇವೋಽಽವೋಽಽದ್ರವಿಣೋದಾಃ ॥ ಪೂರ್ಣಾಂವಿವಷ್ಟ್ವಾಸಿಚ

೧ ೨ ೧ ೨ರ ೧ ೫
ಮ್ । ಊದ್ವಾಽ೧ಸಿಞ್ಚಾಽ೨ । ಧ್ವಮುಪವಾಪೃಣಧ್ವಮ್ ॥ ಆದಿ

೧ರ ೨ರ ೧ ೨ ೧
ದ್ವೋದೇಽ೨ ॥ ವಓಹತೇ । ಇಡಾಽ೨೩ಭಾಽ೩೪೩ । ಓಽ೨೩೪

೫ಇ ॥ ಡಾ ॥ *ದೀ - ೮ । ಪ - ೯ । ಮಾ - ೫ । ಢು । ೨೪ ॥ ೯೪ ॥*

**ದ್ರವಿಣೋದಾಃ** ಧನಾನಾಂ ದಾತಾ **ದೇವಃ ಅಗ್ನಿಃ** ವಃ ಯುಷ್ಮದೀಯಾಂ **ಪೂರ್ಣಾಮ್** ಹವಿಷಾ **ಆಸಿಚಮ್** ಆಸಿಕ್ತಾಂ ಚ ಸ್ರುಚಂ **ವಿವಷ್ಟು** ಕಾಮಯತಾಮ್ । ಅತಃ **ಉತ್ಸಿಞ್ಚಧ್ವಂ ವಾ** ಸೋಮೇನ ಪಾತ್ರಮ್ । **ಉಪಪೃಣಧ್ವಂ ವಾ** ಸೋಮಂ ವಾ ಶಬ್ದೌ ಸಮುಚ್ಚಯಾರ್ಥೌ । ಧ್ರುವಗ್ರಹೇಣ ಹೋತೃಚಮಸಂ ಪೂರಯತಚ ಅಗ್ನಯೇ ಸೋಮಂ ಪ್ರಯಚ್ಛತ ಚೇತ್ಯರ್ಥಃ **ಆದಿದ್** ಅನನ್ತರಮೇವ **ದೇವಃ ಅಗ್ನಿಃ ವಃ** ಯುಷ್ಮಾನ್ **ಓಹತೆ** ವಹತಿ । **ವಿವಷ್ಟು ವಿವಷ್ಟಿ** ಇತಿ ಪಾಠೌ ॥

**ದ್ರವಿಣೋದಾಃ** - ಧನ ಮತ್ತು ಬಲಕೊಡುವ, **ದೇವಃ** - ಅಗ್ನಿಯು, **ಪೂರ್ಣಮ್** - ತುಂಬಿದ ಹವಿಸ್ಸನ್ನು, **ವಿವಷ್ಟು** - ಅಪೇಕ್ಷಿಸುವನು, **ಉತ್ಸಿಂಚಧ್ವಂ ವಾ** - ಸೋಮದಿಂದ ಪಾತ್ರೆಯನ್ನು ಸಿಂಪಡಿಸಿ, **ಉಪಪೃಣಧ್ವಂ** - ಹೋತೃವು ಧ್ರುವಗ್ರಹ ಪಾತ್ರೆಯಿಂದ

ಚಮಸಪಾತ್ರೆಯನ್ನು ಪೂರ್ಣವಾಗುವಂತೆ ತುಂಬಿ ಸೋಮವನ್ನು ವಿಧಿಯಂತೆ ಮನ್ತ್ರ ಪೂರ್ವಕವಾಗಿ ಅರ್ಪಿಸಲಿ, **ಆದಿತ್** - ಅನಂತರ, ವಃ - ನಿಮ್ಮ ಆಹುತಿಯನ್ನು, **ಓಹತಿ** - ಸ್ವೀಕರಿಸಿ ತಲುಪಿಸುತ್ತಾನೆ, ಆಶ್ರಯಕೊಟ್ಟು ಉನ್ನತಿಯ ಮಾರ್ಗದಲ್ಲಿ ಒಯ್ಯುತ್ತಾನೆ, ಕಾಮನೆಗಳನ್ನು ಈಡೇರಿಸುತ್ತಾನೆ.

ಧನವನ್ನೂ ಬಲವನ್ನೂ ಅನುಗ್ರಹಿಸುವ ದೇವನಾದ ಅಗ್ನಿಯು ಅಪೇಕ್ಷಿಸುವಂತೆ ಸೋಮರಸದಿಂದ ಸ್ರುಚವನ್ನು ಪೂರ್ಣವಾಗಿ ತುಂಬಿಸಿ ವಿಧಿಯಂತೆ ಮನ್ತ್ರಪೂರ್ವಕವಾಗಿ ಅಗ್ನಿಗೆ ಅರ್ಪಿಸುತ್ತಿದ್ದಂತೆಯೇ ಆಹುತಿಯನ್ನು ಸ್ವೀಕರಿಸಿ ಹವಿರ್ದಾತೃವಿಗೆ ಆಶ್ರಯಕೊಟ್ಟು ಉನ್ನತಮಾರ್ಗದಲ್ಲಿ ಜೀವನವನ್ನು ನಡೆಸುತ್ತಾನೆ.

*ಯಜ್ಞದೇವದಿವ್ಯಾಗ್ನಿ ಸಕಲಸಂಪತ್ಪ್ರದಾತನಲ್ತೆ*
*ಹೋತೃಗಳೇ! ಸ್ರುಕ್ಕಂ ತುಂಬುತೆ ನೀವ್ ನೀಡಿರೊಲ್ದು ಹವ್ಯಂ ।*
*ನಿಮ್ಮಾಹುತಿಘೃತಸಂತೃಪ್ತನಿವಂ ವೀತಿಹೋತ್ರದೇವಂ*
*ಒಲಿದು ನಲಿದು ನಿಮ್ಮಂ ಸನ್ಮಾರ್ಗಕೆ ಕೊಂಡುಪೋಪನೆಂದುಂ ॥*

## ಋಕ್ - ೫೬

ಕಣ್ವೋ ಘೌರಃ ॥ ಬೃಹತೀ ಬ್ರಹ್ಮಣಸ್ಪತಿಃ ॥

೨ ೩ ೧ ೨ ೩ ೨ ೩ ೨ ೩ ೨ಂ ೩ ೧ ೨
**ಪ್ರೈತು ಬ್ರಹ್ಮಣಸ್ಪತಿಃ ಪ್ರ ದೇವ್ಯೇತು ಸೂನೃತಾ ।**

೧ ೨ ೩ ೧ ೨ಂ ೩ ೧ ೨ ೩ ೨ ೩ ೧ ೨
**ಅಚ್ಛಾ ವೀರಂ ನರ್ಯಂ ಪಙ್ಕ್ತಿರಾಧಸಂ ದೇವಾ ಯಜ್ಞಂ ನಯನ್ತು ನಃ ॥**

೨ ೩ ೧ ೨ಂ ೧ ೨ಂ ೩ ೨ ೩ ೧ ೨ ೩ ೧ ೨ಂ
ಪ್ರ - ಏತು - ಬ್ರಹ್ಮಣಃ - ಪತಿಃ । ಪ್ರ - ದೇವೀ - ಏತು - ಸೂನೃತಾ - ಸು - ನೃತಾ ॥

೧ ೨ಂ ೩ ೨ ೧ ೨ಂ ೩ ೧ ೨ ೩ ೨ ೩
ಅಚ್ಛ - ವೀರಮ್ - ನರ್ಯಮ್ - ಪಙ್ಕ್ತಿರಾಧಸಮ್ - ಪಙ್ಕ್ತಿ - ರಾಧಸಮ್ ।

೨ ೩ ೨ ೩
ದೇವಾಃ - ಯಜ್ಞಮ್ - ನಯನ್ತು - ನಃ ॥ *೨.೫೬* ॥

ಬಾರ್ಹಸ್ಪತ್ಯಮ್ ॥ ಬೃಹಸ್ಪತಿರ್ಬೃಹಸ್ಪತ್ಯಗ್ನಿಃ - ಬ್ರಹ್ಮಣಸ್ಪತಿರ್ವಾ ॥

೫೬.೧. ಪ್ರೈತೂ೨ಬ್ರಹ್ಮಣಸ್ಪತೀಃ ॥ ಪ್ರದಾಇವಿಯೇ । ತುಸೂನೃತಾ೨ । ಅಚ್ಛಾ೨ವಾ೨೩೪ಇರಾಮ್ । ನರ್ಯಮ್ಪ । ಙ್ತಿರಾಧಾ೧ಸಾ೨ ೨೩ಮ್ ॥ ದೇವಾ೨ಯಾ೨೩೪ಜ್ಞಾಮ್ ॥ ನಾ೨ಯಾ೨೩೪ ಔಹೋವಾ ॥ ತೂ೨೩೪ನಾಃ ॥

ದೀ - ೪ । ಪ - ೯ । ಮಾ - ೮ । ಧೈ । ೨೫ ॥ ೬೫ ॥

**ಬ್ರಹ್ಮಣಸ್ಪತಿಃ** ದೇವಃ **ಪ್ರೈತು** ಅಸ್ಮಾನ್ ಪ್ರಾಪ್ನೋತು **ಸೂನೃತಾ** ದೇವೀ ಪ್ರಿಯಸತ್ಯ ಭೂತಾ ವಾಗ್ದೇವತಾ ಪ್ರೈತು ಅಸ್ಮಾನ್ ಪ್ರಾಪ್ನೋತು । **ದೇವಾಃ** ಬ್ರಹ್ಮಣಸ್ಪತ್ಯಾದಯೋ ದೇವತಾಃ **ವೀರಂ** ಶತ್ರುಂ ನಿಃಶೇಷೇಣ **ದೂರೇ** ಪ್ರೇರಯನ್ತು । ತಂ **ನರ್ಯಂ** ಮನುಷ್ಯೇಭ್ಯೋಹಿತಮ್ । **ಪಙ್ಕ್ತಿರಾಧಸಂ** ಬ್ರಾಹ್ಮಣೋಕ್ತ ಹವಿಷಾ ಪಙ್ಕ್ತ್ಯಾದಿಭಿಃ ಸಮೃದ್ಧಂ ಯಜ್ಞಂ ಪ್ರತಿ ನ ಅಸ್ಮಾನ್ **ಅಚ್ಛ** ಆಭಿಮುಖ್ಯೇನ **ನಯನ್ತು** ಪ್ರಾಪಯನ್ತು ॥

ದ್ವಿನಾರಾಶಂಸಂ ಪ್ರಾತಃ ಸವನಮ್ । ದ್ವಿನಾರಾಶಂಸಂ ಮಾಧ್ಯನ್ದಿನ ಸವನಮ್ । ಸಕೃನ್ನಾರಾಶಂಸಂ ತೃತೀಯಂ ಸವನಂ । ಏಷಾ ನಾರಾಶಂಸ ಪಙ್ಕ್ತಿಃ ॥ ಪಶುರೂಪವಸ್ಥಃ । ತ್ರೀಣಿ ಸವನಾನಿ ಪಶುರನುಬನ್ಧ್ಯಃ ಏಷಾ ಸವನ ಪಙ್ಕ್ತಿಃ ॥ ಏತಾಭಿಃ ಪಙ್ಕ್ತಿಭಿಃ ಯಃ ಸಾಧ್ಯತೇ ತಂ ಪಙ್ಕ್ತಿ ರಾಧಸಮ್ ಇತಿ ಭಾವಃ ॥

**ಬ್ರಹ್ಮಣಸ್ಪತಿಃ** - ಪರಮಾತ್ಮ, ಜ್ಞಾನದ ಒಡೆಯ, ಬ್ರಹ್ಮಾಂಡದ ಸ್ವಾಮಿ, **ಸೂನೃತಾದೇವೀ** - ಸತ್ಯವಾದಿಯೂ ಪ್ರಿಯಭಾಷಿಣಿಯೂ ಆದ ವಾಗ್ದೇವಿ, ದಿವ್ಯವಾದ ಸ್ತುತಿ, ವೇದದ ಸತ್ಯವಾಣಿ, **ಪ್ರೈತು** - ಪ್ರತ್ಯಕ್ಷವಾಗಲಿ, ಪ್ರೇರಿಸಲಿ ಒದಗಿಸಲಿ, **ಪ್ರ-ಏತು** - ನಮ್ಮ ಹತ್ತಿರ ಬರಲಿ, ಚೆನ್ನಾಗಿ ಪ್ರಕಟವಾಗಲಿ, **ದೇವಾಃ** ದೇವತೆಗಳು, ಜ್ಞಾನಿಗಳು, **ವೀರಮ್** - ಪುತ್ರನನ್ನು, ಪ್ರಗತಿಪರನನ್ನು, ಶತ್ರುಗಳನ್ನು, **ನರ್ಯಂ** - **ಪಙ್ಕ್ತಿರಾಧಸಂ**

- ಮಾನವ ಸಮುದಾಯಕ್ಕೆ ಹಿತವಾದ, ಕ್ರಮಬದ್ಧವಾದ, ಪಂಚೇಂದ್ರಿಯಗಳನ್ನು ಆತ್ಮ ಸಮರ್ಪಣೆಯಲ್ಲಿ ತೊಡಗಿಸಿ ವಿಧಿಪೂರ್ವಕವಾಗಿ ಕೊಟ್ಟ ಹವಿಸ್ಸನ್ನು ಸ್ವೀಕರಿಸಿ, **ಯಜ್ಞಂ** - ಯಜ್ಞವನ್ನು ವ್ಯವಹಾರವನ್ನು, **ಅಚ್ಛಾ** - ಒಳ್ಳೆಯ ಸಮರ್ಪಕವಾದ ರೀತಿಯಲ್ಲಿ ದೇವತೆಗಳಿಗಭಿಮುಖವಾಗಿ, **ನಯನ್ತು** - ಒಯ್ಯಲಿ.

ಪರಮಾತ್ಮನು ನಮಗೆ ಪ್ರತ್ಯಕ್ಷವಾಗಲಿ. ಸತ್ಯವಾದಿಯೂ ಪ್ರಿಯಭಾಷಿಣಿಯೂ ಆದ ವಾಗ್ದೇವಿಯು ಚೆನ್ನಾಗಿ ಪ್ರಕಟವಾಗಲಿ. ದೇವತೆಗಳು ನಮ್ಮ ಶತ್ರುಗಳನ್ನು ದೂರೀಕರಿಸಿ ಋತ್ವಿಜರು ಯಜ್ಞದಲ್ಲಿ ವಿಧಿಪೂರ್ವಕವಾಗಿ ಹಿತವಾಗಿ ಅರ್ಪಿಸುವ ಹವಿಸ್ಸನ್ನು ಸ್ವೀಕರಿಸಿ ಯಜ್ಞವನ್ನು ಸಮೃದ್ಧಗೊಳಿಸಿ ನಮಗೆ ಅಭಿಮುಖವಾಗಲಿ.

ಜ್ಞಾನದ ಒಡೆಯನಾದ ಪರಮಾತ್ಮನು ನಮ್ಮ ಸಾಧನಾರೂಪವಾದ ಅಧ್ಯಾತ್ಮ ಯಜ್ಞದಲ್ಲಿ ಜ್ಞಾನೇಂದ್ರಿಯಗಳನ್ನು ಅರ್ಪಣಾಪೂರ್ವಕವಾಗಿ ಪಾಲ್ಗೊಳ್ಳುವಂತೆ ಪ್ರೇರಿಸಲಿ. ಕಾಮಕ್ರೋಧಾದಿ ಶತ್ರುಗಳನ್ನು ದೂರಮಾಡಿ ಮಾನವ ಸಮುದಾಯದ ಹಿತಸಾಧನೆಯಲ್ಲಿ ಕರ್ಮೇಂದ್ರಿಯಗಳನ್ನು ತೊಡಗಿಸಲಿ. ನಮ್ಮ ವಾಕ್ ಸತ್ಯವನ್ನೂ ಪ್ರಿಯವನ್ನೂ ಪ್ರಕಟಿಸುತ್ತಾ ನುಡಿಯುವಂತೆ ಅನುಗ್ರಹಿಸಲಿ. ನಮ್ಮನ್ನು ದೇವಮಾರ್ಗದಲ್ಲಿ ಮುನ್ನಡೆಸಿ ತನ್ನ ದರ್ಶನ ಭಾಗ್ಯವನ್ನು ನೀಡಲಿ.

*ದೇವಾಚಾರ್ಯನು ನಮ್ಮೆಡೆ ಸಾರಲಿ; ದಿವ್ಯವಾಣಿಯಂತೇ*
*ನಮ್ಮನು ಹರಸಲಿ; ನಮ್ಮೀ ಯಜ್ಞಕ್ಕೆ ಬರಲಿ ದೇವತೆಗಳು ।*
*ಮಾನವಕಲ್ಯಾಣಕೆ ನೋಂತವರೆನೆ ಶಕ್ತಿಕೀರ್ತಿಕಾರರು*
*ನಿರ್ಮಲಮಾರ್ಗದೆ ಮನುಜಸಂಘವನು ನಡೆಯಿಸುವಂಥವರು ॥*

## ಋಕ್ - ೫೭

ಕಣ್ವೋಘೌರಃ ॥ ಬೃಹತೀಯೂಪಃ ವಾ ಅಗ್ನಿಃ ॥

೩ ೨ ೩ ೧ ೨ ೩ ೨ ೩ ೧ ೨ ೩ ೧ ೨೦ ೩ ೨
**ಊರ್ಧ್ವ ಊ ಷು ಣ ಊತಯೇ ತಿಷ್ಠಾ ದೇವೋ ನ ಸವಿತಾ ।**

೩ ೧ ೨೦ ೩ ೧ ೨ ೩ ೨ ೩ ೧ ೨ ೩ ೧ ೨ ೩ ೧ ೨
**ಊರ್ಧ್ವೋ ವಾಜಸ್ಯ ಸನಿತಾ ಯದಞ್ಜಿಭಿರ್ವಾಘದ್ಭಿರ್ವಿಹ್ವಯಾಮಹೇ**

೩ ೨ ೩ ೨ ೩ ೧ ೨ ೧ ೨೦ ೩ ೨ ೩ ೨ ೩ ೨
ಊರ್ಧ್ವಃ - ಉ - ಸು - ನಃ - ಊತಯೇ । ತಿಷ್ಠ - ದೇವಃ - ನ - ಸವಿತಾ ॥ ಊರ್ಧ್ವಃ -

೧ ೨೦ ೧ ೨೦ ೩ ೧ ೨ ೩ ೧ ೨ ೩ ೧ ೨ ೩
ವಾಜಸ್ಯ - ಸನಿತಾ - ಯತ್ - ಅಞ್ಜಿಭಿಃ । ವಾಘದ್ಭಿಃ - ವಿಹ್ವಯಾಮಹೇ - ವಿ -

೧ ೨೦
ಹ್ವಯಾಮಹೇ ॥ ೩. ೫೭ ॥

ವೀಙ್ಕಮ್ ॥ ವಸಿಷ್ಠೋಬೃಹತ್ಯಗ್ನಿಃ ಯೂಪೋವಾ ॥

೨೦ ೦ ^ ೧ ೫ ೧ ೦ ೦ ೦
೫೭.೧. ಊರ್ಧ್ವಊಷುಣ೨೩ಊತಾ೨೨೩೪ಯಾಇ ॥ ತಿಷ್ಠಾದೇವೋ

೦ ೦ ೨ ೧ ೨೦ ೧ ೮
ನಸವಿತಾ । ಊರ್ಧ್ವೋವಾ೨೨೩ಜಾ । ಸ್ಯಾಸನಿತಾ । ಯಾದಞ್ಜಿಭೀ

೦ ೧ ೧ ೧೦ ೨
೨ಃ ॥ ವಾಘಾದ್ಭೀ೨ಃ ॥ ವೀವೀ೨ ॥ ಹ್ವಯಾಮಾ೨೨೩ಹಾ೨೩

೧
೪೩ಇ । ಓ೨೨೩೪೫ಇ ॥ ಡಾ ॥

*ದೀ - ೧೦ । ಪ - ೧೦ । ಮಾ - ೭ । ಮೇ । ೨೬ ॥ ೬೬ ॥*

ಹೇ **ಯೂಪ!** ಯದ್ವಾ ಯೂಪಾತ್ಮಕದಾರುನಿಷ್ಠಾಗ್ನೇ ನಃ ಅಸ್ಮಾಕಮ್ **ಊತಯೇ** ರಕ್ಷಣಾಯ **ಊರ್ಧ್ವಃ** ಉನ್ನತಃ **ತಿಷ್ಠಾ** ತಿಷ್ಠ **ಸವಿತಾ ದೇವಃ** ನ ಯಥಾ ಸೂರ್ಯೋ ದಿವ ಉನ್ನತಸ್ತಿಷ್ಠತಿ ತದ್ವತ್ ಊರ್ಧ್ವಃ ಉನ್ನತಃ ಸನ್ **ವಾಜಸ್ಯ** ಅನ್ನಸ್ಯ **ಸನಿತಾ** ದಾತಾ ಭವಿಷ್ಯಸಿ ಯದ್ ಯಸ್ಮಾತ್ ಕಾರಣಾತ್ **ಅಞ್ಜಿಭಿಃ** ಯಜ್ಞೀನ ಯೂಪಮಞ್ಜದ್ಭಿಃ **ವಾಘದ್ಭಿಃ** ಯಜ್ಞಂ ವಹದ್ಭಿಃ ಋತ್ವಿಗ್ಭಿಃ ಸಹ **ವಿಹ್ವಯಾಮಹೇ** ಅನ್ನಸ್ಯ ದಾನಾಯ ತ್ವಾಂ ವಿಶೇಷೇಣಾಹ್ವಯಾಮಃ ತಸ್ಮಾದನ್ನಸ್ಯ ದಾತಾಭವೇತಿ ಪೂರ್ವತ್ರಾನ್ವಯಃ ॥

**ನಃ** - ನಮ್ಮ, **ಊತಯೇ** - ರಕ್ಷಣೆಗಾಗಿ, **ದೇವಃ ಸವಿತಾ ನ** - ಸವಿತೃ, ಸೂರ್ಯ ದೇವತೆಯಂತೆ, **ಊರ್ಧ್ವಃ** - ಎತ್ತರದಲ್ಲಿ, ಉತ್ಕೃಷ್ಟಭಾವದಿಂದ ಪ್ರದೀಪ್ತವಾಗಿ, **ಸುತಿಷ್ಠಾ** -

ಸ್ಥಿರವಾಗಿ, ಅಲ್ಲಾಡದೆ ಇರುವ, **ವಾಜಸ್ಯ** - ಅನ್ನದಬಲದ, ಆತ್ಮಬಲದ, **ಸನಿತಾ** - ದಾನ ಶೀಲರಾಗಿ, **ಯತ್** - ಏಕೆಂದರೆ, **ಅಞ್ಜಿಭಿಃ** - ಜ್ಞಾನಿಗಳೊಂದಿಗೆ, ಘೃತಾದಿಗಳಿಂದ ಕೂಡಿದ ಯೂಪಸ್ತಂಭ, **ವಾಘದ್ಭಿಃ** - ಮೇಧಾವೀ ಉಪಾಸಕರಾದ ಹೋತೃ ಆದಿ ಋತ್ವಿಜರ ಮೂಲಕ, ಯಜ್ಞ ಸಮಾಪ್ತಿ ಮಾಡುತ್ತಿರುವ ಋತ್ವಿಜರೊಂದಿಗೆ, **ವಿಹ್ವಯಾಮಹೇ** - ಆಹ್ವಾನಿಸುತ್ತೇವೆ.

ಅಗ್ನಿದೇವನೇ! ಸೂರ್ಯನಂತೆ ಪ್ರದೀಪ್ತನಾಗಿ ಬಹು ಎತ್ತರದ ಉಚ್ಚ ಭಾವದಲ್ಲಿ ಸುಸ್ಥಿರವಾಗಿದ್ದುಕೊಂಡು ನಮಗೆ ಅನ್ನವನ್ನೂ ಆತ್ಮಬಲವನ್ನೂ ಅನುಗ್ರಹಿಸಿ ರಕ್ಷಿಸುತ್ತಿರ ಬೇಕೆಂದು ಬಹುಮೇಧಾವಿಗಳಾದ ಹೋತೃ ಆದಿ ಯಜ್ಞದಲ್ಲಿ ಭಾಗವಹಿಸುವ ಋತ್ವಿಕ್ ಉಪಾಸಕರ ಮೂಲಕ ನಿನ್ನನ್ನು ಪೂಜಿಸಿ ಆಜ್ಯಾದಿ ಆಹುತಿಗಳನ್ನು ಸಮರ್ಪಿಸಬೇಕೆಂದು ಆಹ್ವಾನಿಸುತ್ತೇವೆ.

*ಪಾವಕನೇ! ನೀನುತ್ತಮಾಸನದೆ ಕುಳ್ಳಿರಿಲ್ಲಿ ನಲಿದು*
*ಭಾನುವಿನಂದದಿ ಬೆಳಗಿ ನಮಗೆ ದಿವ್ಯಾನ್ನದಾನಿಯಾಗಯ್ ।*
*ಸಕಲಸೃಷ್ಟಿಸಂಕಲ್ಪ ನೀನು! ವೇದೋಕ್ತಿವಂದ್ಯನಲ್ತೆ*
*ಆವಾಹಿಸಲೆಂದಿದೊ ನುತಿಸುವೆವಯ್ ಕರುಣಿಸಿಲ್ಲಿ ಬಂದು ॥*

## ಋಕ್ - ೫೮

ಸೌಭರಿಃ ಕಾಣ್ವಃ ॥ ಬೃಹತ್ಯಗ್ನಿಃ ॥

೨ು ೩ ೧ ೨ರ ೩ ೨ ೩ ೧ ೨ ೩ ೧ ೨
**ಪ್ರ ಯೋ ರಾಯೇ ನಿನೀಷತಿ ಮರ್ತ್ಯೋ ಯಸ್ತೇ ವಸೋ ದಾಶತ್ ।**

೨ ೩ ೧ ೨ ೩ ೨ ೩ ೧ ೨ ೩ ೧ ೨
**ಸ ವೀರನ್ಧತ್ತೇ ಅಗ್ನ ಉಕ್ಥಶಂಸಿನಂ ತ್ಮನಾ ಸಹಸ್ರಪೋಷಿಣಮ್ ॥**

೨ ೩ ೨ ೧ ೨ರ ೧ ೨ರ ೩ ೧ ೨ರ
ಪ್ರ – ಯಃ – ರಾಯೇ – ನಿನೀಷತಿ । ಮರ್ತಃ – ಯಃ – ತೇ – ವಸೋ – ದಾಶತ್ ॥

೩ ೨ ೩ ೧ ೨ ೩ ೧ ೨
ಸಃ - ವೀರಮ್ - ಧತ್ತೇ - ಅಗ್ನೇ - ಉಕ್ಥಶಙ್‌ಸಿನಮ್ - ಉಕ್ಥ - ಶಙ್‌ಸಿನಮ್ ।

೧ ೨೦ ೧ ೨ ೩ ೧ ೨
ತ್ಮನಾ - ಸಹಸ್ರಪೋಷಿಣಮ್ - ಸಹಸ್ರ - ಪೋಷಿಣಮ್ ॥ ೪.೫೮ ॥

ವಿಷ್ವದ್ರ್ಧಸಸ್ಸಾಮ ॥ ವಿಷ್ವದ್ರ್ಧೀ ಬೃಹತ್ಯಗ್ನಿಃ ॥

೪ ೦ ೦ ೦ ೪ ೧ ೦ ೨ ೧೦
೫೮.೧. ಪ್ರಯೋರಾಯಾ೭೫ಇನಿನೀಷತಾಇ ॥ ಮರ್ತೋಯಸ್ತೇವಸೋ

೦ ೦ ೧ ೧ ೨ ೧
ದಾಶತ್ । ಸವೀರಾ೭೨೩ನ್ಧಾ । ತಾಅಗ್ನಉ । ಕ್ಥಶಙ್‌ಸಿನಮ್ ॥

೦ ೨ ೧೦ ೨ ೧
ತ್ಮನಾಸಾ೭೨೩ಹಾ ॥ ಸ್ರಪೋಷಾ೭೨೩ಇಣಾ೭೩೪೩ಮ್ । ಓ೭೨೩

೪೫ಇ ॥ ಡಾ ॥ ದೀ - ೯ । ಪ - ೯ । ಮಾ - ೯ । ಧೋ । ೨೭ ॥ ೯೭ ॥

ಹೇ **ವಸೋ** ವಾಸಕಾಗ್ನೇ! ತ್ವಾಂ **ಯೇ** ತವಸ್ತೋತಾ**ರಾಯೇ** ಧನಾರ್ಥಂ **ಪ್ರನಿನೀಷತಿ** ಪ್ರಣೇತುಮಿಚ್ಛತಿ **ಯಃ ಮರ್ತಃ** ಮನುಷ್ಯಃ **ತೇ** ತುಭ್ಯಂ **ದಾಶತ್** ಹವೀಂಷಿ ಪ್ರಯಚ್ಛತಿ । **ಸಃ** ಮನುಷ್ಯಃ **ಉಕ್ಥಶಂಸಿನಂ** ಉಕ್ಥಾನಾಂ ಶಸ್ತ್ರಾಣಾಂ ಶಂಸಿತಾರಮ್ **ತ್ಮನಾ** ಆತ್ಮನೈವ **ಸಹಸ್ರಪೋಷಿಣಂ** ಬಹುಧನಂ **ವೀರಂ** ಪುತ್ರಂ **ಧತ್ತೇ** ಧಾರಯತಿ । ಪ್ರಯೋರಾಯೇನಿನೀಷತಿ ಪ್ರಿಯಂ ರಾಯೇ ನಿನೀಷಸ್ಯ ಇತಿ ಪಾಠೌ ॥

**ವಸೋ** - ಎಲ್ಲರಿಗೂ ಆಶ್ರಯವಾಗಿರುವ, ಎಲ್ಲರಲ್ಲೂ ವಾಸಿಸುವ, ವ್ಯಾಪಕ ನಾದ, ಅಷ್ಟವಸುಗಳಲ್ಲೊಬ್ಬರಾದ, **ಅಗ್ನೇ** - ಪ್ರಕಾಶಸ್ವರೂಪನಾದ ಅಗ್ನಿಯೇ, **ಯಃ** - ಯಾವ, **ಮರ್ತಃ** - ಮನುಷ್ಯನು, **ತ್ಮನಾ** - ತನ್ನ ಮೂಲಕ, **ರಾಯೇ** - ವಿದ್ಯಾದಿ ಐಶ್ವರ್ಯಕ್ಕಾಗಿ, **ಪ್ರ-ನಿನೀಷತಿ** - ತನ್ನನ್ನೇ ತೊಡಗಿಸಿಕೊಳ್ಳುವವನು, ಪ್ರಸನ್ನಗೊಳಿಸುವವ ನು, **ದಾಶತ್** - ತಮ್ಮನ್ನು ಅರ್ಪಿಸಿಕೊಳ್ಳುತ್ತಾರೆ, ಹವಿಸ್ಸನ್ನರ್ಪಿಸುತ್ತಾರೆ, **ಸಹಸ್ರ ಪೋಷಿ ಣಮ್** - ಸರ್ವೋಪಕಾರಕ, ಬಹುಜನರಪೋಷಕ, **ಉಕ್ಥ ಶಂಸಿನಮ್** - ಸಾಮಗಾನ ಮಾಡುವವನನ್ನು,

ವೇದಪಾರಿಯನ್ನು, **ವೀರಮ್** - ವೀರಪುತ್ರರನ್ನು, ಪುರುಷಾರ್ಥ ಗಳನ್ನು, **ಧತ್ತೇ** - ಆಗುತ್ತಾನೆ, ಪಡೆಯುತ್ತಾನೆ.

ಎಲ್ಲರಿಗೂ ಆಶ್ರಯದಾತನಾದ ಅಗ್ನಿಯೇ ವಿದ್ಯೆ ಆದಿ ಧನಕ್ಕೆ, ತನ್ನನ್ನೇ ತೊಡಗಿಸಿಕೊಳ್ಳುವವನು, ತನ್ನನ್ನೇ ನಿನಗೆ ಸಮರ್ಪಿಸಿಕೊಂಡರೆ ಅಥವಾ ನಿನಗೆ ವಿಧಿಪೂರ್ವಕವಾಗಿ ಹವಿಸ್ಸನ್ನರ್ಪಿಸಿದರೆ ಬಹುಜನರನ್ನು ಪೋಷಿಸುವವನಾಗಿ ಪೌರುಷಯುಕ್ತ ಸಂತಾನವನ್ನು ಪಡೆಯುತ್ತಾನೆ.

*ಸರ್ವಾಧಾರನೆ! ಜಾತವೇದನೇ! ಸಿರಿಯ ಬೇಡಿ ನರರು*
*ನಿನ್ನುಪಾಸಕರು ಸಾಧಕರಿದೊ ಹವಿಯಿತ್ತು ಭಜಿಸುತಿಹರು ।*
*ಕರುಣಿಸಗ್ನಿ! ಆ ಭಕ್ತರಿಗದರಿಂ ವೀರಪುತ್ರನುದಿಸಿ*
*ಸಮಸ್ತಜನರಿಗೆ ಪೋಷಣೆಯಪ್ಪುದು ಪುಣ್ಯಫಲವು ಲಭಿಸಿ ॥*

## ಋಕ್ - ೫೯

ಕಣ್ವೋ ಘೌರಃ ॥ ಬೃಹತ್ಯಗ್ನಿಃ ॥

**ಪ್ರ ವೋ ಯಹ್ವಂ ಪುರೂಣಾಂ ವಿಶಾಂ ದೇವಯತೀನಾಮ್ ।**

**ಅಗ್ನಿಜ್ ಸೂಕ್ತೇಭಿರ್ವಚೋಭಿರ್ವೃಣೀಮಹೇ ಯಜ್ ಸಮಿದನ್ಯ ಇನ್ಧತೇ ॥**

**ಪ್ರ - ವಃ - ಯಹ್ವಮ್ - ಪುರೂಣಾಮ್ - ವಿಶಾಮ್ - ದೇವಯತೀನಾಮ್ ॥**

**ಅಗ್ನಿಮ್ - ಸೂಕ್ತೇಭಿಃ - ಸು - ಉಕ್ತೇಭಿಃ - ವಚೋಭಿಃ - ವೃಣೀಮಹೇ । ಯಮ್ -**

**ಸಮ್ - ಇತ್ - ಅನ್ಯೇ - ಅನ್ - ಯೇ - ಇನ್ಧತೇ** ॥*೫.೫೯* ॥

ಐತವಾಧ್ಯಮ್ ॥ ಐತವದ್ಧಿರ್ಬೃಹತ್ಯಗ್ನಿಃ ॥

೫೯.೧) ಪ್ರವಾಃ ॥ ಯಹ್ವಂಪುರೂऽ೨೩ಣಾಮ್ । ವಿಶಾಂದ್ಧೇವಯತಾऽ೨೩ಇನಾಮ್ । ಅಗ್ನಿಜ್ಸೂಕ್ತೇಭಿರ್ವಚೋಭಿರ್ವೃಣೇಮಾऽ೨೩ಹಾಇ ॥ ಯಾಜ್ಸಾऽ೨ಮಾಇದಾऽ೨ನ್ ॥ ಯಇನ್ಧತೇ । ಇಡಾऽ೨೩ಭಾऽ೩೪೩ । ಓऽ೨೩೪೫ಇ ॥ ಡಾ ॥

ದೀ - ೭ । ಪ - ೯ । ಮಾ - ೯ । ಝೋ । ೨೮ ॥ ೯೮ ॥

ಹೇ ಋತ್ವಿಗ್ಯಜಮಾನಾಃ **ದೇವಯತೀನಾಂ**, ದೇವಾನ್ ಕಾಮಯಮಾನಾನಾಂ **ಪುರೂಣಾಂ** ಬಹೂನಾಂ **ವಿಶಾಂ** ಪ್ರಜಾರೂಪಾಣಾಂ ವಃ ಯುಷ್ಮಾಕಮನು ಗ್ರಹಾರ್ಥಂ **ಯಹ್ವಂ** ಮಹಾನ್ತಮಗ್ನಿಂ ಸೂಕ್ತೇಭಿಃ ಸೂಕ್ತರೂಪೈಃ ವಚೋಭಿಃ ವಾಕ್ಯೈಃ ವೃಣೇಮಹೇ । **ಅನ್ಯೇ** ಇತ್ ಅನ್ಯೇಪ್ಯೃಷಯಃ **ಯಮ್** ಏನಮಗ್ನಿಂ **ಸಮಿಂಧತೇ** ಸಮ್ಯಗ್ದೀಪಯಂತಿ ತಮಗ್ನಿಮಿತಿ ಪೂರ್ವಾನ್ವಯಃ । ವಚೋಭಿರ್ವೃಣೀಮಹೇ ಇತಿ । ಅನ್ಯ ಇನ್ಧತಮ್ ಇತಿ ಚ ಛನ್ದೋಗಾಃ । ವಚೋಭಿರೀಮಹೇ ಇತಿ ಅನ್ಯ ಈಳ್ಪತೇ ಇತಿ ಚ ಬಹ್ವೃಚಾಃ ॥

**ಪುರೂಣಾಮ್** - ಬಹಳ, ಅನೇಕ, **ಅಗ್ನಿಂ** - ಪರಮಾತ್ಮನನ್ನು, ಅಗ್ನಿಯನ್ನು, **ದೇವಯತೀನಾಮ್** - ದೇವತೆಗಳಿಗೆ ಶರಣಾಗಿರುವವರನ್ನು, ದೇವತ್ವ ಪಡೆದವರನ್ನು, ಯಜ್ಞಪ್ರಿಯರನ್ನು, ಭಕ್ತರನ್ನು, ಉಪಾಸಕರನ್ನು, **ವಿಶಾಮ್** - ಪ್ರಜೆಗಳ ಹಿತಕ್ಕಾಗಿ, **ಯಹ್ವಂ** - ಮಹಾಭಕ್ತಿಯನ್ನು, ಅನುಗ್ರಹವನ್ನು ದೊರಕಿಸಿ ಕೊಡುವ, **ಸೂಕ್ತೇಭಿಃ** - ವೈದಿಕ ಸೂಕ್ತ ಸ್ತೋತ್ರಗಳಿಂದ, **ವಚೋಭಿಃ** - ವೇದವಾಕ್ಯಗಳಿಂದ, **ಪ್ರ-ವೃಣೀಮಹೇ** - ವರಿಸುವೆವು, ವರ್ಣಿಸುವೆವು, ಭಜಿಸುವೆವು, ಆರಾಧಿಸುವೆವು, **ಯಮ್** - ಯಾವ ಅಗ್ನಿಯನ್ನು, **ಅನ್ಯೇ ಇತ್** - ಅನ್ಯಜನರೂ, **ಸಮಿನ್ಧತೇ** - ಚೆನ್ನಾಗಿ ಪ್ರಜ್ವಲಿಸುವರೋ, **ಸಮ್+ಇಂದ್ಧತೆ** - ಚೆನ್ನಾಗಿ ಧ್ಯಾನಿಸುತ್ತಾರೆಯೋ, **ಇನ್ಧತೇ** - ಹೃದಯದಲ್ಲಿ ಪ್ರಕಾಶಿಸಿಕೊಳ್ಳುತ್ತಾರೆ.

೪೩೦

ಕರ್ಮನಿರತರು ದೇವತೆಗಳಿಗೆ ಶರಣಾಗುವ ಉಪಾಸಕರಾದ ಮಹಾಜನರು ಭಕ್ತಿಯನ್ನೂ ಅನುಗ್ರಹವನ್ನೂ ಪಡೆದುಕೊಳ್ಳಲು ಅನುಕೂಲವಾಗುವಂತೆ ಮಹಾತ್ಮನಾದ ಅಗ್ನಿಯನ್ನು ವೈದಿಕ ಸೂಕ್ತಗಳಿಂದಲೂ ವೇದವಾಕ್ಯಗಳಿಂದಲೂ ದೀಪ್ತಗೊಳಿಸಿ ಆರಾಧಿಸುತ್ತಾರೆ. ಇದರಂತೆಯೇ ಅನ್ಯರೂ ಸಹ ಧ್ಯಾನೋಪಾಸನೆಗಳಿಂದ ತಮ್ಮ ಹೃದಯದಲ್ಲಿ ಭಗವಂತನನ್ನು ಪ್ರಕಾಶಗೊಳಿಸಿಕೊಳ್ಳುತ್ತಾರೆ.

ಮನುಜರಲ್ಲಿ ಭಗವದ್ವಿಭೂತಿಯನು ತುಂಬಿಕೊಡುವ ದೇವ!
ನಿನ್ನೀ ಮಹಿಮೆಯ ವರ್ಣನೆಯಂ ನಾವೆಸಗುತಿರುವೆವೀಗ !
ವೇದಮಂತ್ರಗಳ ಮಾಧ್ಯಮದಿಂದಂ; ಇದನೆ ಮುನ್ನ ಮುನಿಗಳ್
ಪರಿಪರಿಯಾಗಿ ನಿರೂಪಿಸಿದರಲಾ ಪೂರ್ವಸೂರಿವರರು ॥

## ಋಕ್ - ೬೦

ಉತ್ಕಲಃ ಕಾತ್ಯಃ ॥ ಬೃಹತ್ಯಗ್ನಿಃ ॥

೩ ೨ ೩ ೨ ೩ ೨ ೩ ೨ ೩ ೧ ೨೦
**ಅಯಮಗ್ನಿಃ ಸುವೀರ್ಯಸ್ಯೇಶೇ ಹಿ ಸೌಭಗಸ್ಯ ।**

೩ ೧ ೨ ೩ ೨ ೩ ೧ ೨ ೩ ೧ ೨ ೩ ೧ ೨
**ರಾಯ ಈಶೇ ಸ್ವಪತ್ಯಸ್ಯ ಗೋಮತ ಈಶೇ ವೃತ್ರಹಥಾನಾಮ್ ॥**

೩ ೨ ೩ ೨ ೩ ೧ ೨ ೩ ೧ ೨೦ ೧ ೨೦ ೧ ೨೦
**ಅಯಮ್ - ಅಗ್ನಿಃ - ಸುವೀರ್ಯಸ್ಯ - ಸು - ವೀರ್ಯಸ್ಯ । ಈಶೇ - ಹಿ - ಸೌಭಗಸ್ಯ -**

೩ ೨ ೩ ೧ ೨ ೩ ೧ ೨ ೧ ೨೦
**ಸೌ - ಭಗಸ್ಯ ॥ ರಾಯಃ - ಈಶೇ - ಸ್ವಪತ್ಯಸ್ಯ - ಸು - ಅಪತ್ಯಸ್ಯ - ಗೋಮತಃ ।**

೧ ೨೦ ೩ ೧ ೨ ೩ ೧ ೨೦
**ಈಶೇ - ವೃತ್ರಹಥಾನಾಮ್ - ವೃತ್ರ - ಹಥಾನಾಮ್ ॥** *೬.೬೦ ॥*

ದೋಹಃ ಸಾಮ ॥ ದೋಹೋ ಬೃಹತ್ಯಗ್ನಿಃ ॥

೬೦.೧. ಅಯಮಗ್ನಿಃಸುವೀರ್ಯಸ್ಯಹಾಉ ॥ ಆಇಶೇಹಿಸೌಭಗಸ್ಯ । ಹೋವಾऽಇಹಾಇ । ರಾಯಈಶೇಸ್ವಪತ್ಯ । ಸ್ಯಾಗೋऽ೧ಮಾತಾऽ೨ಇಃ । ಹೋವಾऽಇಹಾಇ ॥ ಈಶೇಹಾऽ೨ಇಇವೃऽಇ । ಹೋವಾऽಇಹಾ ॥ ತ್ರಾಹಥಾನಾಮ್ । ಇಡಾऽ೨ಇಭಾऽಇಳಇ । ಓऽ೨ಇಳಶಇ ॥ ಡಾ ॥ ದೀ - ೧೦ । ಪ - ೧೨ । ಮಾ - ೯ । ಪ್ಪೋ । ೨೯ । ೯೯ ॥

**ಅಯಂ** ಯಜನೀಯತ್ವೇನಾಂಗುಲ್ಯಾ ನಿರ್ದಿಶ್ಯಮಾನೋऽಗ್ನಿಃ **ಸುವೀರ್ಯಸ್ಯ** ಶೋಭನಸಾಮರ್ಥ್ಯೋಪೇತಸ್ಯ **ಸೌಭಗಸ್ಯ** ತ್ವಂ **ಈಶೇ**ಹಿ ಈಷ್ಟೇ ಖಲು! ಈಶ್ವರೋಭವಸಿ ಸರ್ವಸ್ಯ ಬಲಾರೋಗ್ಯ ಹೇತುತಯಾ ಸೌಭಾಗ್ಯಕಾರಿತ್ವಾತ್ ತಥಾ **ಗೋಮತಃ** ಗವಾದಿ ಪಶುಯುಕ್ತಸ್ಯ **ಸ್ವಪತ್ಯಸ್ಯ** ಶೋಭನಾಪತ್ಯಸ್ಯ **ರಾಯಃ** ಧನಸ್ಯ **ಈಶೇ** ಈಷ್ಟೇ **ಪುತ್ರ**ಪಶ್ವಾದ್ಯುದ್ದೇಶೇನ ಕ್ರಿಯಮಾಣಕರ್ಮಫಲ ಸಂಪಾದಕ ತ್ವೇನ ತತ್ಸ್ವಾಮಿ ತ್ವಾತ್ । ತಥಾ ಏವಂಭೂತೋऽಗ್ನಿಃ **ವೃತ್ರಹಥಾನಾಂ** ಹನನಂ ಹಥಃ ಶತ್ರುಭೂತಪಾಪವಿನಾಶಾನಾಮಪಿ **ಈಶೇ** ತ್ವಯಿ ಸಮರ್ಪಿತ ಕರ್ಮಣಾಮಸ್ಮಾಕಂ ತ್ವತ್ಪ್ರಸಾದಾತ್ ಪಾಪಕ್ಷಯೋಭವತೀತಿ ತಸ್ಯಾಪಿ ಸ್ವಾಮೀ । ಈಶೇ ಇತಿ ಈಶೇಮಹೇ ಇತಿ ಚ ಪಾಠೌ ॥

**ಅಯಮಗ್ನಿಃ** - ಯಜ್ಞದ ಈ ಅಗ್ನಿಯು, **ಸುವೀರ್ಯಸ್ಯ** - ಉತ್ತಮ ಪರಾಕ್ರಮ ಸಾಮರ್ಥ್ಯಗಳ, **ಸೌಭಗಸ್ಯ** - ಒಳ್ಳೆಯ ಭಾಗ್ಯದ, **ಈಶೇ** - ಅಧಿಕಾರಿ, ಅಧಿಷ್ಠಾತ, ಸ್ವಾಮಿ ಒಡೆಯ, **ರಾಯಃ** - ಬಹಳ ಧನದ, **ಸ್ವಪತ್ಯಸ್ಯ** - ಸುಂದರ ಪುತ್ರಪೌತ್ರಾದಿ ಸಂತಾನದ ಸದಾಚಾರ ಸಂಯಮಗಳ ಒಡೆಯನಾದ, **ಗೋಮತಃ** - ಗೋಸಂಪತ್ತುಳ್ಳ, **ವೃತ್ರಹಥಾ ನಾಮ್** - ಶತ್ರುಭೂತವಾದ ರೋಗ ಪಾಪಾದಿಗಳ ಒಡೆಯನಾದ, ವೃತ್ರಾಸುರನನ್ನು ಸಂಹರಿಸಿದವನು.

ಯಜ್ಞದ ಈ ಸ್ವಪ್ರಕಾಶನಾದ ಅಗ್ನಿಯು ಮಹಾಸಮರ್ಥನೂ ಬಹು ಪರಾಕ್ರಮಿಯೂ ಸೌಭಾಗ್ಯದ ಒಡೆಯನೂ, ಆಯುರಾರೋಗ್ಯ ಬಲಸಂವರ್ಧಕನೂ ಪುತ್ರ ಪೌತ್ರ ಐಶ್ವರ್ಯ ಪಶುಸಂಪತ್ತುಗಳನ್ನು ಅನುಗ್ರಹಿಸುವವನೂ ಶತ್ರುಭೂತವಾದ ಪಾಪ ಹಾಗೂ ರೋಗಗಳ ನಿವಾರಕನೂ ಕರ್ಮಫಲದಾತೃವೂ ಆಗಿರುವುದರಿಂದ ನಮ್ಮ ವಾಂಛಿತ ಫಲಗಳನ್ನು ಅನುಗ್ರಹಿಸಿ ರೋಗಪಾಪಾದಿಗಳನ್ನು ನಿವಾರಿಸಲಿ.

*ಸಂಪದಗಳ ಪತಿ! ಪುರುಷಾರ್ಥದ ಗತಿ! ಶಕ್ತಿಯುಕ್ತಿಸುಮತಿ!*
*ಗೋಧನ-ಸಂತಾನಾದಿಗಳೆಲ್ಲಂ ನಿನ್ನ ವಶದೊಳಿಹುವು।*
*ನಮ್ಮನವಿದ್ಯಾಬಂಧದೊಳಿರಿಸುವ ದುಷ್ಟಸಂಘಮಂ ನೀಂ*
*ದಮಿಸಯ್! ಮೋಕ್ಷನಿದಾನದೇವರೊಳಗಗ್ರಗಣ್ಯ ನೀನಯ್!*

## ಋಕ್ - ೬೧

ವಸಿಷ್ಠೋ ಮೈತ್ರಾವರುಣಿಃ ॥ ಬೃಹತ್ಯಗ್ನಿಃ ॥

೧ ೨ ೩ ೧ ೨ ೩ ೧ ೨ರ ೩ ೨
**ತ್ವಮಗ್ನೇ ಗೃಹಪತಿಸ್ತ್ವಂ ಹೋತಾ ನೋ ಅಧ್ವರೇ ।**

೧ ೨ರ ೩ ೧ ೨ ೩ ೨ ೩ ೧ ೨ ೩ ೧ ೨
**ತ್ವಂ ಪೋತಾ ವಿಶ್ವವಾರ ಪ್ರಚೇತಾ ಯಕ್ಷಿ ಯಾಸಿ ಚ ವಾರ್ಯಮ್ ॥**

೨ ೩ ೧ ೨ ೩ ೨ ೩ ೨ ೧ ೨ರ ೩ ೨
ತ್ವಮ್ - ಅಗ್ನೇ - ಗೃಹಪತಿಃ - ಗೃಹ - ಪತಿಃ । ತ್ವಮ್ - ಹೋತಾ - ನಃ - ಅಧ್ವರೇ ॥

೧ ೨ರ ೩ ೧ ೨ರ ೩
ತ್ವಮ್ - ಪೋತಾ - ವಿಶ್ವವಾರ - ವಿಶ್ವ - ವಾರ - ಪ್ರಚೇತಾಃ - ಪ್ರ - ಚೇತಾಃ ।

೧ ೨ರ ೧ ೨ರ ೩ ೧ ೨ರ
ಯಕ್ಷಿ - ಯಾಸಿ - ಚ - ವಾರ್ಯಮ್ ॥ ೭.೬೧ ॥

